ಎಪ್ರಿಲ್ 1992 ರೂ. 5/-

# ತುಷಾರ



ಯುಗಾದಿ ವಿಶೇಷಾಂಕ

ನನ್ನೂರು ನನ್ನ ಜನ

ದಕ್ಷಿಣ ಕನ್ನಡ ಜಿಲ್ಲೆ

ಪ್ರಿಯ 'ತುಷಾರ' ಓದುಗರಿಗೆ ನಮಸ್ಕಾರ.

ನಿಮಗೆಲ್ಲರಿಗೂ ಯುಗಾದಿ ಶುಭಾಶಯಗಳು. ನೂತನ ಸಂವತ್ಸರ ನಿಮಗೆ—ನಿಮ್ಮ ಕುಟುಂಬ ವರ್ಗದವರಿಗೆಲ್ಲ ಒಳ್ಳೆಯದು ಮಾಡಲಿ ಎಂದು ಹಾರೈಸುತ್ತೇನೆ.

1973 ಎಪ್ರಿಲ್ ಯುಗಾದಿಯಂದು ಪ್ರಕಟಣೆ ಮೊದಲು ಮಾಡಿದ 'ತುಷಾರ'ಕ್ಕೆ ಈಗ ಇಪ್ಪತ್ತನೆಯ ವರ್ಷ ಪ್ರಾರಂಭವಾಗುತ್ತದೆ. ಪ್ರಿಯ ಓದುಗರ ಮತ್ತು ಆತ್ಮೀಯ ಏಜೆಂಟ್ ಬಾಂಧವರ ಬೆಂಬಲದಿಂದ ಈ ನಿಮ್ಮ ಪತ್ರಿಕೆ ಎರಡು ದಶಕಗಳ ಸಾರ್ಥಕ ಸೇವೆಯ ಘಟ್ಟ ತಲುಪಿದೆ.

ಈ ಇಪ್ಪತ್ತು ವರ್ಷಗಳ 'ತುಷಾರ' ಸಂಚಿಕೆಗಳನ್ನು ತಿರುವಿ ಹಾಕಿದಾಗ ಓದುಗರಿಗೆ ಹೆಚ್ಚು ಹೆಚ್ಚು ಹೊಸ ಓದನ್ನು ಅರ್ಪಿಸಬೇಕು ಎಂದು ನಾವು ಕೆಲಸ ಮಾಡಿರುವುದು ಕಾಣುತ್ತದೆ. ಪ್ರಾರಂಭ ವರ್ಷಗಳಲ್ಲಿ ಅತಿರಥ—ಮಹಾರಥ ಕನ್ನಡ ಸಾಹಿತಿಗಳು 'ತುಷಾರ'ಕ್ಕಾಗಿ ಕಥೆ—ಕಾದಂಬರಿ—ಕವನ—ಲೇಖನಗಳನ್ನು ಬರೆದಿದ್ದಾರೆ. 'ತುಷಾರ'ದಲ್ಲಿ ಪ್ರಕಟವಾದ ಕಥೆ—ಕಾದಂಬರಿಗಳು ಸುಪ್ರಸಿದ್ಧ ಸಾಹಿತ್ಯ ಕೃತಿಗಳಾಗಿ ಸಾಹಿತ್ಯ ಅಕೆಡೆಮಿಯ ಮತ್ತು ಇತರ ಪ್ರಶಸ್ತಿಗಳನ್ನು ಗಳಿಸಿವೆ. ಅನೇಕ ಉದಯೋನ್ಮುಖರು 'ತುಷಾರ'ದಿಂದ ಬೆಳಕಿಗೆ ಬಂದು ಬೆಳೆದಿದ್ದಾರೆ.

'ತುಷಾರ'—ಓದುಗರಿಗಾಗಿ ವಿಧ ವಿಧ ಪ್ರಯೋಗಗಳನ್ನು ಮಾಡುತ್ತಲೇ ಬಂದಿದೆ. ಗೌರವ ಸಂಪಾದಕರ ವಿಶೇಷ ಸಂಚಿಕೆಗಳು, ಋತು ವಿಶೇಷಾಂಕಗಳು, ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ವಿಶೇಷ ಸಂಚಿಕೆಗಳು, ಸಾಹಿತಿ ಬದುಕು—ಬರೆಹ, ನೆನಪು ಸಿಹಿ-ಕಹಿ ಇವೆಲ್ಲ 'ತುಷಾರ'ಕ್ಕೆ ಗೌರವ ತಂದಿದೆ. ಓದುಗರನ್ನು ಇಮ್ಮಡಿಗೊಳಿಸಿದೆ.

ಪ್ರತಿ ಸಂಚಿಕೆಯನ್ನೂ ವಿಶೇಷಗೊಳಿಸುವ 'ತುಷಾರ'ದ ಪ್ರಯತ್ನವನ್ನು ಯಾವಾಗಲೂ ಜಾರಿಯಲ್ಲಿಟ್ಟಿರುತ್ತೇವೆ. ಪುಟ ಪುಟಗಳಲ್ಲೂ ಹೊಸತನ ಕಾಣಿಸಲು ಪ್ರಯತ್ನಿಸುತ್ತಿರುತ್ತೇವೆ. ನಮ್ಮೆಲ್ಲ ಕನಸುಗಳಿಗೂ ನಿಮ್ಮ ಬೆಂಬಲ ಯಾವಾಗಲೂ ಇರುತ್ತದೆ ಎಂದು ನಂಬಿದ್ದೇನೆ.

ಇಪ್ಪತ್ತರ ಘಟ್ಟ ತಲುಪಿರುವುದನ್ನು ಸಾರ್ಥಕವಾಗಿ, ಸಂಭ್ರಮದಿಂದ ಆಚರಿಸಲು 'ತುಷಾರ' ಬಳಗ ಬಯಸಿದೆ.

ನಿಮಗೆಲ್ಲ ಶುಭವಾಗಲಿ.

— ಸಂಪಾದಕ


*ಸಂಪಾದಕ*
ಟಿ. ಸತೀಶ್ ಯು. ಪೈ

*ಮುದ್ರಣ*
ಟಿ. ಸತೀಶ್ ಯು. ಪೈ
ಉದಯವಾಣಿ ಪ್ರೆಸ್
ನಿರ್ವಹಣೆ: ಪಿ. ಭಾಸ್ಕರ್ ರಾವ್

*ಪ್ರಕಾಶನ*
ಮಣಿಪಾಲ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್ ಲಿ.,
ಉದಯವಾಣಿ ಬಿಲ್ಡಿಂಗ್, ಮಣಿಪಾಲ—576 119

*ಸಹಾಯಕ ಸಂಪಾದಕ*
'ಚಿರಂಜೀವಿ'

*ಬೆಂಗಳೂರು ಕಚೇರಿ ವಿಳಾಸ:*
ತುಷಾರ
ಎನ್. 201, ನಾರ್ಥ್ ಬ್ಲಾಕ್, ಫ್ರಂಟ್ ವಿಂಗ್
ಮಣಿಪಾಲ ಸೆಂಟರ್,
47, ಡಿಕನ್‌ಸನ್ ರಸ್ತೆ, ಬೆಂಗಳೂರು—560 042

ಫೋನ್: 569367 ಮತ್ತು 569458

ತುಷಾರ, ಪ್ರೆಸ್ ಕಾರ್ನರ್, ಮಣಿಪಾಲ—576 119

ಎಪ್ರಿಲ್ 1992
ಸಂಪುಟ: 20
ಸಂಚಿಕೆ: 1

# ಯುಗಾದಿ ವಿಶೇಷಾಂಕ

**ಕಥೆಗಳು:**



**ಕವನಗಳು:**



**ಹಾಸ್ಯ ಲೇಖನಗಳು:**



**ಶೋಕ್ ಧಾರಾವಾಹಿ – 4**



**ನಗೆ ಸೀರಿಯಲ್**

ವಿಶೇಷ

## ಸಮೀಕ್ಷೆ 1991ರ ಕೆಲವು ಉತ್ತಮ ಕನ್ನಡ ಕೃತಿಗಳು



ನನ್ನೂರು ನನ್ನ ಜನ





ಸ್ಥಿರ ಶೀರ್ಷಿಕೆಗಳು



– ಮುಖಪುಟ –

ಕೊಲ್ಲೂರು ಮೂಕಾಂಬಿಕೆ

ತಂಜಾವೂರು ಕಲೆ:

ಎಸ್. ದೊರೆಸ್ವಾಮಿ

ವರ್ಣಪಾರದರ್ಶಿಕೆ:

ಬಿ. ಎನ್. ರಾಜಶೇಖರ್

ಕಲೆ: ಟಿ. ಕೆ. ರಾವ್, ಹುಬ್ಳೀಕರ್

ಮೋನಪ್ಪ, ಶ್ಯಾಮ್, ಸಾವಿತ್ರಿ

ವಿನ್ಯಾಸ: ನಾಗರಾಜ್

# ನಿಮ್ಮ ಅನಿಸಿಕೆಗಳು

## ಹಾಸ್ಯ ವಿಶೇಷಗಳು:

- 'ದಿಲ್ಲಿಯಲ್ಲಿ ದಿಕ್ಪಾಪಾಲು' ಡಾ। ಎಚ್. ಕೆ. ರಂಗನಾಥ್ ಅವರ ನಗೆ ಕಾರಂಜಿ ಓದಿ ಹೊಟ್ಟೆ ಹುಣ್ಣಾಗುವಂತೆ ನಗಬೇಕಾಯಿತು. ಮನಮುಟ್ಟಿದ ಕಾರಂಜಿ.

  **– ಡಿ. ಕೊಟ್ರೇಶ್ ತಳವಾರ್, ಹರಪನಹಳ್ಳಿ**

- ಕ್ಯಾಪಿಟಲ್ ಪನಿಷ್‌ಮೆಂಟ್ ಓದುತ್ತ ನನ್ನ ಹೊಟ್ಟೆಗೆ ಪನಿಷ್‌ಮೆಂಟ್ ಕೊಟ್ಟಂತಾಯಿತು.

  **– ಹಂದನಕೆರೆ ಮಂಜು, ಐಚನಹಳ್ಳಿ**

- ದಿಲ್ಲಿಯಲ್ಲಿ ರಂಗಣ್ಣ ಅನುಭವಿಸಿದ ಕಷ್ಟಗಳು ಹಾಸ್ಯ ಲೇಪನದೊಂದಿಗೆ, ಅಲ್ಲಿನ ಸಮಸ್ಯೆಗಳಿಂದ ಆತ ತಪ್ಪಿಸಿಕೊಂಡು ತಾಯ್ನಾಡಿಗೆ ಮರಳಿದ್ದು ಅದೂ ಪ್ರಮೋಷನ್‌ನೊಂದಿಗೆ ಅಚ್ಚರಿ–ಸಮಾಧಾನ ತಂದಿತು. ಸಾಹಿತ್ಯ ಶೈಲಿ ಎಳೆಯಂತೆ ಮುನ್ನಡೆಸಿತು.

  **– ಪದ್ಮನಾಭ ಕುಂಟೋಜಿ, ಆಲಘಟ್ಟ**

- ಪ್ರಾಣೇಶ ಗುಡಿ ಅವರ 'ಹೆಂಡತಿಯೊಬ್ಬಳು ಮನೆಯೊಳಗಿರದಿದ್ದರೆ' ತೌರಿಗೆ ಹೆಂಡತಿ ಹೋದಾಗ ಗಂಡಂದಿರೆಲ್ಲರೂ ಪಡುವ ಕಷ್ಟದ ಕೈಪಿಡಿಯಾಗಿತ್ತು.

  **– ಕೆ. ಸತ್ಯಮೂರ್ತಿ, ಪೆರಮಾಚನಹಳ್ಳಿ**

- ಇನ್ನೂ ಮೂರ್ನಾಲ್ಕು ವರ್ಷಗಳಲ್ಲಿ ನನ್ನ ಭಾವಿ ಶ್ರೀಮತಿಗೆ ಇದೇ ರೀತಿ ಪತ್ರ ಬರೆಯಬೇಕೆಂದು ನಿರ್ಧರಿಸಿರುವೆ.

  **– ಲಕ್ಷ್ಮೀನಾರಾಯಣ್ ಎ. ಜಿ., ಮಂಡ್ಯ**

- ರಂಜನೀಯ ವಿಡಂಬನೆ.

  **– ಎ. ಜಿ. ಹಿರೇಮಠ, ದಾವಣಗೆರೆ**

- 'ಹೊಸ ರುಚಿಯೆಂಬ ಹಳೆ ಪಿಶಾಚಿ' ನಗು ಬರಿಸುವಲ್ಲಿ ಸಫಲವಾಯಿತು.

  **– ಎಲ್. ವಿ. ಕುಮಾರಸ್ವಾಮಿ, ಜಗಳೂರು**

- 'ಕೂದಲು ಕಟ್' ಸ್ವಾರಸ್ಯ–ಅರ್ಥಪೂರ್ಣವಾಗಿದೆ.

  **– ಜಿ. ಮೋಹನದಾಸ್, ಕೊಡಗು ಜಿಲ್ಲೆ**

- ಸಮಯಪ್ರಜ್ಞೆಯುಳ್ಳ ಓರ್ವ ಶಿಕ್ಷಕಿಯ ಸ್ವ-ಅನುಭವವು ಇಂದಿನ ಶಾಲೆಗಳಲ್ಲಿಯ ವಸ್ತುಸ್ಥಿತಿಯ ಚಿತ್ರಣವೂ ಆಗಿರುವುದು ಕಟು ಸತ್ಯ.

  **– ಎಂ. ಎಂ. ಹೆಬ್ಬಾಳ, ಶಿರಹಟ್ಟಿ**

- ಹಾಸ್ಯ ಸಂಚಿಕೆ ಉತ್ತಮ ಮನರಂಜನೆ ನೀಡಿತು. ಸಾಹಿತ್ಯ ಪ್ರಪಂಚದಲ್ಲಿ ವಿವಿಧ ಪ್ರಯೋಗಗಳನ್ನು ಕೈಗೊಂಡ 'ತುಷಾರ' ಹೊಸ ಪ್ರಗತಿಯತ್ತ ಸಾಗಿದೆ.

  **– ಜಗದೇವಿ ಪದ್ಮನಾಭ, ಗುಲಬರ್ಗಾ**

- ಸಂಚಿಕೆ ಮನೆಮಂದಿಯನ್ನೆಲ್ಲ ಗೆದ್ದಿತು. ಬೆಲೆ ಹೆಚ್ಚಾದರೂ ತೊಂದರೆ ಇಲ್ಲ. ಹೀಗೇ ಬರಲಿ.

  **– ಸೀಕನಹಳ್ಳಿ ಪರಮೇಶ್, ದೇವಾಲದ ಕೆರೆ**

- ವ್ಯಂಗ್ಯ ಚಿತ್ರಗಳು–ಹಾಸ್ಯ ಲೇಖನಗಳು ಚೆನ್ನಾಗಿದ್ದವು. ಸಂಚಿಕೆಯ ವಿಶೇಷಗಳು ಪ್ರತಿ ತಿಂಗಳೂ 'ತುಷಾರ'ಕ್ಕಾಗಿ ಕಾಯುವಂತೆ ಮಾಡುತ್ತಿದೆ.

  **– ಎಲ್. ವಿ. ರಂಗನಾಥ್, ಜಗಳೂರು**

- ಏಳೂ ಹಾಸ್ಯಗಳು ನಮ್ಮನ್ನು ತಮ್ಮದೇ ಆದ ವಿಶೇಷ ಶೈಲಿಯಲ್ಲಿ ಹೊಟ್ಟೆ ಹುಣ್ಣಾಗಿಸಿದವು.

  **– ಶಂಕರ ಗೌಡ ಯ. ಪಾಟೀಲ**
  **– ಗೋಪಾಲ ಗೌಡ ಯ. ಪಾಟೀಲ, ಬಾದಾಮಿ**

- ಹಾಸ್ಯ ಲೋಕಕ್ಕೆ ಹೋದಂತಾಯಿತು. ನವಿರಾದ ನಗೆಬುಗ್ಗೆ ಚಿಮ್ಮಿಸುವ ಲೇಖನಗಳು ಮನಕ್ಕೆ ಮುದ ನೀಡಿದವು. ಪ್ರತಿ ವ್ಯಕ್ತಿಯಲ್ಲೂ ಹಾಸ್ಯ ಪ್ರಜ್ಞೆ ಮೂಡಿಸುವಲ್ಲಿ ಇಂಥ ಹಾಸ್ಯ ಸಂಚಿಕೆಗಳು ಸಹಕಾರಿಯಾಗಬಹುದು.

  **– ಪ್ರವೀಣ ಹೆಗಡೆ, ಬೆಂಗಳೂರು**

- ಮುಖಪುಟವೇ ನಗು ಬರಿಸಿತು. ನಿಜಕ್ಕೂ ಅದ್ಭುತ ಸಂಚಿಕೆ. 'ತುಷಾರ' ನನ್ನ ಜೀವ.

  **– ಶೇಖರ ಸಾಲ್ಯಾನ್, ಇಂದಿರಾ ನಗರ, ಹಳೆಯಂಗಡಿ**

- ಅರಿವು ಮೂಡಿಸುವ ಮುಖಪುಟ.

  **– ಕನಕಪ್ಪ ದೊಡ್ಡಮನಿ, ಹಿರೆಭೇರಗಿ (ರಾಯಚೂರು ಜಿಲ್ಲೆ)**

- ಇಡೀ ಸಂಚಿಕೆ ಉತ್ತಮವೆನಿಸಿತು ಎನ್ನುವುದರಲ್ಲಿ ಎರಡು ಮಾತಿಲ್ಲ.

  **– ರಾಣಿ ಎಂ. ಈ., ಮಿಕ್ಕೆರೆ (ಮಂಡ್ಯ)**

- ಯುಗಾದಿ ಸಂಚಿಕೆಯ ಮೂಲಕ ಕಹಿಯುಣ್ಣಿಸ ಹೊರಡುತ್ತೀರೇನೊ ಅಂದುಕೊಂಡದ್ದು, ಹಾಸ್ಯ ವಿಶೇಷಾಂಕ ನೋಡಿ, ನಗೆ ಕಾರಂಜಿ ಓದಿ, ಇಂಥವು ಇದ್ದರೆ ಒಂದು ರೂಪಾಯಿ ಕಹಿಯನ್ನು ಸಿಹಿಯಾಗಿ ಸ್ವೀಕರಿಸಬಲ್ಲೆ ಎನ್ನಿಸಿತು.

  **– ಹಿರಿಯೂರು ವೀ. ಕೃಷ್ಣಪ್ಪ ನಾಯಕ, ಬಗ್ಗನಾಡು (ಚಿತ್ರದುರ್ಗ ಜಿಲ್ಲೆ)**

## ನನ್ನೂರು – ನನ್ನ ಜನ:

- ಶಿವಮೊಗ್ಗ ಜಿಲ್ಲೆ ಸಚಿತ್ರ ಲೇಖನಗಳು ಅರ್ಥಪೂರ್ಣ–ಸಾರ್ಥಕ ಪ್ರಯತ್ನ. ಈಸೂರಿನ ಚಿರಂಜೀವಿಗಳ ಬಗ್ಗೆ ಸ್ಮರಿಸಬೇಕಾಗಿತ್ತು.

**– ನರಸಿಂಹಮೂರ್ತಿ, ಗುಬ್ಬಿ ಹೊಸಹಳ್ಳಿ**

- ನಿಜಕ್ಕೂ ನಮ್ಮೂರಿನ ಮಲೆನಾಡಿನ ಸೌಂದರ್ಯ, ಶಿಲ್ಪಕಲಾ ವೈಭವದ ಬಗ್ಗೆ ಓದುತ್ತ ಹೋದಂತೆ ನನ್ನ ಇರವನ್ನೇ ಮರೆತೆ. ನನ್ನೂರಿನ ಸೌಂದರ್ಯದ ಬಗ್ಗೆ ಎಲ್ಲರಿಗೂ ತಿಳಿಸುವ 'ತುಷಾರ'ಕ್ಕೆ ಧನ್ಯವಾದಗಳು.

**– ಉಷಾ ಚೇತನ ನಾರ್ವೇಕರ್, ಮಣಿಪಾಲ**

- ಖುಶಿ ಕೊಟ್ಟ, ಹತ್ತು ಹಲವು ವಿಶೇಷಗಳನ್ನು ಕಾಣಿಸಿದ ಲೇಖನಗಳು.

**– ಲಿಂಗಪ್ಪ ಎನ್., ಉಪ್ಪಿನಂಗಡಿ**

- ಶಿವಮೊಗ್ಗ ಜಿಲ್ಲೆ ಬಗ್ಗೆ ಓದುತ್ತಿದ್ದಾಗ ನಾವೇ ಅಲ್ಲಿಗೆ ಭೇಟಿ ಕೊಟ್ಟಿದ್ದೇವೇನೋ ಎನ್ನಿಸಿತು.

**– ನಾಗೇಂದ್ರಸ್ವಾಮಿ, ಅಂಕಹಳ್ಳಿ (ಗುಂಡ್ಲುಪೇಟೆ ತಾಲೂಕು)**

- ಐತಿಹಾಸಿಕ, ಪ್ರೇಕ್ಷಣೀಯ ಸ್ಥಳಗಳ, ಅಣೆಕಟ್ಟುಗಳ, ಸಮುದ್ರ–ನದಿಗಳ ಬಗ್ಗೆ ವಿವರಗಳ ಈ ಲೇಖನಮಾಲೆ ಅರ್ಥಪೂರ್ಣ.

**– ಎ. ಎಸ್. ಪಟ್ಟಣಶೆಟ್ಟಿ**
**– ಎಂ. ಸಿ. ಕಲ್ಯಾಣಿ/ಎಸ್. ಎನ್. ಕಲ್ಯಾಣಿ, ಬಿಜಾಪುರ ಜಿಲ್ಲೆ**

- ನಾಡು–ನುಡಿ ಪರಿಚಯ ಸೊಗಸಾಗಿ–ಅಚ್ಚುಕಟ್ಟಾಗಿ ಮೂಡಿದೆ.

**– ಜಿ. ಗೌರಿಶಂಕರ, ನ್ಯಾಮತಿ**

- ಹೊನ್ನಾಳಿಯ ಶ್ರೀ ರಾಘವೇಂದ್ರ ಮಠ ಮತ್ತು ಹತ್ತಿರದ ಬೃಂದಾವನಗಳು, ಸುರಭಿಪುರದ ಶ್ರೀ ರಂಗನಾಥಸ್ವಾಮಿ, ಸಾಗರದ ಶ್ರೀ ಗಣಾಧೀಶ ದೇವಾಲಯದ ಬಗ್ಗೆ ವಿವರಿಸಬೇಕಾಗಿತ್ತು.

**– ಎ. ಕೆ. ಅನಂತಮೂರ್ತಿ, ಬೆಂಗಳೂರು**

- ಹೊನ್ನಾಳಿಯ ಶ್ರೀ ತೀರ್ಥ ರಾಮೇಶ್ವರ ಪುಣ್ಯಕ್ಷೇತ್ರ ತಿಳಿಸಬೇಕಾಗಿತ್ತು.

**– ಹಳ್ಳಿ ಲಿಂಗರಾಜ್, ಬಳ್ಳಿಗನೂಡು**
**– ಎಸ್. ಶಾಂತ ವೀರಪ್ಪ, ಮಾದನ ಭಾವಿ**

- ಚೆನ್ನಗಿರಿ ತಾಲೂಕಿನ ಸೂಳೆಕೆರೆ (ಶಾಂತಿ ಸಾಗರ), ಚೆನ್ನಮ್ಮನ ಕೋಟೆ, ಮೌದ್ಗಲ್ ಆಂಜನೇಯ ದೇವಳ, ಸಂತೆಬೆನ್ನೂರು ಗ್ರಾಮದ ಐತಿಹಾಸಿಕ ಪುಷ್ಕರಿಣಿ ವಿಶೇಷ ಸ್ಥಳಗಳು ನೋಡಬೇಕಾದಂಥವು.

**– ಈ. ಎನ್. ತಿಪ್ಪೇಸ್ವಾಮಿ, ಹಿರೇಕೋಗಲೂರು**

- ಶ್ರೀ ಜೆ. ಎಚ್. ಪಟೇಲ್ ಅವರು ಜನತಾದಳದ ಮಹಾಕಾರ್ಯದರ್ಶಿಯಲ್ಲ, ರಾಜ್ಯ ವಿಭಾಗದ ಅಧ್ಯಕ್ಷರು.

**– ಎ. ಎಸ್. ನಟೇಶ ಉಡುಪ, ಬೂದು ಗುಂಪಾ(ಗ) ರಾಯಚೂರು ಜಿಲ್ಲೆ**

- ಬಾದಾಮಿ ಇರುವುದು ಬಿಜಾಪುರ ಜಿಲ್ಲೆಯಲ್ಲಿ ಎಂದು ಅನೇಕ ಓದುಗರು ತಿದ್ದುಪಡಿ ಸೂಚಿಸಿದ್ದಾರೆ. ವಂದನೆಗಳು.

## ಕಥೆಗಳು:

- ಶ್ರೀಪತಿ ಅವರ 'ಗುರುಗಳ ಮಹಿಮೆ' ತಾಯಿಯ ಸಂಕಟ–ಗುರುಗಳ ಬೆಂಬಲ ಪ್ರಧಾನ ಅಂಶವಾಗಿ ಬಂದಿದೆ.

**– ಕಲಾವತಿ ಟಿ. ಇ./ಆರ್. ಶಾರದ, ಒಡ್ಡಿನಕೊಪ್ಪ (ಶಿವಮೊಗ್ಗ)**

- ಶ್ರೀಪತಿ (ಎ.ಆರ್.ಕೃ.) ಅವರ ಬಗ್ಗೆ ಗುರು–ಗೌರವ–ಅಭಿಮಾನದ ಭಾವನೆಯನ್ನು ಕಥೆ ಒಡಮೂಡಿಸಿತು. ಪ್ರೊ। ಶೇಷಗಿರಿರಾಯರ ವಿಮರ್ಶೆ ಹಿಡಿಸಿತು.

**– ಎಸ್. ಕೆ. ಹೂಗಾರ್, ಕಾಲವಾಡ**



● ಎಸ್. ಎಸ್. ಚಿದಂಬರರಾವ್ ಕಥೆ 'ಭಕ್ತ' ಕುತೂಹಲಭರಿತವಾಗಿತ್ತು. ನಾಯಕ ಪಾತ್ರದ ಗುಣ ಮೆಚ್ಚುಗೆಯಾಯಿತು.

– **ಮುತ್ತಣ್ಣ ಫ. ಡೊಂಕಬಳ್ಳಿ, ಹೊಳಲಾಪುರ (ಧಾರವಾಡ ಜಿಲ್ಲೆ)**

● ಎಸ್. ಬಿ. ಪಟಗಾರ ಅವರ 'ಪ್ರವೃತ್ತಿ' ಕಥೆಯ ಪ್ರಕಾಶ ತೋರಿದ ಮಾನವೀಯತೆ ಎದುರು ಸಾಂಪ್ರದಾಯಿಕ ಕಾಠಿಣ್ಯ ಹೃದಯಗಳು ತಲೆಬಾಗುತ್ತವೆ.

– **ಮಾರುತಿ ದಾಸಣ್ಣವರ, ಮಧ್ಯಪ್ರದೇಶ**

● ಮಗನಿಗಾಗಿ ಕಷ್ಟಪಡುವ ತಂದೆ ತಾಯಿಗಳಿಗೆ ವೃದ್ಧಾಪ್ಯದಲ್ಲಿ ಆಸರೆಯಾಗದೆ ಹೆತ್ತವರನ್ನು ಪರೋಕ್ಷವಾಗಿ ಕೊಂದ ರಾಜನ ಬಗ್ಗೆ ಹೇಸಿಗೆಯಾಗುತ್ತದೆ.

– **ಸಾವಿತ್ರಿ ಕೆ. ಗೌಡ, ಗಂಗಾವತಿ ತಾಲೂಕು**

## ಕಂ. ಕ. ಜೂನಿಯರ್:

● ನಗಿಸುತ್ತಿದೆ, ನಲಿಯುತ್ತಿದ್ದೇನೆ.

– **ಕೆ. ಎಸ್. ಮಾರುತಿ, ಕೊರಟಗೆರೆ ತಾಲೂಕು**

– **ಅಶೋಕ್, ಸೂರಗೊಂಡ, ರಾಣೆಬೆನ್ನೂರು**

● ಜೂನಿಯರ್‌ಗೆ ಸರಕಾರೀ ಇಲಾಖೆಗಳಿಗೆ ಸಂದರ್ಶನಕ್ಕೆ ಹೋಗುವ ವಯಸ್ಸು ಮೀರಿದಂತಿದೆ.

– **ನ. ಸುರೇಶ, ಕಲ್ಕೆರೆ**

**(ಸೀನಿಯರ್ ಮಾಡಿದ ಮುದ್ದಿಗೆ ಜೂನಿಯರ್ ಹೀಗೆ ಅಡ್ಡಾದಿಡ್ಡಿ ಬೆಳೆದಿದ್ದಾನೆ ಎಂದು ಹತ್ತಿರದವರ ಅಂಬೋಣ – ಸಂಪಾದಕ)**

## ಶಾಲಿನಿ:

● ಗಂಡನಾಗುವವನು ಹೇಗಿರಬೇಕೆಂಬ ಪಲ್ಲವಿ ಮತ್ತು ಸುಮನ ಅವರ ಭಾವನೆಗಳು ಚೆನ್ನಾಗಿ ಮೂಡಿ ಬಂದಿವೆ (ಮೂರನೆ ಅಧ್ಯಾಯದಲ್ಲಿ).

– **ಡಿ. ರೋಜ, ಗುಡೇ ಕೋಟೆ**

● ಕೆ. ಟಿ. ಗಟ್ಟಿ ಅವರ 'ಪಾಲು' ಇನ್ನೂ ಕುತೂಹಲ ಹೆಚ್ಚಿಸಿದೆ.

– **ವೈ. ಸಿ. ಮೇಲಿನಮನಿ, ಕಾದರವಳ್ಳಿ (ಬೆಳಗಾವಿ ಜಿಲ್ಲೆ)**

## ಹಿರಿಯರ ಆಯ್ಕೆ ಕವನಗಳು:

● ವೇಣುಗೋಪಾಲ ಸೊರಬ ಆಯ್ಕೆಯ ಮೂರು ಕವನಗಳೂ ಶ್ರೇಷ್ಠ ಮಟ್ಟದಲ್ಲಿವೆ.

– **ನ. ನರಸಿಂಹಮೂರ್ತಿ, ಮೈಸೂರು**

● ಅರ್ಥಗರ್ಭಿತ ಕವಿತೆಗಳು. ಕೆ. ಎಸ್. ಶಾರದಾ ಅವರ 'ಮೂಕ ಸಾಕ್ಷಿ' ಕವಿತೆ ಅಸಹಾಯಕತೆಯ ಅರಣ್ಯರೋಧನವನ್ನು ಪ್ರತಿಬಿಂಬಿಸಿದೆ. ವಿಮರ್ಶಕ ಸೊರಬ ಅವರ ಆಯ್ಕೆ ತೂಕಬದ್ಧವಾಗಿದೆ.

– **ಪ್ರೊ। ಶಿವಕುಮಾರ ಕಲ್ಲೂರ, ಕಮ್ಮತ್ತಹಳ್ಳಿ (ಬಳ್ಳಾರಿ ಜಿಲ್ಲೆ)**

## ಪಂಚಕಜ್ಜಾಯ:

● ಭಾನುವಾರದ ದಿನ ಎಲ್ಲರೂ ಹಾಯಾಗಿದ್ದಾಗ ಒಂದು ಕ್ಷಣವೂ ಬಿಡುವಿಲ್ಲದೆ ದುಡಿಯುವ ಹೆಂಗಸರ ಪಾಡು ನೋಡಿ ಗಂಡಸಾಗಿ ನನಗೆ ಲಜ್ಜೆಯೆನಿಸಿತು.

– **ಎಸ್. ಎಲ್. ವಿ. ಅನಿಲ್, ಮುದಗಲ್ (ರಾಯಚೂರು ಜಿಲ್ಲೆ)**

● ಪ್ರತಿ ಭಾನುವಾರ ನಮ್ಮನೆಯಲ್ಲೆ ನಡೆಯುವ ಕಾರ್ಯಕ್ರಮದಂತಿತ್ತು. ಇದು ನಮ್ಮ ಮನೆಯ ಭಾನುವಾರದ 'ಟೈಂ ಟೇಬಲ್'.

– **ಎಚ್. ಎಸ್. ಅನಿಲ್‌ಕುಮಾರ್, ಶಿವಮೊಗ್ಗ**

● ಮಾಡುವಾಕೆ, ಪಾಡು ಪಟ್ಟರೂ ಬೇರೆಯವರಿಗೆ ತ್ರಾಸ ಕೊಡದೆ ಕೇವಲ ನೀಡುವುದರಲ್ಲೇ ತೃಪ್ತಿ ಕಾಣುವುದನ್ನು ಕಂಡಾಗ ಆಕೆಯ ಸಂಭಾವಿತತನ ಮೆಚ್ಚತಕ್ಕದ್ದೆ.

– **ಯು. ಸಿ. ಚಿಕ್ಕಣ್ಣ, ಸವದತ್ತಿ**

● 'ತುಷಾರ'ದಲ್ಲಿ ಪುಸ್ತಕ ಪರಿಚಯ ವಿಭಾಗವನ್ನು ಅನುಕರಣೀಯ ವಿಧಾನದಲ್ಲಿ ಆರಂಭಿಸುವ ಮೂಲಕ ಲೇಖಕನಾಗಿ ನಾನು ಬಹು ಕಾಲದಿಂದ ಕಾಣುತ್ತಿದ್ದ ಕನಸನ್ನು ನನಸಾಗಿಸಿದ್ದೀರಿ. ಧನ್ಯವಾದಗಳು.

– **ಕೆ. ಟಿ. ಗಟ್ಟಿ, ಉಜಿರೆ (ದ.ಕ.)**

● ಪುಸ್ತಕಗಳು, ಪುಸ್ತಕಗಳು ತುಂಬಾ ಉಪಯುಕ್ತ. ಎಂದಿಗೂ ನಿಲ್ಲಿಸಬೇಡಿ.

– **ಕೆ. ಗುರುಪ್ರಸಾದ್ ಪ್ರಭು, ಮಂಗಳೂರು**

● ಪುಸ್ತಕಗಳು ಸಾಹಿತ್ಯದ ಸಂಕೇತ, ಜೀವನದ ಅವಿಭಾಜ್ಯ ಅಂಗ. ಕನ್ನಡನಾಡಿನಲ್ಲೆಲ್ಲ ಪ್ರಕಟವಾಗುವ ವಿವಿಧ ಬಗೆಯ ಪುಸ್ತಕಗಳ ಬಗ್ಗೆ ಅರಿಯುವ ಸದವಕಾಶ ಇದು. ನನ್ನ ಮನಗೆದ್ದ ಅಂಕಣ. ಬೆಲೆ ಹೆಚ್ಚಳವನ್ನು ಸಂತೋಷದಿಂದ ಒಪ್ಪಿ ಸಹಕರಿಸುವೆ.

– **ಬಸವರಾಜ ತೋಟದ, ಶಾಖಾಪುರ**

# ಜಾನಕಿ

● ಡಾ| ಕೆ. ಎಸ್. ನರಸಿಂಹಸ್ವಾಮಿ

ಶಾಂತಿ ಎಲ್ಲಿ ಬಂತು, ನಮ್ಮ
ಜಾನಕಿ ಬರುವನಕ?

ಪಂಜರದ ಗಿಳಿ ಬಯಸುವ ಶಾಂತಿ,
ಅಲೆಗಳ ಮೀನಿನ ನಿರ್ಮಲ ಶಾಂತಿ,
ಬೆಟ್ಟದ ಮೇಲಿನ ಮಂಜಿನ ಶಾಂತಿ,
ಕಾಡಿನ ಕೊಳಲಿನ ದನಿಗಳ ಶಾಂತಿ–

ಶಾಂತಿ ಎಲ್ಲಿ ಬಂತು, ನಮ್ಮ
ಜಾನಕಿ ಬರುವನಕ?

ಹಾಲಿನ ಬಣ್ಣದ ಹಸುಗಳ ಶಾಂತಿ,
ಜಿಂಕೆಯ ಕಣ್ಣಿನ ಬೆಳಕಿನ ಶಾಂತಿ
ತೊರೆಗಳ ಹನಿಗಳ ತಂಪಿನ ಶಾಂತಿ
ಕೆಂದಾವರೆಗಳ ದಳಗಳ ಶಾಂತಿ,–

ಶಾಂತಿ ಎಲ್ಲಿ ಬಂತು, ನಮ್ಮ
ಜಾನಕಿ ಬರುವನಕ?

ಹೆಣ್ಣಿನ ಹೆರಳಿನ ಹೂಗಳ ಶಾಂತಿ,
ಬೆಳ್ಳಿಯ ನಂದಾದೀಪದ ಶಾಂತಿ,
ಮಕ್ಕಳು ನಕ್ಕರೆ ಹಬ್ಬುವ ಶಾಂತಿ,
ಸುಖ ಸಂತೋಷಗಳೊಲವಿನ ಶಾಂತಿ –

ಎಲ್ಲಿ ಬಂತು ಶಾಂತಿ, ನಮ್ಮ
ಜಾನಕಿ ಬರುವನಕ?

ಹುಣ್ಣಿಮೆಯಿರುಳಿನ ನಿರುಪಮ ಶಾಂತಿ,
ತಣ್ಣನೆ ಗಾಳಿಯ ಬೆರಳಿನ ಶಾಂತಿ.

ಮುಗಿಲಲಿ ಮೆರೆಯುವ ತಾರೆಯ ಶಾಂತಿ,
ದಡಕ್ಕೆ ಕಟ್ಟಿದ ದೋಣಿಯ ಶಾಂತಿ,–

ಶಾಂತಿ ಎಲ್ಲಿ ಬಂತು, ನಮ್ಮ
ಜಾನಕಿ ಬರುವನಕ.



ಫೋಟೋ: ಯಜ್ಞ

## ಕನ್ನಡ ಕಥಾಲೋಕ

# ಧನ್ವಂತರಿಯ ಚಿಕಿತ್ಸೆ

● ಡಾ। ಕುವೆಂಪು

**ಋ**ಷಿ ವಿಶ್ವಾಮಿತ್ರನು ನಂದನವನದ ಒಂದು ಮೂಲೆಯಲ್ಲಿ, ಕಲ್ಪವೃಕ್ಷದಿಂದ ಸ್ವಲ್ಪ ದೂರ ವಾಗಿದ್ದು ಅನಾಮಧೇಯವಾಗಿದ್ದ ಮರವೊಂದರ ನೆರಳಿನಲ್ಲಿ, ಹಿಂದಕ್ಕೂ ಮುಂದಕ್ಕೂ ಶತಪಥ ತಿರುಗುತ್ತಿದ್ದನು. ನಿಯತೇಂದ್ರಿಯನಾಗಿದ್ದರೂ ಕೂಡ ಬಯಸಿದೊಡನೆ ಬಯಕೆಗಳನ್ನೆಲ್ಲ ನೀಡು ವಂತಹ ಮರದ ನೆರಳಿನಲ್ಲಿರುವುದು ಅಪಾಯ ಕರವೆಂದು ಅವನಿಗೆ ಅನುಭವದಿಂದ ಗೊತ್ತಾ ಗಿತ್ತು. ಮನಸ್ಸಿನಲ್ಲಿ ಮಿಂಚುವ ಭಾವಚಿಂತಾ ಪೇಕ್ಷೆಗಳೆಲ್ಲ—ಒಳ್ಳೆಯದು ಕೆಟ್ಟದ್ದು, ಅನುಕೂಲ ವಾದದ್ದು ಪ್ರತಿಕೂಲವಾದದ್ದು—ವಾಸ್ತವವಾಗು ವುದಾದರೆ ಗತಿ? ರಾಜರ್ಷಿಯ ಪಟ್ಟದಿಂದ ಬ್ರಹ್ಮರ್ಷಿಯ ಪಟ್ಟಕ್ಕೆ ಏರಿದ್ದರೂ ಆತನು ತನ್ನ ಚಿತ್ತದ ಸಾತ್ವಿಕತೆಯ ವಿಷಯದಲ್ಲಿ ಅತಿ ವಿಶ್ವಾಸ ವಿಟ್ಟುಕೊಳ್ಳುವಷ್ಟು ಅಹಂಕಾರಿಯಾಗಿರಲಿಲ್ಲ.

ವಿಶ್ವಾಮಿತ್ರನ ಮನಸ್ಸು ಗಂಭೀರ ಚಿಂತಾ ಮಗ್ನವಾಗಿತ್ತು; ಹಾಗೂ ಕಿಂಚಿದುದ್ವಿಗ್ನವಾಗಿತ್ತು. ದೂರದಲ್ಲಿ ಆಮೋದ ಪ್ರಮೋದಗಳಲ್ಲಿ ಅದ್ದಿ ಮೆರೆಯುತ್ತಿದ್ದ ದೇವವಿಲಾಸಿಗಳೂ ವಿಲಾಸಿನಿ ಯರೂ ಯಾವ ಕಾರಣಕ್ಕಾಗಿಯೊ ಗಹಗಹಿಸಿ ನಕ್ಕಾಗೊಮ್ಮೆ ಋಷಿ ತಲೆಯೆತ್ತಿ ನೋಡಿದನು. ಹುಬ್ಬು ಗಂಟು ಹಾಕಿ, ತುಟಿ ಕಚ್ಚಿಕೊಂಡು ಕ್ರುದ್ಧನಾದನು: ಕೋಟ್ಯಂತರ ಕಾಮನಬಿಲ್ಲುಗಳು ರಾಸಲೀಲೆಯಲ್ಲಿ ತೊಡಗಿದ್ದಂತೆ, ಮೆದುಗಾಳಿಗೆ ತಲೆದೂಗಿ ಶೋಭಿಸುತ್ತಿದ್ದು ಕಂಪಿಡಿದು ಹೂವು ತುಂಬಿದ್ದ ತರುಲತೆಗಳ ಮಧ್ಯೆ ರಂಭೆ, ಊರ್ವಶಿ, ತಿಲೋತ್ತಮೆ, ಘೃತಾಚಿ, ಮೇನಕೆ ಮೊದಲಾದ ಅಚ್ಚರಸಿಯರೊಡನೆ ಕರಾಲಿಂಗನ ವಿನ್ಯಾಸದಿಂದ ನರ್ತಿಸಿ ಹಾಡುತ್ತಿದ್ದ ಇಂದ್ರಾದಿ ದೇವತೆಗಳನ್ನು ನೋಡಿ ಸಂಯಮಿಯೂ ವೈರಾಗಿಯೂ ಆಗಿದ್ದ ವಿಶ್ವಾಮಿತ್ರನಿಗೆ ಕನಲಿಕೆಯಾಯಿತು. ಆ ಕನಲ್ಕೆ



ಯಲ್ಲಿ ಕರುಬಿನ ನೆರಳೂ ಇದ್ದಿರಬಹುದು. ಅದರಲ್ಲಿಯೂ ಮೇನಕೆಯನ್ನು ನೋಡಿ ಮಹಾ ರೋಷ ಉಂಟಾಯಿತು. ವಿಶ್ವವರಿಯುವಂತೆ ತನ್ನನ್ನು ಅಪಮಾನಕ್ಕೆ ಗುರಿ ಮಾಡಿದ್ದಳಲ್ಲಾ ಎಂದು! ಆದರೂ ಋಷಿ ಶಪಿಸಲಿಲ್ಲ. ಅಮೃತ ಪಾನದಿಂದ ಮದೋನ್ಮತ್ತರಾಗಿ ಶ್ಲೀಲತೆಯನ್ನು ಮೀರಿ ವರ್ತಿಸುತ್ತಿದ್ದ ಸ್ವರ್ಗನಿವಾಸಿಗಳನ್ನು ಜುಗುಪ್ಸೆಯಿಂದ ಕಾಣುತ್ತಾ ಮತ್ತೆ ತಲೆ ಬಗ್ಗಿಸಿ ಶತಪಥ ತಿರುಗತೊಡಗಿದ್ದನು.

"ಏನು ಸ್ವರ್ಗವೊ ಏನೊ? ಪಡಖಾನೆ ಗಿಂತಲೂ ಕಡೆಯಾಗಿ ಹೋಗಿದೆ! ನರಕದಲ್ಲಿ ಯಾದರೂ ಯಾತನೆಯ ಗಾಂಭೀರ್ಯವಿರು ತ್ತದೆ. ಇಲ್ಲಿಯ ಲಘುತ್ವಕ್ಕೊ ಇತಿಯಿಲ್ಲ, ಮಿತಿಯಿಲ್ಲ. ತಿಂದುಂಡು ಮೆರೆಯುವುದು,

**ಎಲ್ಲೆಲ್ಲೂ ಆಮೋದ ಪ್ರಮೋದಗಳ ಕೇಕೆ, ನರ್ತನ ಆಗುತ್ತಿದ್ದುದನ್ನು ನೋಡಿದ ವಿಶ್ವಾಮಿತ್ರ ಋಷಿಗೆ ಎಲ್ಲಿಂದಲೊ ಒಂದು ನರಳಾಟದ ಸದ್ದು ಬರುತ್ತಿರುವುದು ಕೇಳಿಸಿತು.**

ತಪಸ್ವಿಗಳನ್ನು ಕೆಡಿಸುವುದು, ದಾನವರೊಡನೆ ಕಾದು ಸೋತೋಡಿ ತ್ರಿಮೂರ್ತಿಗಳನ್ನು ಮರೆ ಹೊಗುವುದು– ಈ ಮಹತ್ಕಾರ್ಯಗಳಲ್ಲಿಯೆ ಇವರ ಬಾಳೆಲ್ಲ ಪರ್ಯವಸಾನವಾಗುತ್ತದೆ– ಅದೂ ಕೂಡ ಇಲ್ಲ; ಚಿರಂಜೀವಿಗಳಿಗೆ ಪರ್ಯ ವಸಾನವೆಲ್ಲಿಂದ?"

ಇಂತು ಋಷಿ ಆಲೋಚಿಸಿ ಕನಿಕರದಿಂದ ಕಿರುನಗೆ ನಗುತ್ತಿದ್ದಾಗಲೆ ಆ ದೇವಾಪ್ಸರೆಯರ ನೃತ್ಯವನ್ನೂ ಮೀರಿ ಆ ಅಮರಗಾನದ ಘೋಷ ವನ್ನೂ ಮೀರಿ ಸುದೀರ್ಘವಾದ ಅತಿ ಕ್ಲೇಶ ಯುತವಾದ ಎದೆಯದುರಿಸುವಂತಹ ನರಳು ದನಿಯೊಂದು ನಂದನದ ನೆಲವನ್ನೇ ಬಿರಿದು ಮೂಡಿತೊ ಎಂಬಂತೆ ಕೇಳಿಬಂದಿತು!

ಋಷಿ ಸಿಡಿಲೆರಗಿದವನಂತೆ ಬೆಚ್ಚಿಬಿದ್ದು ಬಾಯ್ದೆರೆದು ನಡುಗಿ ನಿಂತು "ಮತ್ತೆ? ಅದೇ ನರಳುದನಿ!" ಎಂದು ನಿಡುಸುಯ್ದನು.

ಆ ನರಳುದನಿ ಮಜಾ ಮಾಡುತ್ತಿದ್ದ ದೇವತೆ ಗಳಿಗೆ ಒಂದಿನಿತೂ ಕೇಳಿಸಿರಲಿಲ್ಲ. ಅವರ ಮಾನರಹಿತ ಪಾನಲೀಲೆ ನಿರಾತಂಕವಾಗಿ ಸಾಗಿತ್ತು!

ಆ ನರಳುದನಿ ವಿಶ್ವಾಮಿತ್ರನನ್ನು ಬಹು ದಿನಗಳಿಂದಲೂ ಹಿಂಬಾಲಿಸುತ್ತಿತ್ತು. ಎಲ್ಲಿರಲಿ, ಎಷ್ಟು ಹೊತ್ತಾಗಿರಲಿ, ಏನೇ ಮಾಡುತ್ತಿರಲಿ, ಅದು ಹಠಾತ್ತಾಗಿ ಕಿವಿಗೆ ಬಿದ್ದು ಸ್ಥಿತಪ್ರಜ್ಞನನ್ನೂ ಅಸ್ಥಿರವಾಗಿ ಮಾಡುತ್ತಿತ್ತು. ಕೈಲಾಸಕ್ಕೆ ಹೋಗಿ ದ್ದಾಗ ಅಲ್ಲಿಯೂ ಕೇಳಿಸಿತ್ತು. ಹಾಗೆಯೇ ವೈಕುಂಠದಲ್ಲಿ; ಹಾಗೆಯೇ ಸತ್ಯಲೋಕದಲ್ಲಿ. ನರಕಕ್ಕೆ ಸಂಚಾರಾರ್ಥವಾಗಿ ಹೋಗಿದ್ದಾಗಲೂ ಅಲ್ಲಿಯ ಗೋಳಾಟವನ್ನು ಮೀರಿ ಕೇಳಿಸಿತ್ತು. ರಹಸ್ಯವಾದ ಅನಿರ್ದಿಷ್ಟವಾದ ಆ ಆರ್ತನಾದ.

ವಿಶ್ವಾಮಿತ್ರನು ಅದರ ಮೂಲವನ್ನು ಅರಿ ಯಲು ಪ್ರಯತ್ನ ಮಾಡಿದ್ದರೂ ಫಲಕಾರಿ ಯಾಗಿರಲಿಲ್ಲ. ವೈಕುಂಠದಲ್ಲಿ ವಸಿಷ್ಠರನ್ನು ವಿಚಾರಿಸಿದಾಗ ಅವರು ತಮಗೆ ಆ ನರಳು ಕೇಳಿಸುತ್ತಿರಲಿಲ್ಲವೆಂದೂ ಅದು ವಿಶ್ವಾಮಿತ್ರನ ಮನೋಭ್ರಾಂತಿಜನ್ಯವಾಗಿರಬೇಕೆಂದೂ ಹೇಳಿ ಅದರ ಪರಿಹಾರಾರ್ಥವಾಗಿ ಒಂದು ಯಜ್ಞವನ್ನು ನೆರವೇರಿಸುವಂತೆ ಬುದ್ಧಿ ಹೇಳಿದರು. ಆದರೆ ವಿಶ್ವಾಮಿತ್ರನಿಗೆ ಹಳೆಯ ಕಂದಾಚಾರಗಳಲ್ಲಿ ನಂಬುಗೆ ತಪ್ಪಿಹೋಗಿತ್ತಾದ್ದರಿಂದ ವಸಿಷ್ಠರ ಗೊಡ್ಡು ಬುದ್ಧಿವಾದಕ್ಕೆ ಶರಣಾಗಿರಲಿಲ್ಲ.

ವಿಶ್ವಾಮಿತ್ರನು ಆಲೋಚಿಸುತ್ತಾ ತಲೆಯೆತ್ತಿ ನೋಡಿದಾಗ ಪರಶುರಾಮನು ತಾನಿದ್ದಲ್ಲಿಗೆ ಬರುತ್ತಿದ್ದುದನ್ನು ಕಂಡನು. ರೇಣುಕಾತನಯನ ಮುಖದಲ್ಲಿಯೂ ಮೋಡ ಕವಿದಂತಿತ್ತು. ಅವ ಸರವಾಗಿ ಬಳಿಗೆ ಬಂದನು.

"ಕುಶಿಕತನಯಾ, ನಿನಗೊಂದು ನರಳು ದನಿ ಕೇಳಿಸಿತೆ?" ಎಂದು ವಿಶ್ವಾಮಿತ್ರನ ಹೆಗಲ ಮೇಲೆ ಬಲಗೈಯಿಟ್ಟು ಪ್ರಶ್ನಿಸಿದನು.

ವಿಶ್ವಾಮಿತ್ರನು ಪರಶುರಾಮನಿಗೆ ತನಗೆ ಅದುವರೆಗೆ ಆಗಿದ್ದ ಅನುಭವಗಳನ್ನೆಲ್ಲಾ ಹೇಳಿ ದನು. ಪರಶುರಾಮನೂ ತನಗೂ ಅದೇ ಅನು ಭವಗಳಾದುದನ್ನು ತಿಳಿಸಿ, ಅದಕ್ಕೆ ಕಾರಣವನ್ನು ತಿಳಿಯಲು ತ್ರಿಭುವನ ಸಂಚಾರಕ್ಕೆ ಹೊರಟಿರುವು ದಾಗಿಯೂ ಹೇಳಿದನು.

ಅವರು ಮಾತಾಡುತ್ತಿದ್ದಾಗಲೆ ಮತ್ತೆ ದೇವಾ

ಪ್ಸರೆಯರ ಆನಂದ ನಿನಾದಗಳನ್ನೆಲ್ಲಾ ನುಂಗಿ ಮೀರಿ ಆ ನರಳು, ನೆತ್ತರು ಹೆಪ್ಪುಗಡುವಂತೆ, ಕೇಳಿಸಿತು. ಋಷಿಗಳಿಬ್ಬರೂ ದಿಗ್ಭ್ರಾಂತರಾಗಿ ಗದಗದನೆ ನಡುಗುತ್ತಾ ನಿಂತರು! ಯಾವನಾದ ರೊಬ್ಬನನ್ನು ಮುಳ್ಳಿನ ಹಾಸಿಗೆಯ ಮೇಲೆ ಅಂಗಾತನೆ ಮಲಗಿಸಿ, ಎದೆಯ ಮೇಲೆ ಹೆಬ್ಬಂಡೆ ಯನ್ನು ಬಹು ಕಾಲದವರೆಗೂ ಹೇರಿ, ಮಣ ಭಾರದ ಸುತ್ತಿಗೆಯಿಂದ ಬೀಸಿ ಬೀಸಿ ಹೊಡೆ ದರೆ, ಅವನು ಹೇಗೆ ನರಳಬಹುದೋ ಹಾಗಿ ದ್ದಿತು ಆ ಬೀಭತ್ಸಕರವಾದ ನರಳು!

ವಿಶ್ವಾಮಿತ್ರ ಪರಶುರಾಮರ ಕಾಲುಗಳ ನಡುಕವಿನ್ನೂ ಇಳಿದಿರಲಿಲ್ಲ. ಅಷ್ಟರಲ್ಲಿ ನಾರದನೂ ಲೋಕಾಭಿರಾಮವಾಗಿ ಹರಿ ಕೀರ್ತನೆ ಮಾಡುತ್ತಾ ಆ ಮಾರ್ಗವಾಗಿ ವೈಕುಂಠದ ಕಡೆಗೆ ಹೋಗು ತ್ತಿದ್ದನು. ಋಷಿಗಳಿಬ್ಬರೂ ಬೇಗ ಬೇಗನೆ ತ್ರಿಲೋಕ ಸಂಚಾರಿಯ ಬಳಿಗೆ ನಡೆದು ತಮ್ಮ ಅನುಭವದ ಕಾರಣದ ವಿಚಾರವಾಗಿ ಪ್ರಶ್ನಿಸಿ ದರು. ನಾರದನ ಮುಖದಲ್ಲಿ ಕಿರುನಗೆಯೂ ಮಿಂಚಿತು; ಕಣ್ಣುಗಳಲ್ಲಿ ನೀರೂ ಸುರಿದುವು. ಆ ಪರಸ್ಪರ ವಿರುದ್ಧ ಭಾವದ ಘಟನೆಗಳನ್ನು ಕಂಡು ವಿಶ್ವಾಮಿತ್ರ ಪರಶುರಾಮರು ಬೆಕ್ಕಸ ಪಡುತ್ತಿರಲು "ಆ ನರಳು ದನಿ ಬಹು ಕಾಲ ದಿಂದಲೂ ನನಗೆ ಕೇಳಿಸುತ್ತಿದೆ! ಕೇಳಿದಾಗಲೆಲ್ಲಾ ನನ್ನೆದೆ ನಡುಗುತ್ತದೆ! ಜೀವ ಹಿಂಡಿದಂತಾಗು ತ್ತದೆ. ಅದಕ್ಕೆ ಕಾರಣ ನನಗೂ ಸರಿಯಾಗಿ ಗೊತ್ತಿಲ್ಲ. ಅದು ಬರುವುದಂತೂ ಭೂಲೋಕ ದಿಂದ ಎಂಬುದು ಚೆನ್ನಾಗಿ ಗೊತ್ತು" ಎಂದೊರೆದು ದೇವರ್ಷಿ ಗಾನಗೈಯುತ್ತ ಹೊರಟು ಹೋದನು. ಬ್ರಹ್ಮರ್ಷಿಗಳಿಬ್ಬರೂ ಭೂಲೋಕದ ಕಡೆಗೆ ವೇಗವಾಗಿ ಸಾಗಿದರು.

ಭೂಮಿಯನ್ನು ಸಮೀಪಿಸುತ್ತಿದ್ದಾಗಲೆ ವಿಶ್ವಾಮಿತ್ರ ಪರಶುರಾಮರಿಬ್ಬರೂ ದಂಗು ಬಡಿದು ಹೋದರು. ಗುರುತಿಸಲಸಾಧ್ಯವಾಗು ವಷ್ಟು ವ್ಯತ್ಯಾಸ ಕಂಡು ಬಂದಿತು — ಹಿಂದೆ ಅವರಿದ್ದ ಕಾಲದ ಭೂಮಿಗೂ ಈಗಿನ ಕಾಲದ ಭೂಮಿಗೂ. ನಾಗರಿಕತೆ ಮತ್ತು ಸಂಸ್ಕೃತಿ ಗಳೊಡನೆ ಅವುಗಳನ್ನು ಕ್ಷಣ ಮಾತ್ರದಲ್ಲಿ ಬೇಕಾದರೂ ಹಾಳು ಮಾಡಿಬಿಡುವ ಅನಾಗರಿಕತೆ ಮತ್ತು ಅಸಂಸ್ಕೃತಿಗಳೂ, ಜೀವವನ್ನು ಸಂರಕ್ಷಿ ಸುವ ವೈದ್ಯ ವಿದ್ಯೆಯೊಡನೆ ರೋಗಕಾರಿಗಳಾದ ದುಷ್ಟ ಪದ್ಧತಿಗಳೂ ಸಿರಿಯೊಡನೆ ಬಡತನವೂ ರೈಲು, ಮೋಟಾರು, ವಿಮಾನ, ಅಲೆಯಂಚೆ, ವಿದ್ಯುಚ್ಛಕ್ತಿ, ಬಂದೂಕು, ಬಾಂಬು, ಕಾಗದ, ಮುದ್ರಾಯಂತ್ರ ಇತ್ಯಾದಿ ಇತ್ಯಾದಿ ಇತ್ಯಾದಿ ಗಳನ್ನು ಕಾಣುತ್ತಾ ಹೊಗಳುತ್ತಾ ವಿಮರ್ಶಿಸುತ್ತಾ ನವೀನ ನರವೇಷದಿಂದ ದೊಡ್ಡ ನಗರವೊಂದಕ್ಕೆ ಬಂದಿಳಿದರು.

ಯಂತ್ರ ವಾಹನಗಳ ಸಂಚಾರ, ಮನುಷ್ಯರ ಓಡಾಟ, ವ್ಯಾಪಾರದ ಗಲಿಬಿಲಿ, ಹೊಟೇಲುಗಳ ನೂಕುನುಗ್ಗಲು, ವಿದ್ಯುಚ್ಛಕ್ತಿಯ ತಂತಿಗಳ ಹಾಸು ಹೊಕ್ಕು ಮತ್ತು ಕಂಬಗಳ ಕಿಕ್ಕಿರಿತ, ಚಿತ್ರ ವಿಚಿತ್ರ ಪ್ರಕಟನೆಗಳ ಪ್ರದರ್ಶನ, ಮದ್ಯಪಾನ ನಿರೋಧದ ಆಫೀಸಿನ ಹಿಂದುಗಡೆ ಸೇಂದಿಯಂಗಡಿ, ಪೊಲೀಸು ಠಾಣೆಯ ಹಿಂಭಾಗದ ಮನೆಯ ಉಪ್ಪರಿಗೆಯಲ್ಲಿ ಜೂಜಿನ ಮನೆ, ಗಲ್ಲಿಯಲ್ಲಿ ಯಾರೂ ಅಸಹ್ಯ ಮಾಡಬಾರದು ಎಂದು ಬರೆದಿದ್ದ ಬೋರ್ಡಿನ ಕೆಳಗೇ ಸಹಿಸಲಸಾಧ್ಯವಾದ ದುರ್ಗಂಧ, ಸಿನಿಮಾ, ನಾಟಕಶಾಲೆ, ಕಾರಖಾನೆ, ಸ್ಕೂಲ್, ಕಲಾಶಾಲೆ, ಇತ್ಯಾದಿ ಇತ್ಯಾದಿಗಳನ್ನೆಲ್ಲಾ ಆಶ್ಚರ್ಯ ಕುತೂಹಲ ಜುಗುಪ್ಸೆ ಮತ್ತು ಹರ್ಷಗಳಿಂದ ಸಮೀಕ್ಷಿಸುತ್ತಾ ನರಳುದನಿಗೆ ಮೂಲವಾದ ಕಾರಣವನ್ನರಸಿದರು.

ಅರಸುತ್ತ ಒಂದು ದೇವಾಲಯಕ್ಕೆ ಹೋದರು. ಅಲ್ಲಿ ಪೂಜಾರಿ, ಗುಡಿಯಲ್ಲಿ ದೇವರಿಲ್ಲವೆಂಬ ದೃಢನಂಬುಗೆಯಿಂದ ಕುಳಿತು, ಪೂಜೆಗೆ ಬಂದಿದ್ದ ವರಿಂದ ಹಣ ಸುಲಿಯುತ್ತಿದ್ದುದನ್ನೂ ಅಲ್ಲಿಗೆ ಬಂದಿದ್ದ ಭಕ್ತರ ವ್ಯಾಪಾರ ಬುದ್ಧಿಯನ್ನೂ ನೋಡಿ ಋಷಿಗಳಿಬ್ಬರಿಗೂ ನಗು ಬಂದಿತು.

ವಿಶ್ವಾಮಿತ್ರನು ಪರಶುರಾಮನನ್ನು ಕುರಿತು "ರೇಣುಕಾತನಯಾ ನೋಡಿದೆಯಾ, ಈ ಪುರೋಹಿತ ವರ್ಗದವರು ಅಂದಿದ್ದಂತೆಯೇ ಇಂದೂ ಇದ್ದಾರಲ್ಲಾ! ಪ್ರಪಂಚ ಇಷ್ಟು ಬದ ಲಾಯಿಸಿದ್ದರೂ ಅವರು ಮಾತ್ರ 'ಸ್ಥಾಣುರಚ ಲೋಯಂ' ಆಗಿಬಿಟ್ಟಿದ್ದಾರೆ" ಎಂದನು.

ಪರಶುರಾಮನು "ಪಾಪ, ಪುರೋಹಿತರೇನು ಮಾಡಿಯಾರು? ಆಗಿನ ಕಾಲದ ದೊರೆಗಳಿಗನು ಗುಣವಾಗಿ ಆಗಿನ ಪುರೋಹಿತರಿದ್ದರು; ಈಗಿನ ಕಾಲದ ದೊರೆಗಳಿಗನುಸಾರವಾಗಿ ಈಗಿನ ಪುರೋಹಿತರಿದ್ದಾರೆ" ಎಂದು ಕ್ಷತ್ರಿಯರ ಮೇಲೆಯೆ ದೂರನ್ನು ಹೊರಿಸಿದನು.

ಇನ್ನೊಂದು ಕಡೆ ಒಂದು ಮಂದಿರದಲ್ಲಿ

ಜನರು ಕಿಕ್ಕಿರಿದಿದ್ದುದನ್ನು ಕಂಡು, ಅಲ್ಲಿಗೆ ಹೋಗಿ ನೋಡಲಾಗಿ, ಹರಿಕಥೆಯಾಗುತ್ತಿತ್ತು. ಆ ದಾಸನು ಭಗವಂತನ ಕರುಣೆಯನ್ನು ಕುರಿತು ಕೇಳುತ್ತಿದ್ದವರ ಕಣ್ಣುಗಳಲ್ಲಿ ನೀರು ಬರುವಂತೆ ಮಾತಾಡುತ್ತಿದ್ದನು. ಋಷಿಗಳಿಬ್ಬರೂ ತುಸು ಹೊತ್ತು ಕೇಳುತ್ತಾ ನಿಂತಿದ್ದರು. ಅಷ್ಟರಲ್ಲಿಯೆ ಆ ದಾಸನು ತಪಸ್ಸಿನ ಮಹಿಮೆಯನ್ನು ಕುರಿತು ಹೇಳುತ್ತಾ ಪರಶುರಾಮ ವಿಶ್ವಾಮಿತ್ರರ ಕಥೆಗಳನ್ನೇ ಪ್ರಾರಂಭಿಸಿಬಿಟ್ಟನು. ತಮಗೆ ಅಷ್ಟು ನೂತನವಾಗಿದ್ದ ಆ ಕಥೆಗಳನ್ನು ಋಷಿಗಳಿಬ್ಬರೂ ಬಾಯಿ ಬಿಟ್ಟುಕೊಂಡು ಕೇಳಿದರು. ಅವರ ಮಹಿಮೆ ಅವರಿಗೇ ಗೊತ್ತಿರಲಿಲ್ಲ!

ಪರಶುರಾಮನು "ಆ ದಾಸನು ಯಾವ ವಿಶ್ವಾಮಿತ್ರನನ್ನು ಕುರಿತು ಮಾತನಾಡುತ್ತಿರುವುದು, ಕುಶಿಕತನಯಾ?" ಎಂದು ನಗುತ್ತಾ ಕೇಳಿದನು.

ವಿಶ್ವಾಮಿತ್ರನು "ಅವನು ನನ್ನನ್ನಾಗಲಿ ನಿನ್ನನ್ನಾಗಲಿ ಕುರಿತು ಮಾತಾಡುತ್ತಿಲ್ಲ, ಪುರಾಣ ಹೇಳುತ್ತಿದ್ದಾನೆ!" ಎಂದನು.

ಮತ್ತೊಂದೆಡೆ ದೊಡ್ಡದೊಂದು ಸಭೆ ಸೇರಿದ್ದಿತು. ಬಾಗಿಲಲ್ಲಿ ಬಣ್ಣದ ಬಟ್ಟೆಯ ಬಿಚ್ಚುಗತ್ತಿಯ ಸಿಪಾಯಿಗಳು ನಿಂತಿದ್ದರು. ಜರಿಯ ಪೇಟದ, ಕ್ಯಾಪಿನ, ಹ್ಯಾಟಿನ, ಬೂಟ್ಸಿನ, ನಿಲುವಂಗಿಯ, ಕುಳ್ಳಂಗಿಯ, ತರತರದ ವೇಷದವರು ಅಲ್ಲಿಗೆ ಹೋಗುತ್ತಿದ್ದುದನ್ನು ಕಂಡು ಋಷಿಗಳಿಬ್ಬರೂ ಅವರಂತೆಯೇ ಕಾಣಿಸಿಕೊಂಡು ಒಳಗೆ ಹೋದರು. ಎಲ್ಲರೂ ಸುಪ್ರಹೃಷ್ಟರಾಗಿ ಸಾಲಂಕೃತರಾಗಿ ಸಂತೃಪ್ತರಾಗಿ ಒಬ್ಬರನ್ನೊಬ್ಬರು ಹಸ್ತಲಾಘವಗಳಿಂದ ಪ್ರಶಂಸಿಸುತ್ತಾ ಪೀಠಗಳನ್ನು ಅಲಂಕರಿಸಿದ ಮೇಲೆ ನರ್ತಕಿಯೊಬ್ಬಳು ರಂಗಕ್ಕೆ ಬಂದು ಕುಣಿಯಲಾರಂಭಿಸಿದಳು. ಋಷಿಗಳಿಬ್ಬರೂ ಕಾರಣಗಳನ್ನು ಕಲ್ಪಿಸಿಕೊಂಡು ಅಲ್ಲಿಂದೆದ್ದು ಹೊರಗೆ ಹೋದರು.

ಎಲ್ಲೆಲ್ಲಿಗೆ ಹೋದರೂ ನರಳುದನಿಯ ವಿಚಾರವಾಗಿ ಯಾರೊಬ್ಬರೂ ಮಾತಾಡುತ್ತಿರಲಿಲ್ಲ. ಯಾರಿಗೂ ಅದು ಕೇಳಿಸುತ್ತಿದ್ದಂತೆಯೂ ತೋರಲಿಲ್ಲ. ಕೆಲವೆಡೆಗಳಲ್ಲಿ ಸನ್ನಿವೇಶಗಳು ಹೇಗಿದ್ದುವೆಂದರೆ, ಋಷಿಗಳಿಬ್ಬರಿಗೂ ತಾವು ಭೂಮಿಗೆ ಬಂದಿದ್ದ ಉದ್ದೇಶವೆ ಮರೆತು ಹೋಗುವಂತಿತ್ತು.

ನಗರದಲ್ಲಿ ಹುಡುಕಿ ಹುಡುಕಿ ಸಾಕಾಗಿ ಅಲ್ಲಿಂದ ಹೊರಗೆ ಹೊರಟರು. ಪಟ್ಟಣದ ಅಟ್ಟಹಾಸದ ಮಹಾ ನಿನಾದವು ಕಿವಿ ಮರೆಯಾದೊಡನೆ ಆ ಭೀಕರವಾದ ನರಳುದನಿ ಮತ್ತೆ ಸ್ಪಷ್ಟವಾಗಿ ಕೇಳಿಸತೊಡಗಿ, ಅವರಿಬ್ಬರೂ ತಲ್ಲಣಿಸಿದರು. ಮುಂದುವರಿದರು. ಮುಂದುವರಿದಂತೆಲ್ಲ ಅದು ಇನ್ನೂ ಸಮೀಪಗತವಾಯಿತು. ಅರಣ್ಯ ಪ್ರಾಂತವೂ ಪ್ರಾರಂಭವಾಗಿ ಅದರಲ್ಲಿ ಬಹುದೂರ ನಡೆದರು. ಅದೂ ನಿರ್ಜನವಾಗಿತ್ತು. ಮನುಷ್ಯವಾಸದ ಗುರುತು ಎಲ್ಲಿಯೂ ಕಾಣಬರಲಿಲ್ಲ. ಬರಬರುತ್ತಾ ಕಾಡು ಇನ್ನೂ ದಟ್ಟವಾಗಿ ಬೆಟ್ಟವೇರಿ ಇಳಿದಿತ್ತು. ಬೆಟ್ಟದ ನೆತ್ತಿಗೆ ಸೇರಿದೊಡನೆ ಕೆಳಗಡೆಯ ಕಣಿವೆಯಿಂದ ಕೇಳಿಬಂದಂತಾಯಿತು ಆ ಅತ್ಯಂತ ಯಾತನಾಕ್ಲಿಷ್ಟವಾದ ಆರ್ತನಾದ. ಋಷಿಗಳಿಬ್ಬರೂ ಮಹಾ ಭೀತಿಯಿಂದ ಒಬ್ಬರನ್ನೊಬ್ಬರು ಹಿಡಿದುಕೊಂಡು ಕಣಿವೆಗಿಳಿದರು.

ಅಲ್ಲಿದ್ದ ಒಂದು ಸಣ್ಣ ಗದ್ದೆಯ ಕೋಗಿನ ತುದಿಯಲ್ಲಿ ಒಂದು ಹುಲ್ಲು ಜೋಪಡಿ ಕಣ್ಣಿಗೆ ಬಿದ್ದಿತು. ಆ ಗುಡಿಸಲಿನಿಂದ ಬರುತ್ತಿತ್ತು— ಸತ್ಯಲೋಕ ಕೈಲಾಸ ವೈಕುಂಠಗಳವರೆಗೂ ಏರಿ ವಿಶ್ವವ್ಯಾಪಿಯಾಗಿದ್ದ ಆ ಭಯಂಕರವಾದ ನರಳುದನಿ! ಋಷಿಗಳು ಸಾಮಾನ್ಯ ಮನುಷ್ಯ ವೇಷದಿಂದ ಅಲ್ಲಿಗೆ ನಡೆದರು.

ಗುಡಿಸಲಿನ ಹೊರಗಡೆ ಮನುಷ್ಯರಾರೂ ಕಾಣಿಸಲಿಲ್ಲ. ಬೂದಿಗುಡ್ಡೆಯಲ್ಲಿ ಮಲಗಿದ್ದ ಒಂದು ಬಡಕಲು ನಾಯಿ ಮಾತ್ರ ಒಂದೆರಡು ಸೊಲ್ಲು ಕೂಗಿ ದಣಿದು ತಟಸ್ಥವಾಯಿತು. ಒಂದು ಹೇಂಟೆ ತನ್ನ ಹೂಮರಿಗಳೊಡನೆ ಕೊಳಚೆಯಲ್ಲಿ ಕೆಸರು ಕೆದರುತ್ತಿತ್ತು. ಸುತ್ತಲೂ ಅನಂತಾರಣ್ಯಗಳು ಗಗನಚುಂಬಿಗಳಾಗಿದ್ದ ಗಿರಿಶ್ರೇಣಿಗಳನ್ನಡರಿ ಭೀಮವಾಗಿದ್ದು ನೀರವತೆಯನ್ನೂ ಏಕಾಂತತೆಯನ್ನೂ ಹೆಚ್ಚಿಸುತ್ತಿದ್ದವು. ಬಿಸಿಲು ಬೆಂಕಿ ಮಳೆಗರೆಯುತ್ತಿತ್ತು. ಆ ನೀರವತೆಯಲ್ಲಿ ಒಳಗಡೆಯಿಂದ ಕೇಳಿಬರುತ್ತಿದ್ದ ನರಳು ಭೀಷ್ಮವಾಗಿತ್ತು.

ವಿಶ್ವಾಮಿತ್ರನು ಗುಡಿಸಲಿಗೆ ಸುತ್ತುವರಿದಿದ್ದ ತಟ್ಟಿಯ ಗೋಡೆಯ ಕಂಡಿಯಲ್ಲಿ ಇಣಿಕಿ ಒಳಗೆ ನೋಡಿ, ಪರಶುರಾಮನಿಗೂ ಹಾಗೆಯೆ ಮಾಡುವಂತೆ ಸನ್ನೆಮಾಡಿದನು.

ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು. ಸರ್ವತ್ರವೂ ಹೊಗೆ ಹಿಡಿದು ಕರಿಬಲೆ ನೇತುಬಿದ್ದು ಕರ್ರಗಾಗಿತ್ತು. ಹಾರೆ, ಗುದ್ದಲಿ, ಹೆಡಗೆ, ಕುಕ್ಕೆ, ಮಡಕೆ, ನೇಗಿಲು, ಕತ್ತಿ–ಇತ್ಯಾದಿ ಬೇಸಾಯದ ಉಪಕರಣಗಳು ಅಲ್ಲಲ್ಲಿ ಅಸ್ತವ್ಯಸ್ತವಾಗಿ ಚೆದರಿ ಬಿದ್ದಿದ್ದುವು. ನಿರ್ಜೀವವಾದ ಕಸಕಡ್ಡಿಗಳೂ ಸಜೀವವಾದ ನೊಣಗಳೂ ಸ್ವರಾಜ್ಯ ಸಂಪಾದನೆ ಮಾಡಿದಂತಿತ್ತು. ಮಧ್ಯೆ ಹಾಸಿದ್ದ ಕಂಬಳಿಯ ಮೇಲೆ ಕೊಳೆ ಹಿಡಿದ ಸೊಂಟದ ಪಂಚೆಯ ವಿನಾ ಸಂಪೂರ್ಣನಾಗಿ ನಗ್ನನಾಗಿದ್ದ ರೈತನೊಬ್ಬನು ಅಂಗಾತನೆ ಮಲಗಿ, ಎದೆಯನ್ನು ಎರಡು ಕೈಗಳಿಂದಲೂ ಒತ್ತಿಕೊಳ್ಳುತ್ತಾ ಘೋರವಾಗಿ ನರಳುತ್ತಿದ್ದನು. ಆ ನರಕಯಾತನೆಗೆ ಅವನ ಕರಿಮೊರಡು ಮೈ, ತಲೆ ಮಾತ್ರ ಬಂಡೆಯಡಿ ಸಿಕ್ಕಿದ ಹಾವಿನಂತೆ, ಒದ್ದಾಡಿಕೊಳ್ಳುತ್ತಿತ್ತು. ಋಷಿಗಳಿಬ್ಬರೂ ನೋಡುತ್ತಿದ್ದ ಹಾಗೆಯೇ ಮುದ್ದೆಮುದ್ದೆಯಾದ ನೆತ್ತರು ಬುಗ್ಗೆ ಬುಗ್ಗೆಯಾಗಿ ಚಿಮ್ಮಿ ಅವನ ಬಾಯಿಂದ ಕೆಂಪಗೆ ಹೊರಬಿದ್ದು ನೆಲವನ್ನು ತೊಯ್ಸಿತು! ಆ ರೈತನ ಪಕ್ಕದಲ್ಲಿ ಚಿಂದಿ ಚಿಂದಿಯಾದ ಕೊಳಕಲು ಸೀರೆಯನ್ನು ಮಾನ ಮುಚ್ಚಿಕೊಳ್ಳುವಷ್ಟರ ಮಟ್ಟಿಗೆ ಉಟ್ಟು ಕೊಂಡು, ಬಡಕಲಾಗಿದ್ದ ಅವನ ಹೆಂಡತಿ ತಲೆಯ ಮೇಲೆ ಕೈಹೊತ್ತು ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಆ ಹೆಂಗಸಿನ ಹಿಂದೆ ಕೂದಲು ಕೆದರಿ ವಿಕಾರವಾಗಿದ್ದ, ಬತ್ತಲೆಯಾಗಿ ಹೊಟ್ಟೆ ಡೊಳ್ಳಾಗಿ ಮೈ ಸಣಕಲಾಗಿದ್ದ ನಾಲ್ಕೈದು ವರ್ಷದ ಹುಡುಗಿಯೊಬ್ಬಳು ನೆಲದ ಮೇಲೆ ಒರಗಿ ಮೂರ್ಛೆ ಹೋಗಿರುವಂತೆ ನಿದ್ದೆಮಾಡು ತ್ತಿದ್ದಳು.

ಋಷಿಗಳಿಗಿಬ್ಬರಿಗೂ ಎದೆ ಬೆಂದು, ಕಣ್ಣು ಗಳಿಂದ ಬಿಸಿಯಾದ ನೀರು ಹರಿಯ ತೊಡಗಿತು– ಆ ಮಹಾ ನಗರದಲ್ಲಿ ತಾವು ನೋಡಿದ್ದ ಭೋಗದ ದೃಶ್ಯಗಳನ್ನು ನೆನೆದಾಗಲಂತೂ ಮುನಿಸೂ ಮನದಲ್ಲಿ ಕಿಡಿಯಾಡಿತು. ಬೇಗನೆ ತಟ್ಟೆಯ ಬಾಗಿಲನ್ನು ಮೆಲ್ಲನೆ ದಬ್ಬಿ, ತೆರೆದು, ನಿಲುವಿಗೆ ತಲೆ ತಾಗದಂತೆ ಬಗ್ಗಿ, ಒಳಗೆ ದಾಟಿದರು.

ಅವರಿಬ್ಬರೂ ಸಾಮಾನ್ಯ ಮಾನವ ವೇಷಧಾರಿ ಗಳಾಗಿದ್ದರೂ ರೈತನ ಹೆಂಡತಿ ಅವರನ್ನು ಕಂಡೊಡನೆ ಚೀತ್ಕಾರಮಾಡಿ, ಕೈ ಜೋಡಿಸಿ



ಈ ಚಾಂದ್ರಮಾನ–ಸೌರಮಾನ ಯುಗಾದಿ ಗಳ ನಡುವೆ ಮನೆ ಖರ್ಚಿಗೆ ಹಣ ಸಾಲದೇ ನನ್ನ ಮಾನ ಹರಾಜು... ಗ್ಯಾರಂಟಿ...

ಕೊಂಡು "ದಮ್ಮಯ್ಯ, ನಿಮ್ಮ ಕಾಲಿಗೆ ಬೀಳ್ತೀನಿ. ಈಗ ದುಡ್ಡಿಲ್ಲ, ನನ್ನ ಗಂಡಗೆ ಕಾಯಿಲೆ ಗುಣ ವಾದ ಕೂಡಲೆ ಸಾಲ ಮಾಡಿಯಾದರೂ ತಂದು ಕೊಡ್ತಾರೆ! ಕೂಸನ್ನು ನೋಡಿಯಾದರೂ ಕನಿಕರ ತೋರಿಸಿ!" ಎಂದು ರೋದಿಸತೊಡಗಿ ದಳು.

ತಾವು ಕಂದಾಯಕ್ಕೆ ಬಂದ ಸರಕಾರಿ ಅಧಿಕಾರಿ ಗಳೂ ಅಲ್ಲ, ಪಠಾಣರೂ ಅಲ್ಲ, ಸಾಹುಕಾರನ ವಸೂಲಿಯ ಸಾಬರೂ ಅಲ್ಲ, ಪರದೇಶದ ಪ್ರಯಾಣಿಕರು, ಎಂದು ಕಷ್ಟಪಟ್ಟು ತಿಳಿಸಿದ ಮೇಲೆ, ಆ ಹೆಂಗಸು ಋಷಿಗಳ ಪಾದಕ್ಕೆ ಬಿದ್ದು ತನ್ನ ಕಷ್ಟವನ್ನು ಹೇಳಿಕೊಂಡಳು.

"ಏನು ಕಾಯಿಲೆ ನಿನ್ನ ಗಂಡನಿಗೆ?"

"ಏನು ಕಾಯಿಲೆಯೊ ಆ ಭಗವಂತನಿಗೇ ಗೊತ್ತು."

"ಎಷ್ಟು ದಿನಗಳಿಂದ?"

"ಬಹಳ ಕಾಲದಿಂದಲೂ ಇದೆ. ಒಂದುಸಾರಿ ಕಡಮೆಯಾದರೆ ಮತ್ತೊಂದು ಸಾರಿ ಹೆಚ್ಚಾಗು ತ್ತದೆ. ಯಾರಿಗೆ ತೋರಿಸಿದರೂ ಇಂಥಾ ಕಾಯಿಲೆಯೆಂದು ಅರ್ಥವಾಗುವುದಿಲ್ಲ. ಇದ್ದ ಕ್ಕಿದ್ದ ಹಾಗೆ ಎದೆಯ ಮೇಲೆ ಯಾರೋ ಕೂತು ಕೊಂಡಂತೆ ಆಗಿ ಭಾರ ಹೆಚ್ಚುತ್ತದೆ. ಕೀಲು ಕೀಲುಗಳಲ್ಲಿ ಕಬ್ಬಿಣ ಕಾಸಿ ಹೊಯ್ದಂತೆ ನೋವು ಪ್ರಾರಂಭವಾಗುತ್ತದೆ. ಆಗಾಗ್ಗೆ ಹೆಂಟೆ ಹೆಂಟೆ ಯಾಗಿ ರಕ್ತ ಕಾರುತ್ತದೆ. ವೈದ್ಯರಾಯಿತು,

ಜೋಯಿಸರಾಯಿತು; ದೇವರಾಯಿತು, ದಿಂಡ ರಾಯಿತು. ಸ್ವಾಮಿಾ, ಭಗವಂತ ಕೂಡಾ ನಮ್ಮನ್ನು ಕೈಬಿಟ್ಟಿದ್ದಾನೆ" ಎಂದು ಹೆಂಗಸು ಬಿಕ್ಕಿ ಬಿಕ್ಕಿ ಅತ್ತಳು.

"ಇಲ್ಲ, ಭಗವಂತ ಕೈ ಬಿಟ್ಟಿಲ್ಲ, ಸಮಾಧಾನ ಮಾಡಿಕೊ. ನಮ್ಮ ಕೈಲಾದುದನ್ನು ಮಾಡುತ್ತೇವೆ" ಎಂದು ಋಷಿಗಳಿಬ್ಬರೂ ರೋಗಿಯನ್ನು ಪರೀಕ್ಷಿಸಿದರು.

ಹೃದಯ, ಶ್ವಾಸಕೋಶ, ಜಠರ, ಕರುಳು, ಮಿದುಳು—ಮೊದಲಾದ ಸರ್ವಾವಯವಗಳನ್ನೂ ಚೆನ್ನಾಗಿ ಪರೀಕ್ಷಿಸಿದರು. ಎಲ್ಲಿಯೂ ಒಂದು ತಿಲಮಾತ್ರವಾದರೂ ದೋಷವಾಗಲಿ ರೋಗದ ಕಾರಣ ಚಿಹ್ನೆಯಾಗಲಿ ಗೋಚರಿಸಲಿಲ್ಲ. ರೋಗಿ ಯಾವ ಪ್ರಶ್ನೆಗೂ ಉತ್ತರ ಕೊಡುವ ಸ್ಥಿತಿ ಯಲ್ಲಿರಲಿಲ್ಲ. ಎದೆಯ ಮೇಲೆ ಕೈಯಿಟ್ಟಾಗ ಮಾತ್ರ ಹುಣ್ಣು ಮುಟ್ಟಿದಂತೆ ಮುಖವನ್ನು ಸಿಂಡರಿಸಿ ಮತ್ತೂ ಹೆಚ್ಚಾಗಿ ನರಳುತ್ತಿದ್ದನು.

ಋಷಿಗಳು ಕಂಗಾಲಾದರು. ಬ್ರಹ್ಮವಿದ್ಯೆ ಗಿಂತಲೂ ಅತಿ ರಹಸ್ಯವಾಗಿತ್ತು ಆ ರೈತನ ಕಾಯಿಲೆ! ಏನಾದರಾಗಲಿ ಎಂದು, ಅಲ್ಲಿಗೆ ಹತ್ತಿರವಾಗಿದ್ದ ಒಂದು ಊರಿನಿಂದ ಸರಕಾರಿ ಡಾಕ್ಟರನ್ನು ಕರೆತಂದರು. ಅವನು ಮೋಟಾರುಗಾಡಿ ಹೋಗದ ಹಳ್ಳಿಗೆ ಖಂಡಿತ ಬರಲಾಗುವುದಿಲ್ಲ ಎಂದಿದ್ದರೂ ಋಷಿಯ ಕೈಯಲ್ಲಿದ್ದ ಚಿನ್ನದ ನಾಣ್ಯಗಳನ್ನು ಕಂಡಮೇಲೆ ಮೂಗುದಾರ ಹಾಕಿದ ಗೂಳಿ ತಂಟೆಮಾಡದೆ ಹಿಂಬಾಲಿಸುವಂತೆ ಬಂದುಬಿಟ್ಟನು.

ಆದರೆ ಅವನು ರೋಗಿಯ ಬಳಿಗೆ ಬಂದೊಡ ನೆಯೆ ರೋಗಿಗೆ ಎದೆ ಭಾರ ಹೆಚ್ಚಿ ನರಳುವುದೂ ನೆತ್ತರು ಕಾರುವುದೂ ಹೆಚ್ಚಾಯಿತು. ಡಾಕ್ಟರು ಬೇಗಬೇಗ ಪರೀಕ್ಷೆ ನಡೆಸಿ, ರೋಗದ ಲಕ್ಷಣ ತನಗೇನೂ ಗೊತ್ತಾಗದಿದ್ದರೂ ದೊಡ್ಡದೊಂದು ಲ್ಯಾಟಿನ್ ಹೆಸರನ್ನು ಹೇಳಿ, ಬಣ್ಣದ ನೀರನ್ನು ಔಷಧಿಯಾಗಿ ಕೊಟ್ಟು ಹೋದನು. ಅವನು ದೂರ ದೂರ ಹೋದಹಾಗೆಲ್ಲಾ ರೋಗಿ ಮೊದಲಿದ್ದ ಸ್ಥಿತಿಗೆ ಬಂದನು.

ಆ ಹೆಂಗಸಿಗೆ ಡಾಕ್ಟರಲ್ಲಿ ಸ್ವಲ್ಪವೂ ನಂಬುಗೆ ಇರಲಿಲ್ಲ. ಪುರೋಹಿತರನ್ನು ಕರೆಯಿಸಬೇಕೆಂದು ಸೂಚಿಸಿದಳು. ಏಕೆಂದರೆ, ಯಾವುದೊ ರಣ ಪಿಶಾಚಿಯ ಚೇಷ್ಟೆಯೆ ಗಂಡನ ರೋಗಕ್ಕೆ ಕಾರಣವೆಂದು ಆಕೆ ನಿಸ್ಸಂದೇಹವಾಗಿ ನಂಬಿದ್ದಳು.

ವಿಶ್ವಾಮಿತ್ರನು ಒಪ್ಪದಿದ್ದರೂ ಪರಶುರಾಮನು, "ನೋಡಿಬಿಡೋಣ" ಎಂದು ಭಟ್ಟರನ್ನೂ ಕರೆಯಿಸಿದನು. ಅವನಿಗೊ ರೋಗಕ್ಕೆ ಕಾರಣ ಸ್ವಲ್ಪವೂ ತಿಳಿಯದಿದ್ದರೂ ಒಂದು ಪಿಶಾಚಿಯ ಹೆಸರನ್ನು ಹೇಳಿ; ಅದಕ್ಕೆ ಮಾಯಾಮಂತ್ರ ಮಾಡಿ ತಡೆಗಟ್ಟಿದ್ದೇನೆ, ಎಂದು ಹೇಳಿ, ಚಿನ್ನದ ನಾಣ್ಯಗಳನ್ನು ದಕ್ಷಿಣೆ ತೆಗೆದುಕೊಂಡು ತೃಪ್ತನಾಗಿ ಹೋದನು.

ವಿಶ್ವಾಮಿತ್ರನು ಪರಶುರಾಮನನ್ನು ಕುರಿತು "ಈ ಪುರೋಹಿತರ ಗುಂಪೆಲ್ಲವೂ ಒಂದೇ! ಸುಲಿಗೆ! ಸುಲಿಗೆ!! ಸುಲಿಗೆ!!! ಹಿಂದೆ ಆ ವಸಿಷ್ಠ ಸುಲಿದ ಹಾಗೆಯೆ ಇಂದು ಈ ಭಟ್ಟನೂ ಸುಲಿಯುತ್ತಿದ್ದಾನೆ! ಅವನಂತೂ ರಘುವಂಶಕ್ಕೆ ಶನಿ ಹಿಡಿದಹಾಗೆ ಹಿಡಿದುಬಿಟ್ಟಿದ್ದ! ಇಕ್ಷ್ವಾಕು, ರಘು, ದಿಲೀಪ, ದಶರಥ, ರಾಮ—ಎಲ್ಲರನ್ನೂ ಜೀವ ಹಿಂಡಿಬಿಟ್ಟ ಪೌರೋಹಿತ್ಯ ಮಾಡಿ!... ನಾನು ಹೇಳಲಿಲ್ಲವೆ ನಿನಗೆ ಪುರೋಹಿತರನ್ನು ಕರೆಸುವುದು ಬೇಡಾ ಎಂದು" ಎಂದು ಹೇಳಿದನು.

ಋಷಿಗಳಿಬ್ಬರೂ ಆ ಗುಡಿಸಲಲ್ಲಿಯೆ ಇದ್ದು ಕೊಂಡು ರೈತನ ರಹಸ್ಯ ರೋಗಕ್ಕೆ ಕಾರಣವನ್ನೂ ಔಷಧಿಯನ್ನೂ ಕಂಡುಹಿಡಿಯಲು ಪ್ರಯತ್ನಿಸಿ ದರು. ಎಲ್ಲ ನಿಷ್ಫಲವಾಯಿತು.

ಚಿನ್ನದ ನಾಣ್ಯಗಳನ್ನು ಯಥೇಚ್ಛವಾಗಿ ನೀಡುವವರು ಆ ಗುಡಿಸಿಲಿನಲ್ಲಿ ಇಳಿದು ಕೊಂಡಿದ್ದಾರೆ ಎಂಬ ಸುದ್ದಿ ಹಬ್ಬಿದಮೇಲೆ, ಸುತ್ತಮುತ್ತಲಿದ್ದ ಊರಿನವರಿಗೂ ಅಧಿಕಾರಿ ಗಳಿಗೂ ರೈತನ ಯೋಗಕ್ಷೇಮದ ಚಿಂತೆ ಹೆಚ್ಚಾಗಿ ಅದುವರೆಗೆ ಅಲ್ಲಿಗೆ ಕಾಲಿಡದಿದ್ದವರೆಲ್ಲರೂ ಬಂದು ಬಂದು ವಿಚಾರಿಸಿಕೊಂಡು ಹೋಗ ತೊಡಗಿದರು.

ಅಧಿಕಾರಿಗಳು ಬಂದಾಗಲೂ ಡಾಕ್ಟರೂ ಪುರೋಹಿತರೂ ಬಂದಾಗ ಆಗಿದ್ದಂತೆ, ರೈತನ ಎದೆನೋವು ಇಮ್ಮಡಿಯಾಗುತ್ತಿತ್ತು.

ಕೆಲವು ದಿನಗಳಾದಮೇಲೆ ಒಂದು ದಿನ ಈ ವಿಚಾರವು ಧ್ಯಾನ ಮಾಡುತ್ತಿದ್ದ ವಿಶ್ವಾಮಿತ್ರನಿಗೆ ಹೊಳೆಯಿತು!—ಆ ರೋಗದ ರಹಸ್ಯವನ್ನು ತಿಳಿಯುವುದಕ್ಕೆ ದೇವವೈದ್ಯನಾದ ಧನ್ವಂತರಿ ಯೊಬ್ಬನಿಗೇ ಸಾಧ್ಯವೆಂದು. ಆ ಸೂಚನೆ ಪರಶುರಾಮನಿಗೂ ಸಮ್ಮತವಾಗಿ, ಧನ್ವಂತರಿಗೆ

ಹೇಳಿ ಕಳುಹಿಸಿದರು. ಧನ್ವಂತರಿ ಸಾಮಾನ್ಯ ವೈದ್ಯನ ವೇಷಧಾರಣೆ ಮಾಡಿ ಶೀಘ್ರವಾಗಿ ಅಲ್ಲಿಗೆ ಬಂದನು.

ರೈತನ ಎದೆನೋವಿನ ಗೋಳನ್ನು ನೋಡಿ, ನೆತ್ತರು ಹೆಪ್ಪುಗಡಿಸುವ ಆ ನರಳುದನಿಯನ್ನು ಕೇಳಿ ಕಕ್ಕಾಬಿಕ್ಕಿಯಾದನು. ಆದರೂ ಉತ್ತರ ಕ್ಷಣದಲ್ಲಿ ತಾನು ವೈದ್ಯನೆಂಬುದನ್ನು ನೆನಪಿಗೆ ತಂದುಕೊಂಡು ಧೈರ್ಯತಾಳಿ ರೋಗಿಯ ದೇಹಪರೀಕ್ಷೆಗೆ ಕೈಯಿಟ್ಟನು.

ವಿಶ್ವಾಮಿತ್ರ, ಪರಶುರಾಮರೂ ರೈತನ ಹೆಂಡತಿಯಂತೆಯೆ ಕಾತರ ಹೃದಯರಾಗಿ ತುಟಿದೆರೆಯದೆ ನಿಂತು ನೋಡುತ್ತಿದ್ದರು! ರೋಗಿಯ ನರಳುಗಳ ನಡುವೆ ಆ ನಿರೀಕ್ಷೆಯ ನಿಶ್ಶಬ್ದದಲ್ಲಿ ಅವರು ಉಸಿರಾಡುವುದೂ ಕೇಳಿಸುತ್ತಿತ್ತು.

ಬಹಳ ಕಾಲ ಪರೀಕ್ಷೆ ನಡೆಸಿದ ತರುವಾಯ ಧನ್ವಂತರಿ, ಋಷಿಗಳ ಕಡೆಗೆ ವ್ಯಂಗ್ಯಪೂರ್ಣವಾಗಿ ದೃಷ್ಟಿಸಿದನು. ರೈತನ ಹೆಂಡತಿ ಆ ದೃಷ್ಟಿಯಲ್ಲಿದ್ದ ನಿರಾಶೆಯನ್ನು ಕಂಡು ನೀರವವಾಗಿ ಅಳಲಾರಂಭಿಸಿದಳು.

ರೈತನ ಹೆಂಡತಿಯ ದೃಷ್ಟಿಗೆ ಮಾತ್ರ ಧನ್ವಂತರಿ ನೋಡುತ್ತಿದ್ದ ಹಾಗೆ ಕಾಣಿಸುತ್ತಿದ್ದಿತೆ ಹೊರತು ನಿಜವಾಗಿಯೂ ದೇವವೈದ್ಯನೂ ಋಷಿಗಳೂ ಸಂಭಾಷಿಸುತ್ತಿದ್ದರು:

ಧನ್ವಂತರಿ ಹೇಳಿದನು "ಇದು ದೈಹಿಕ ರೋಗವಲ್ಲ."

ಪರಶುರಾಮನು "ಆತ್ಮದ್ದೇನು?" ಎಂದು ಕೇಳಿದನು.

ಧನ್ವಂತರಿ ತಲೆಯಲ್ಲಾಡಿಸಿ 'ಅದೂ ಅಲ್ಲ' ಎಂಬುದಾಗಿ ಸೂಚಿಸಿದನು.

"ಹಾಗಾದರೆ?" ಎಂದು ವಿಶ್ವಾಮಿತ್ರನು ಬೆರಗಾದನು.

ಧನ್ವಂತರಿ ಹೇಳಿದನು: "ದೇಹದ ರೋಗವಾಗಿದ್ದರೆ ದೇಹದಲ್ಲಿ ಇರಬೇಕಾಗಿತ್ತು. ಆದರೆ ನಾನು ಚೆನ್ನಾಗಿ ಪರೀಕ್ಷಿಸಿದ್ದೇನೆ; ಅಲ್ಲಿ ಎಲ್ಲಿಯೂ ಇಲ್ಲ. ಆತ್ಮದ್ದಾಗಿದ್ದರೆ ಪಾಪರೂಪದಿಂದ ತೋರಬೇಕಾಗಿತ್ತು. ಆದರೆ ಈ ಸರಳ ಸಾಮಾನ್ಯ ಜೀವನದ ರೈತನಿಗೆ ಆ ರೋಗ ಇನ್ನೂ ತಗುಲಿಲ್ಲ. ಆದ್ದರಿಂದ." ಎಂದು ಹೇಳುತ್ತಾ ಜೇಬಿನಿಂದ ಒಂದು ದಿವ್ಯಯಂತ್ರವನ್ನು ಹೊರಕ್ಕೆ ತೆಗೆದು ತೋರಿ (ಅದೂ ರೈತನ ಹೆಂಡತಿಯ ದೃಷ್ಟಿಗೆ ಅಗೋಚರವಾಗಿತ್ತು) "ಇದರಿಂದ ನೋಡಿದರೆ ರಹಸ್ಯವೇನಿದ್ದರೂ ಗೊತ್ತಾಗುತ್ತದೆ" ಎಂದು ರೋಗಿಗೆ ತುಸು ದೂರವಾಗಿ ನಿಂತು ಆ ದಿವ್ಯ ಯಂತ್ರದ ಮುಖಾಂತರ ಸಮೀಕ್ಷಿಸಲಾರಂಭಿಸಿದನು.

ವಿಶ್ವಾಮಿತ್ರ, ಪರಶುರಾಮರು ನಿಂತು ನೋಡುತ್ತಿದ್ದ ಹಾಗೆಯೇ ದಿವ್ಯಯಂತ್ರದಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಧನ್ವಂತರಿಯ ವದನವು ಕೆಂಪೇರಿತು. ವಕ್ಷಸ್ಥಲವು ಉಸುರಿನ ಜೋರಾಟದಿಂದ ಮೇಲಕ್ಕೂ ಕೆಳಕ್ಕೂ ಹಾರತೊಡಗಿತು. ಕಣ್ಣುಗಳಿಂದ ನೀರು ಉಕ್ಕಿ ಹನಿ ಹನಿಯಾಗಿ ಕೆನ್ನೆಗಳ ಮೇಲೆ ಉರುಳಿ ನೆಲಕ್ಕೆ ಬಿದ್ದು ಹೀರಿಹೋದುವು.

"ಅಯ್ಯೊ ಪಾಪಿಗಳೇ" ಎಂದು ಧನ್ವಂತರಿ ಆನೆ ಘೀಳಿಡುವಂತೆ ಕೂಗಿದನು. ಆದರೆ ಮನುಷ್ಯ ಮಾತ್ರದವಳಾಗಿದ್ದ ರೈತನ ಹೆಂಡತಿಗೆ ಅವನು ಕೆಮ್ಮಿದಂತೆ ಮಾತ್ರ ಕೇಳಿಸಿತ್ತು!

ಋಷಿಗಳಿಬ್ಬರೂ ಬೆಚ್ಚಿಬಿದ್ದು "ಏನು? ಏನು? ಏನಾಯ್ತು? ಏನಾಯ್ತು?" ಎಂದು ಧನ್ವಂತರಿಯ ಬಳಿಗೆ ಓಡಿದರು.

ಧನ್ವಂತರಿಯು ಮಾತಾಡದೆ ಯಂತ್ರವನ್ನು

## ಗೆಳತಿ

ಸಿಡಿಲು—ಮಿಂಚುಗಳಲಿ
ನಿನ್ನ ಶಕ್ತಿಯೇ ಸಂಚರಿಸುತಿದೆ ಗೆಳತಿ!
ಮೋಡಗಳ ಕರಗಿಸಿ
ವಾತ್ಸಲ್ಯದ ಮಳೆ ಸುರಿಸುವಾಕೆಯೂ ನೀನೇ ಗೆಳತಿ!

● ಡಾ। ಪಂಚಾಕ್ಷರಿ ಹಿರೇಮಠ



## ಡಾ। ಕುವೆಂಪು ಕಥೆ: 'ಧನ್ವಂತರಿಯ ಚಿಕಿತ್ಸೆ'

# ಕ್ರಾಂತಿಯ ಸೂಚನೆ

### ಆಯ್ಕೆ ಮತ್ತು ವಿಮರ್ಶೆ: ಪ್ರೊ। ಎಲ್. ಎಸ್. ಶೇಷಗಿರಿರಾವ್

ಕುವೆಂಪು ಅವರು ಕಥೆಗಳನ್ನು ಬರೆದದ್ದು ಕಡಿಮೆ. ಒಟ್ಟು 17 ಕಥೆಗಳನ್ನು ಬರೆದರು. ಅನೇಕ ಕಥೆಗಳು ಪೇಲವ, ಅತಿ ಆದರ್ಶದಿಂದ ಮನುಷ್ಯ ಸ್ವಭಾವ ಮಸುಕಾಗಿ ಬಿಡುತ್ತದೆ. ಆದರೆ 'ಧನ್ವಂತರಿಯ ಚಿಕಿತ್ಸೆ' ಒಂದು ವಿಶಿಷ್ಟವಾದ ಕೃತಿ.

ಸಾಹಿತ್ಯ ಕೃತಿ ಎಂದಷ್ಟೇ ದೃಷ್ಟಿಯಿಂದ ಈ ಕಥೆಯನ್ನು ನೋಡಿದರೆ ಹಲವು ಮಿತಿಗಳು ಗೋಚರಿಸಬಹುದು. ಆದರೆ ಭಾರತದ ಒಂದು ಕಟು ಸತ್ಯಕ್ಕೆ ಕುವೆಂಪು ಅವರು ಈ ಕಥೆಯಲ್ಲಿ ಮರೆಯಲಾಗದ ರೂಪವನ್ನು ಕೊಟ್ಟರೆನ್ನುವುದು ಮುಖ್ಯ. ಈ ಕಟು ಸತ್ಯಕ್ಕೆ ರೂಪ ಕೊಡಲು ಅವರು ಪೌರಾಣಿಕ ಚೌಕಟ್ಟನ್ನು ಬಳಸಿಕೊಂಡರೆನ್ನುವುದೂ ಮುಖ್ಯ. 1946-47ರಲ್ಲಿ ಪ್ರಗತಿಶೀಲ ಗಾಳಿ ಬೀಸಿತ್ತು. ಅದಕ್ಕೆ ಹಲವು ವರ್ಷಗಳ ಮೊದಲೇ ಕುವೆಂಪು ಅವರು ಒಂದು ಇಡೀ ವರ್ಗದ ಶೋಷಣೆಗೆ ಕ್ರಾಂತಿಯ ಪರಿಹಾರವನ್ನು ಸೂಚಿಸಿದರೆಂಬುದು ಗಮನಾರ್ಹ ಸಂಗತಿ. ಈ ಪರಿಹಾರವನ್ನು ವಜ್ರಸಂಕಲ್ಪದ ಮೂರ್ತಿ ಸ್ವರೂಪನಾದ ಬ್ರಹ್ಮರ್ಷಿ ವಿಶ್ವಾಮಿತ್ರ ಕಾರ್ಯಗತ ಮಾಡುತ್ತಾನೆ ಎನ್ನುವುದು ಮಹತ್ವದ ಸಂಗತಿ.

ಮನುಷ್ಯನ ಬದುಕನ್ನು, ಆ ಬದುಕಿನಾಚೆ ನಿಂತು ನೋಡುವ ವಿಶಿಷ್ಟ ಪ್ರಯತ್ನ ಇದು. ಈ ಪ್ರಯತ್ನದಲ್ಲಿ ಮುಖ್ಯವಾಗಿ ಭಾಗಿಗಳಾಗುವ ದೇವತೆಗಳ ಆಯ್ಕೆಯನ್ನು ಗಮನಿಸಬೇಕು; ಇಲ್ಲಿ ದೇವಗುರು ಬೃಹಸ್ಪತಿ ಬರುವುದಿಲ್ಲ. ನಾರದನು, ಭೂಮಿಯಿಂದ ಕೇಳಿಬರುವ ನರಳುವಿಕೆಯ ನಿರಂತತೆಗೆ ಸಾಕ್ಷಿಯಾಗಿ ಕಾಣಿಸಿ ಮಾಯವಾಗುತ್ತಾನೆ. ಕ್ರಿಯಾಶೀಲವಾಗಿ ಭಾಗವಹಿಸುವವರು–ವಿಶ್ವಾಮಿತ್ರ, ಪರಶುರಾಮ ಮತ್ತು ದೇವಲೋಕದ ವೈದ್ಯ ಧನ್ವಂತರಿ. ವಿಶ್ವಾಮಿತ್ರ ಮತ್ತು ಪರಶುರಾಮರನ್ನು ಕುರಿತು ಹಲವಾರು ಪೌರಾಣಿಕ ಕಥೆಗಳಿವೆ; ಅವರ

ಋಷಿಗಳ ಕಡೆಗೆ ನೀಡಿದನು. ಋಷಿಗಳಿಬ್ಬರೂ ಯಂತ್ರದಲ್ಲಿ ಕಣ್ಣಿಟ್ಟು ನೋಡತೊಡಗಿದರು; ನೋಡಿ ಬೆಚ್ಚಿ ಬಿದ್ದರು;

ರೈತನ ಎದೆಯಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾ ಪರ್ವತಾಕಾರವಾಗಿ ನಿಂತಿತು. ಋಷಿಗಳು ನೋಡಿಕೊಂಡು ಬಂದಿದ್ದ ಆ ಮುಖ್ಯ ಪಟ್ಟಣವು ಅದರ ನೆತ್ತಿಯಲ್ಲಿ ರಾಜಿಸುತ್ತಿದೆ! ಅಲ್ಲಿಯ ದೇವಾಲಯಗಳೂ ವಿದ್ಯಾನಿಲಯಗಳೂ ಕ್ರೀಡಾಮಂದಿರಗಳೂ ಪ್ರಮೋದವನಗಳೂ ಕರ್ಮಸೌಧಗಳೂ ಕಾರ್ಖಾನೆಗಳೂ ರಾಜಪ್ರಸಾದಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಕೀರ್ತಿಯಿಂದ ಮೆರೆಯುತ್ತಿವೆ!

"ಅಯ್ಯೋ, ಅಯ್ಯೋ; ಅಯ್ಯೋ! ಅವನು ಇದುವರೆಗೆ ಸಾಯದೆ ಬದುಕಿದ್ದುದೆ ಹೆಚ್ಚಳವಪ್ಪ! ಮಂದರಪರ್ವತವನ್ನು ಹೊತ್ತ ಕೃಷ್ಣನು ಕೂಡ ನುಚ್ಚುನೂರಾಗುತ್ತಿದ್ದನಲ್ಲಾ ಈ ರಾಜ್ಯದ ಭಾರ ಅವನ ಎದೆಯ ಮೇಲೆ ಬಿದ್ದಿದ್ದರೆ!" ಎಂದು ಪರಶುರಾಮನು ಕೂಗಿಕೊಂಡನು.

ವಿಶ್ವಾಮಿತ್ರನು ರೋಷದಿಂದ ಹಲ್ಲುಕಡಿಯುತ್ತಾ "ಜಾಮದಗ್ನಿ, ನೀನಂದು ಆಳುವವರನ್ನೆಲ್ಲಾ ನಿರ್ನಾಮಮಾಡಿ, ಸಮತಾ ಪ್ರಚಾರಕ್ಕೆ ಜೀವಮಾನವನ್ನೆಲ್ಲ ತೆತ್ತುದು ವ್ಯರ್ಥವಾಯಿತು!" ಎಂದನು.

"ನೀನು ಕೂಡಾ ಮೇಲು ಕೀಳುಗಳೆಂಬ ಭೇದವನ್ನು ತೊಡೆದುಹಾಕಲು ಬಾಳನ್ನೇ ತೇಯಲಿಲ್ಲವೆ? ಅದೂ ವ್ಯರ್ಥವಾಗಿದೆಯಲ್ಲಾ ನೋಡು!" ಎಂದು ಪರಶುರಾಮನು ಧನ್ವಂತರಿಯ ಕಡೆಗೆ ನೋಡಿ, "ಬೇಗ ಹೇಳು, ಧನ್ವಂತರಿ, ಏನು ಮಾಡಿದರೆ ಈ ರೈತನು ಬದುಕುತ್ತಾನೆ?" ಎಂದನು.

"ಎದೆಯ ಮೇಲಿರುವ ರಾಜ್ಯದ ಭಾರವನ್ನು

ವಿಷಯದಲ್ಲಿ ಬೇರೆ ಬೇರೆಯವರಿಗೆ ಬೇರೆ ಬೇರೆ ಕಲ್ಪನೆಗಳಿರುವುದೂ ಸಾಧ್ಯ. ಕಥೆಯಲ್ಲಿ ಅವರ ಬದುಕಿನ ಹಲವು ಮುಖಗಳತ್ತ ಕಡೆಗಣ್ಣಿನ ನೋಟವಿದೆ. ಆದರೆ ಕಥೆಯ ಚೌಕಟ್ಟಿನಲ್ಲಿ ಅವರು ಸ್ಥಾಪಿತವಾಗುವುದು ದುಷ್ಟ ವಿನಾಶಕ ಕ್ರಾಂತಿಕಾರಿ ಶಕ್ತಿಗಳಾಗಿ. ವಿಶ್ವಾಮಿತ್ರನು ರೋಷದಿಂದ ಹಲ್ಲು ಕಡಿಯುತ್ತಾ, 'ಜಾಮದಗ್ನಿ, ನೀನಂದು ಆಳುವವರನ್ನೆಲ್ಲಾ ನಿರ್ನಾಮ ಮಾಡಿ, ಸಮತಾ ಪ್ರಚಾರಕ್ಕೆ ಜೀವಮಾನವನ್ನೆಲ್ಲ ತೆತ್ತುದು ವ್ಯರ್ಥವಾಯಿತು' ಎನ್ನುತ್ತಾನೆ. ('ಸಮತಾ ಪ್ರಚಾರಕ್ಕೆ' ಎನ್ನುವ ಪದವನ್ನು ಗಮನಿಸಿ, ಪೌರಾಣಿಕ ಸಾಮುಗ್ರಿಗೆ ಕುವೆಂಪು ಹೊಸ ಅರ್ಥ ತುಂಬುತ್ತಿದ್ದಾರೆ.) ಪರಶುರಾಮನು, "ನೀನು ಕೂಡಾ ಮೇಲುಕೀಳುಗಳೆಂಬ ಭೇದವನ್ನು ತೊಡೆದು ಹಾಕಲು ಬಾಳನ್ನೆ ತೇಯಲಿಲ್ಲವೆ?" ಎನ್ನುತ್ತಾನೆ. ಕ್ರಾಂತಿಯ ವಿರುದ್ಧ ಸಾಮಾನ್ಯವಾಗಿ ಎತ್ತುವ ಆಕ್ಷೇಪಕ್ಕೆ ("ಲೋಕವೆಲ್ಲ ನಿರ್ನಿಯಮವಾಗಿ ಅರಾಜಕವಾಗಿ ಅವ್ಯವಸ್ಥೆಯಾದರೆ?") ಸರ್ವರೋಗ ನಿವಾರಕನಾದ ದೇವವೈದ್ಯ ಧನ್ವಂತರಿಯ ಬಾಯಿಂದ ಸಮಾಧಾನ ಹೇಳಿಸುತ್ತದೆ ಕಥೆ. ಕಥೆಯ ಮುಕ್ತಾಯ ಭಾಗದಿಂದ ಅದರ ಹಲವು ಹಿಂದಿನ ಭಾಗಗಳಿಗೆ (ಪುರೋಹಿತನ ಭೇಟಿ, ಸರಕಾರಿ ಡಾಕ್ಟರನ ಭೇಟಿ, ಗುಡಿಯ ಪೂಜಾರಿಯ ವರ್ತನೆ, ಹರಿಕಥೆ, ನರ್ತಕಿಯ ಪ್ರಸಂಗ) ಹೇಗೆ ಅರ್ಥ ಬರುತ್ತದೆ ಎನ್ನುವುದನ್ನು ಗಮನಿಸಬೇಕು. (ಕೆಲವು ಕಡೆ ಕಥೆ ವಾಚ್ಯವಾಗುತ್ತದೆ.) ದೇವವೈದ್ಯನಿಂದ ರೈತನಿಗೆ ಚೈತನ್ಯ ತುಂಬಿ, ಅವನ ಎದೆಯ ಮೇಲಿನ ದೇವಾಲಯಗಳೂ ಅರಮನೆಗಳೂ ಇತರ ಹೊರೆಯೂ ಉರುಳಿ ಬಿದ್ದಿದ್ದರೆ ಕಥೆ ಇನ್ನೂ ಅರ್ಥವತ್ತಾಗಿರುತ್ತಿತ್ತೇನೊ. ಆದರೆ ಈಗಿರುವಂತೆ, ಜಗತ್ತಿನ ಕಲ್ಯಾಣಕಾರಕ ಶಕ್ತಿಗಳೇ ಮಾನವ ಲೋಕದಲ್ಲಿ ರೈತನ ಶೋಷಣೆಯ ವಿರುದ್ಧ ಕ್ರಾಂತಿಯನ್ನು ಪ್ರಾರಂಭಿಸುತ್ತವೆ ಎನ್ನುವ ಸೂಚನೆ ಇದೆ.

ಆಧುನಿಕ ಕನ್ನಡ ಸಣ್ಣ ಕಥೆಯ ಪ್ರಾರಂಭದ ಘಟ್ಟದಲ್ಲೆ ಆ ಪ್ರಕಾರದ ಸಾಮರ್ಥ್ಯವನ್ನೆ ಪರೀಕ್ಷಿಸಿ ನೋಡುವಂತಹ ಇಂತಹ ವಿಶಿಷ್ಟ ಕಥೆ ಬಂದದ್ದು ವಿಸ್ಮಯಕರ. ಸಣ್ಣ ಕಥೆಯ ಮಿತವಾದ ಪರಿಧಿಯಲ್ಲಿ ಕುವೆಂಪು ಒಂದು ನಾಡಿನ ಸ್ಥಿತಿಯ ವಿಶ್ಲೇಷಣೆಯನ್ನೆ ಸಾಧಿಸಿದ್ದಾರೆ. ಇಂತಹ ಕಥೆಗಳನ್ನು ಕೃತಿಯ ಸಾಹಿತ್ಯ ಸ್ವರೂಪವಷ್ಟಕ್ಕೆ ಮೀಸಲಾದ ಮಾನದಂಡಗಳಿಂದ ಅಳೆಯಲಾಗುವುದಿಲ್ಲ. ●

ತೆಗೆದುಹಾಕಿದರೆ ಕಾಯಿಲೆ ಸರಿಹೋಗುತ್ತದೆ" ಎಂದನು ಧನ್ವಂತರಿ.

"ಲೋಕವೆಲ್ಲ ನಿರ್ನಿಯಮವಾಗಿ ಅರಾಜಕವಾಗಿ ಅವ್ಯವಸ್ಥೆಯಾದರೆ?"

ಧನ್ವಂತರಿ ಸ್ವಲ್ಪ ಮುನಿದು ಕಣ್ಣು ಕೆಂಪಗೆ ಮಾಡಿ, "ನಿಮಗೆ ಬುದ್ಧಿಯಿಲ್ಲ! ಮೊದಲು ರೋಗ ನಿವಾರಣೆಯಾಗಲಿ! ಆಮೇಲೆ ದೃಢಕಾಯನಾಗುವ ಅವನೇ ಕೆಳಕ್ಕೆ ಬಿದ್ದ ರಾಜ್ಯದ ಭಾರವನ್ನು ಎದೆಯಮೇಲೆ ಹಾಕಿಸಿಕೊಳ್ಳುವುದಕ್ಕೆ ಬದಲಾಗಿ, ಹೆಗಲಮೇಲೆ ಹೊತ್ತು, ರಾಜ್ಯ ಭಾರವನ್ನು ವಹಿಸಿ ನಿರ್ವಹಿಸುತ್ತಾನೆ!" ಎಂದು ಗದರಿಸಿದನು.

ಒಡನೆಯೆ ವಿಶ್ವಾಮಿತ್ರನು ಗೂಳಿಯಂತೆ ಹೂಂಕರಿಸಿದನು. ಆ ಹೂಂಕಾರದಿಂದ ಮಹಾ ಭಯಂಕರವಾಗಿದ್ದ ಕ್ರಾಂತಿಭೂತಗಳು ಮೈದೋರಿ ನಿಂತು ತಲೆ ಬಾಗಿ ಕೈಮುಗಿದು ಬೆಸನೇನೆಂದು ಬೇಡಿದುವು.

"ಹೋಗಿ, ಆ ರೈತನ ಎದೆಯ ಮೇಲಿರುವ ಭಾರವನ್ನೆಲ್ಲಾ ನೆಲಕ್ಕುರುಳಿಸಿ" ಎಂದು ಗರ್ಜಿಸಿ ಕೈ ಬೀಸಿದನು.

ಒಡನೆಯೆ ರಾಜ್ಯದಲ್ಲಿ ಸಿಡಿಲು ಮಳೆ ಬಿರುಗಾಳಿ ಭೂಕಂಪಗಳು ತೋರಿ ಉತ್ಪಾತವಾಯಿತು. ನೋಡುತ್ತಿದ್ದಂತೆ, ರಾಜವೇಶ್ಮವು ಉರುಳಿತು: ದೇವಾಲಯದ ಗೋಪುರಗಳೂ ಮಹಾರವದಿಂದ ಕೆಳಗೆ ಬಿದ್ದವು...

...ರೈತನ ನರಳುವಿಕೆ ಕ್ರಮೇಣ ಕಡಿಮೆಯಾಗುವಂತೆ ತೋರಿತು. ಶ್ವಾಸೋಚ್ಛ್ವಾಸ ಸಹಜವಾಗತೊಡಗಿತು. ಕಣ್ಣಿನಲ್ಲಿ ಸಂತೋಷದ ಬೆಳಕೂ ಮಿಂಚಿತು... ಮತ್ತೆ... ತುಸು ಹೊತ್ತಿನಲ್ಲಿಯೆ, ನೋಡುತ್ತಿದ್ದವರಿಗೆ ಆಶ್ಚರ್ಯವಾಗುವಂತೆ, ನಗುಮೊಗವಾಗಿ ಮೇಲೆದ್ದು ನಿಂತು, ಋಷಿಗಳಿಗೆ ಕೈ ಮುಗಿದನು. ●

## 1991ರ ಕೆಲವು

# ಉತ್ತಮ ಕನ್ನಡ ಕೃತಿಗಳು

● ಟಿ. ಪಿ. ಅಶೋಕ

ಒಂದು ಅನಧಿಕೃತ ಅಂದಾಜಿನಂತೆ 1991ರಲ್ಲಿ ಸುಮಾರು 1500 ಕನ್ನಡ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ಸುಮಾರು 400 ಪುನರ್ ಮುದ್ರಣಗಳೂ ಸೇರಿವೆ. ಫೆಬ್ರವರಿ ಮೊದಲ ವಾರದಲ್ಲಿ, ಈ ಲೇಖನ ಬರೆಯುತ್ತಿರುವ ಹೊತ್ತಿನಲ್ಲಿ, 1991ರ ಮುದ್ರೆಯನ್ನು ಹೊತ್ತ ಪ್ರಕಟಣೆಗಳು ಬರುತ್ತಲೇ ಇವೆ. ಸಹಜವಾಗಿಯೇ ಈ ಎಲ್ಲ ಪ್ರಸಕ್ತಗಳನ್ನು ನಾನು ಸ್ವತಃ ನೋಡಲು ಸಾಧ್ಯವಾಗಿಲ್ಲ. ನನ್ನ ಗಮನಕ್ಕೆ ಬಂದ ಸುಮಾರು 500 ಪುಸ್ತಕಗಳಲ್ಲಿ 100ನ್ನು ಪ್ರಾತಿನಿಧಿಕವೆಂದು ಆಯ್ದಿದ್ದೇನೆ. ಈ ನೂರರಲ್ಲಿ ಆಯಾ ಪ್ರಕಾರಗಳಲ್ಲಿ ನನಗೆ, ವೈಯಕ್ತಿಕವಾಗಿ, ಅತ್ಯುತ್ತಮವೆಂದು ಅನ್ನಿಸಿದ ಪ್ರತ್ಯೇಕ ಪಟ್ಟಿಯನ್ನೂ ಕೊಟ್ಟಿದ್ದೇನೆ. ಹಾಗಾಗಿ ಇನ್ನೂ ಕೆಲವು ಉತ್ತಮ ಕೃತಿಗಳು ನನ್ನ ಪಟ್ಟಿಯಿಂದ ಹೊರಗೆ ಉಳಿದು ಬಿಟ್ಟಿದ್ದರೆ ಅದು ಉದ್ದೇಶಪೂರ್ವಕ ಅಲ್ಲವೆಂದು ಮೊದಲೇ ನಿವೇದಿಸಿಕೊಳ್ಳಬಯಸುತ್ತೇನೆ. ಈ ಲೇಖನವನ್ನು 1991ರ ಕನ್ನಡ ಪುಸ್ತಕಗಳ ಸಮಗ್ರ ಸಮೀಕ್ಷೆ ಎಂದು ಯಾರೂ ಭಾವಿಸಬಾರದು.

1991ರ ಪ್ರಕಟಣೆಗಳಲ್ಲಿ ಎದ್ದುಕಾಣುವುದು ತೇಜಸ್ವಿ ಮತ್ತು ಲಂಕೇಶರ ಕೃತಿಗಳು. ಇವರ ತಲಾ ಎರಡೆರಡು ಕೃತಿಗಳು ಒಂದೇ ವರ್ಷದಲ್ಲಿ ಪ್ರಕಟವಾಗಿರುವುದು ತುಂಬಾ ಸಂತೋಷದಾಯಕ. ಸಂಸ್ಕೃತದ ಭಾರವೂ ಇಲ್ಲದ ಇಂಗ್ಲಿಷಿನ ಭಾರವೂ ಇಲ್ಲದ ಅಚ್ಚಗನ್ನಡ ಶೈಲಿಯೊಂದನ್ನು ಇವರಿಬ್ಬರೂ ರೂಢಿಸಿಕೊಂಡಿದ್ದಾರೆ. ತೇಜಸ್ವಿಯವರ ಹಾಸ್ಯಪ್ರಜ್ಞೆ, ಲಂಕೇಶರ ಆರ್ದ್ರತೆ 91ರ ಅತ್ಯುತ್ತಮ ಸಾಹಿತ್ಯಿಕ ಅನುಭವವನ್ನು ರೂಪಿಸಿದವು ಎಂದು ಹೇಳಬಹುದು. ಕನ್ನಡದ ಈ ಇಬ್ಬರು ಶ್ರೇಷ್ಠ ಗದ್ಯ ಬರಹಗಾರರ ಶೃಂಗಸ್ಥಿತಿಯನ್ನು 91ರ ಅವರ ಕೃತಿಗಳಲ್ಲಿ ಕಾಣಬಹುದು. "ಕಿರಗೂರಿನ ಗಯ್ಯಾಳಿಗಳು", "ಕೃಷ್ಣೇಗೌಡರ ಆನೆ" ಎಂಬ ನೀಳ್ಗತೆಗಳನ್ನೂ "ಮಾಯಾಮೃಗ", "ರಹಸ್ಯ ವಿಶ್ವ" ಎಂಬ ಸಣ್ಣಕಥೆಗಳನ್ನೂ ಹೊಂದಿರುವ ತೇಜಸ್ವಿಯವರ ಹೊಸ ಕಥಾಸಂಕಲನ ತೇಜಸ್ವಿ ಕತೆಗಾರಿಕೆಯ ಮುಂದುವರಿದಿರುವ ಘಟ್ಟವೊಂದನ್ನು ಸೂಚಿಸುತ್ತಿದೆ. ವಾಸ್ತವತೆ ಮತ್ತು ಅದ್ಭುತ ರಮ್ಯಗಳನ್ನು ಬೆಸೆಯುತ್ತ ತಮಗೇ ವಿಶಿಷ್ಟವಾದ ವೈನೋದಿಕ ಧಾಟಿಯಲ್ಲಿ ತೇಜಸ್ವಿ ಬದುಕನ್ನು ನೋಡುತ್ತಾರೆ. ನಿರಾಯಾಸವಾಗಿ, ಆಕರ್ಷಕವಾಗಿ ಕತೆ ಹೇಳುತ್ತಾ ಕತೆ ಹೇಳುತ್ತಲೇ ನವುರಾಗಿ ತಮ್ಮ ದರ್ಶನವನ್ನೂ ಕಾಣಿಸಿಬಿಡುವುದು ತೇಜಸ್ವಿ ಧಾಟಿ. ಸಮಕಾಲೀನ ಸಾಮಾಜಿಕ ಜೀವನದ ಎಲ್ಲ ಓರೆಕೋರೆಗಳನ್ನು ಕಾಣಿಸುತ್ತಲೇ ಅವರು ಇವೆಲ್ಲದರ ಅಸಂಬದ್ಧತೆ, ಇವುಗಳನ್ನು ದಾಟಿಹೋಗಬೇಕಾದ ಆವಶ್ಯಕತೆ ಎರಡನ್ನೂ ಒಟ್ಟಿಗೇ ಸೂಚಿಸುತ್ತಾರೆ. ಹೀಗೆ ತಾತ್ವಿಕ ಅನ್ನಿಸುವಂಥ ತಿಳುವಳಿಕೆ ಮತ್ತು ಗಾಢ ಸಾಮಾಜಿಕ, ರಾಜಕೀಯ ಪ್ರಜ್ಞೆ ಇವರಲ್ಲಿ ಏಕತ್ರವಾಗಿ ದುಡಿಯುತ್ತದೆ. ತೇಜಸ್ವಿ ನಿರ್ಲಿಪ್ತ ಥಣ್ಣನೆಯ ನಿಲುವನ್ನು ತಾಳುವವರಲ್ಲ. ಅದೇ ವೇಳೆಯಲ್ಲಿ ಬದುಕಿನ ಸಮಸ್ಯೆಗಳಿಗೆ ಸರಳ ಪರಿಹಾರಗಳನ್ನು ಸೂಚಿಸುವವರೂ ಅಲ್ಲ. ಹೀಗೆ ಚಿಂತನೆ ಕ್ರಿಯೆಗಳಿಗೆ ಕಂದಕವೇರ್ಪಡದ ಒಂದು ಹದವನ್ನು ರೂಢಿಸಿಕೊಳ್ಳುತ್ತಿರುವುದರಿಂದಲೇ ತೇಜಸ್ವಿ ನಮ್ಮ ಕಾಲದ ದೊಡ್ಡ ಲೇಖಕರಾಗಿ ಬೆಳೆಯುತ್ತಿದ್ದಾರೆ. ಇದೆಲ್ಲ ರಗಳೆ ಬೇಡವೆಂದು ಸುಮ್ಮನೇ ಖುಶಿಗಾಗಿ ಓದಿಕೊಂಡರೂ ಎಲ್ಲ ಬಗೆಯ ಓದುಗರನ್ನು ಬೇರೆ ಬೇರೆ ಸ್ತರಗಳಲ್ಲಿ ರಂಜಿಸಬಲ್ಲ ಲೇಖಕ ತೇಜಸ್ವಿ. ಪರಂಪರಾಗತ

ಗ್ರಾಮೀಣ ಜೀವನ ವ್ಯವಸ್ಥೆಯಲ್ಲಿ ಸ್ತ್ರೀ ಚೈತನ್ಯ ವನ್ನೂ ಪ್ರತಿಭಟನೆಯನ್ನೂ ತಿಳಿಹಾಸ್ಯದಲ್ಲಿ ನಿರೂಪಿಸುವ "ಕಿರಗೂರಿನ ಗಯ್ಯಾಳಿಗಳು" ಕನ್ನಡದ ಅತ್ಯುತ್ತಮ ನೀಳ್ಗತೆಗಳಲ್ಲಿ ಒಂದು. ಸ್ಥಿತಿ–ಸಾಧ್ಯತೆ ಎರಡೂ ಹೀಗೆ ಒಟ್ಟಾಗಿ ನಿಜವಾಗಬಲ್ಲ ಅಪರೂಪದ ಬರವಣಿಗೆ ಇದು. ಬಂಡಾಯ ಸಾಹಿತ್ಯದ ಅತ್ಯುತ್ತಮ ಉದಾಹರಣೆ ಸಿಗುವುದು ಈ ಕತೆಯಲ್ಲಿ! ಮನುಷ್ಯ ಸ್ವಭಾವದ ಆಳಗಳನ್ನೂ ತೀರ ಗೋಜಲಾಗುವ ಸಾಮಾಜಿಕ ಸಂಬಂಧಗಳನ್ನೂ ತೇಜಸ್ವಿ ಇತರ ಮೂರು ಕತೆಗಳಲ್ಲಿ ಬಿಡಿಸಿರುವ ಪರಿ ಅನನ್ಯವಾಗಿದೆ. "ಪರಿಸರದ ಕತೆ"ಯಲ್ಲಿ ತೇಜಸ್ವಿ ಪರಿಸರದ ಬಗ್ಗೆ ತಮಗೆ ಕುತೂಹಲ ಬೆಳೆದು ಬಂದ ಬಗೆಯನ್ನು ಹಲವಾರು ದೃಷ್ಟಾಂತಗಳ ಮೂಲಕ, ಅದ್ಭುತ ವೆನ್ನಿಸುವ ವ್ಯಕ್ತಿಚಿತ್ರಗಳ ಮೂಲಕ ದಾಖಲಿಸಿ ದ್ದಾರೆ. ಇವುಗಳನ್ನು ಬಿಡಿ ಬಿಡಿ ಸಣ್ಣ ಕತೆ ಗಳಾಗಿಯೂ ಓದಿ ಆನಂದಿಸಬಹುದು. ನಮ್ಮ ಸುತ್ತಲ ಮನುಷ್ಯ ಪರಿಸರದಲ್ಲಿ ಮತ್ತು ಇತರ ಪ್ರಾಕೃತಿಕ ಪರಿಸರದಲ್ಲಿ ಹುದುಗಿರುವ ಅದ್ಭುತ ರಹಸ್ಯಗಳನ್ನು ಲೇಖಕರು ಇಲ್ಲಿ ಕಾಣಿಸುತ್ತ ಹೋಗಿದ್ದಾರೆ. ಸಾಮಾನ್ಯವಾದದ್ದೆಂದು ನಾವು ಭಾವಿಸುವ ಸಂಗತಿಗಳಲ್ಲಿನ ಅಸಾಮಾನ್ಯತೆ ಯನ್ನು ಸ್ಪರ್ಶಿಸುವುದು ಈ ಬರವಣಿಗೆಯ ಒಟ್ಟಾರೆ ಗುಣವೆಂದು ಹೇಳಬಹುದು. ತೇಜಸ್ವಿಗೆ ಇವು ಕೇವಲ ಮಧ್ಯಮ ವರ್ಗದ ಕುತೂಹಲ ಗಳಲ್ಲ. ಈ ರಹಸ್ಯಗಳನ್ನು ಪ್ರಸ್ತಾಪಿಸುವ ಕ್ರಮದಲ್ಲೇ ಜೀವನದೃಷ್ಟಿಯೂ ಪ್ರಬುದ್ಧ ಗೊಳ್ಳುತ್ತ ಹೋಗುತ್ತದೆ.. ಕಥನವು ದರ್ಶನಕ್ಕೆ ದುಡಿಯುತ್ತದೆ. ತೇಜಸ್ವಿಯವರ ಯಾವತ್ತೂ ಕಾಮಿಕ್ ಧಾಟಿ ಇಲ್ಲಿ ಅತ್ಯಂತ ಸೃಜನಶೀಲವಾಗಿ ಇವರ ಗ್ರಾಮೀಣ ಪಾತ್ರಗಳೆಲ್ಲ ಅಪಾರವಾದ ಜ್ಞಾನವನ್ನು ಹೊತ್ತ ಆದರೆ ಅದರ ಬಗ್ಗೆ ಗಾಢ ನಿರ್ಲಕ್ಷ್ಯವುಳ್ಳ ಅವಧೂತರ ಹಾಗೆ ಕಾಣುತ್ತಾರೆ. ಅಂಕೆ ಸಂಖ್ಯೆಗಳ ಕಗ್ಗದಲ್ಲಿ ನಿಲುಕದ ತೀರ ಮಾನವೀಯ ನೆಲೆಯಲ್ಲಿ ನಮ್ಮ ತಿಳುವಳಿಕೆ ಯನ್ನು ವಿಸ್ತರಿಸುತ್ತ ಹೋಗುತ್ತಿರುವ ತೇಜಸ್ವಿ ಬರವಣಿಗೆ ಯಾವುದೇ ಭಾಷೆಯ ಹೆಮ್ಮೆ.

ಲಂಕೇಶರು ತೇಜಸ್ವಿಯವರಷ್ಟೇ ಮುಖ್ಯ ರಾದ, ಪ್ರತಿಭಾವಂತರಾದ ಲೇಖಕರು. ಆದರೆ ತೇಜಸ್ವಿಯವರಿಗಿಂತ ತುಂಬಾ ಭಿನ್ನವಾಗಿ

**ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ 1991 ವರ್ಷ ಕಾಣಿಸಿದ ಉತ್ತಮ ಕೃತಿಗಳನ್ನು ಆಯ್ಕೆಮಾಡಿ, ವಸ್ತು–ಶೈಲಿ–ಸಾಧನೆಗಳ ಬಗ್ಗೆ ಹಿರಿಯ ವಿಮರ್ಶಕರಾದ ಟಿ. ಪಿ. ಅಶೋಕ ವಿಶೇಷಾಂಕಕ್ಕಾಗಿ ಸಿದ್ಧಪಡಿಸಿದ್ದಾರೆ. ಕನ್ನಡದ ಮನಸ್ಸು ಎಂದೂ ಒಂದೇ ಸೀಮಿತ ಪರಿಧಿಯಲ್ಲಿ ಸುತ್ತುತ್ತಿಲ್ಲ. ವೈವಿಧ್ಯಮಯತೆ ಮತ್ತು ವ್ಯಾಪಕತೆ ಈ ಕಾಲದ ಮುಖ್ಯಗುಣಗಳು.**

ಬರೆಯುತ್ತಾರೆ. ತಮ್ಮ ಸುತ್ತಲ ಎಲ್ಲ ಸಂಗತಿಗಳ ಬಗ್ಗೆ–ಸಾಹಿತ್ಯ, ಸಂಸ್ಕೃತಿ, ರಾಜಕೀಯ, ಕ್ರೀಡೆ, ಸಮಕಾಲೀನ ಜೀವನದ ವಿವಿಧ ಸಮಸ್ಯೆಗಳು–ಲಂಕೇಶ್ ಒಂದು ಬಗೆಯ ವೈಯಕ್ತಿಕ ತುರ್ತಿ ನಿಂದ ಬರೆದಿದ್ದಾರೆ. "ಟೀಕೆ ಟಿಪ್ಪಣಿ" ಕನ್ನಡದ ಅತ್ಯುತ್ತಮ ಗದ್ಯ ಸಂಕಲನಗಳಲ್ಲಿ ಒಂದು. ಇಲ್ಲಿನ ವಸ್ತು ವೈವಿಧ್ಯ ಕನ್ನಡದ ಮತ್ತಾವುದೇ ಗದ್ಯ ಬರಹಗಾರರಲ್ಲಿ ಕಾಣುವುದಿಲ್ಲ. ಲಂಕೇಶರ ಅತ್ಯುತ್ತಮ ಬರವಣಿಗೆಯಲ್ಲಿ ಕಾವ್ಯದ ಸೂಕ್ಷ್ಮತೆ, ಕಾದಂಬರಿಕಾರನ ಹರಹು ಒಟ್ಟೊಟ್ಟಿಗೇ ಅನುಭವಕ್ಕೆ ಬರುತ್ತವೆ. "ಗುಬ್ಬಚ್ಚಿಯ ಗೂಡು", "ಕೈ ಬಿಟ್ಟ ಕೋವಿ", "ಬಿಲೆ ಎಂಬ ಹುಡುಗ", "ಚರ್ಮದ ಚೆಂಡಿನ ಎದುರು", "ಕೊಟ್ಟ ಭಾಷೆಗೆ ತಪ್ಪಲಾರೆನು", "ತಮಿಳು ನಕ್ಷತ್ರ ಅಸ್ತಂಗತ", "ಸುಮ್ಮನೇ ಜೀವಿಸಿದ ಒಂದು ದಿನ", "ಹದಿಹರೆಯದವರನ್ನು ಕುರಿತು", "ಕುದುರೆ ಜೂಜಿನ ಮೋಜು" ಮೊದಲಾದ ಸೊಗಸಾದ ಬರಹಗಳನ್ನುಳ್ಳ 600 ಪುಟಗಳ ಈ ಬೃಹತ್ ಸಂಪುಟ ಕನ್ನಡ ಗದ್ಯದ ಸಾಧನೆಯ ಕತೆಯೇ ಆಗಿದೆ. ದಿನನಿತ್ಯದ ಪತ್ರಿಕೋದ್ಯಮದ ಗೋಳುಗಳಲ್ಲಿ ಕಣ್ಮರೆ

ಯಾಗದ ಲಂಕೇಶರ ಸೂಕ್ಷ್ಮಜ್ಞತೆ ಮೆಚ್ಚುಗೆ, ಗೌರವಗಳನ್ನು ಹುಟ್ಟಿಸುತ್ತದೆ. ಈ ವರ್ಷ "ಅಕ್ಕ" ಎಂಬ ಕಾದಂಬರಿಯನ್ನೂ ಲಂಕೇಶ್ ಪ್ರಕಟಿಸಿದ್ದಾರೆ. ಇದರ ಪ್ರೇರಣೆಯೂ ಪತ್ರಿಕೋದ್ಯಮದಿಂದ ಬಂದದ್ದೇ. ಕೊಳೆಗೇರಿಯ ಹುಡುಗನೊಬ್ಬನ ಕಣ್ಣುಗಳಲ್ಲಿ ಜೀವನವನ್ನು ನೋಡುವ, ಆ ಹುಡುಗನ ಭಾಷೆ ಮತ್ತು ಪ್ರಜ್ಞೆಯಲ್ಲೇ ಎಲ್ಲವನ್ನೂ ದಾಖಲಿಸುವ ಈ ಕಾದಂಬರಿ ಲಂಕೇಶರ ಬರವಣಿಗೆಯ ಮತ್ತೊಂದು ಮುಖ್ಯ ಘಟ್ಟವನ್ನು ತೋರುತ್ತಿರುವಂತೆ ಪ್ರಸ್ತುತ ದಲಿತ–ಬಂಡಾಯ ಚಳುವಳಿಗಳ ಹಿನ್ನೆಲೆಯಲ್ಲೂ ಗಣನೀಯವೆನಿಸಿಕೊಳ್ಳುತ್ತದೆ. ಸೃಜನಶೀಲ ಮನಸ್ಸೊಂದು ಯಾವ ಪ್ರಕರಣದಲ್ಲೇ ಆಗಲಿ, ಯಾವ ಒತ್ತಡದಲ್ಲೇ ಆಗಲಿ ತನ್ನ ಮೂಲ

## 1991ರ ಅತ್ಯುತ್ತಮ ಕೃತಿಗಳು

1. **ಅತ್ಯುತ್ತಮ ಸೃಜನಶೀಲ ಕೃತಿ** : **ಕಿರಗೂರಿನ ಗಯ್ಯಾಳಿಗಳು** *ಲೇ: ಪೂರ್ಣಚಂದ್ರತೇಜಸ್ವಿ*
2. **ಅತ್ಯುತ್ತಮ ಸೃಜನೇತರ ಕೃತಿ** : **ಟೀಕೆ–ಟಿಪ್ಪಣಿ** *ಲೇ: ಪಿ. ಲಂಕೇಶ್*
3. **ಅತ್ಯುತ್ತಮ ಅನುವಾದ (ಸೃಜನಾತ್ಮಕ)** : **ರಿಕ್ವಿಯಂ ಮತ್ತಿತರ ನೂರು ಕವಿತೆಗಳು** *ಲೇ: ಶಾ. ಬಾಲುರಾವ್; ಮೂಲ: ಆನಾ ಅಹ್ಮತೋವಾ*
4. **ಅತ್ಯುತ್ತಮ ಅನುವಾದ (ಸೃಜನೇತರ)** : **ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ** *ಲೇ: ಡಿ. ಕೆ. ಶ್ಯಾಮಸುಂದರ ರಾವ್; ಮೂಲ: ಸ್ವಾಮಿ ರಾಮ*
5. **ಅತ್ಯುತ್ತಮ ಕಾದಂಬರಿ** : **ಅಕ್ಕ** *ಲೇ: ಪಿ. ಲಂಕೇಶ್*
6. **ಅತ್ಯುತ್ತಮ ಸಣ್ಣ ಕಥೆ** : **ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿ** *ಲೇ: ವೈದೇಹಿ*
7. **ಅತ್ಯುತ್ತಮ ಕಾವ್ಯ** : **ಬಕುಲದ ಹೂಗಳು** *ಲೇ: ಸು. ರಂ. ಎಕ್ಕುಂಡಿ*
8. **ಅತ್ಯುತ್ತಮ ನಾಟಕ** : **ಮಂಟೇಸ್ವಾಮಿ ಕಥಾ ಪ್ರಸಂಗ** *ಲೇ: ಎಚ್. ಎಸ್. ಶಿವಪ್ರಕಾಶ್*
9. **ಅತ್ಯುತ್ತಮ ಹಾಸ್ಯ** : **ವಂಡರ್–ವಂಡರ್** *ಲೇ: ವೈ.ಎನ್.ಕೆ.*
10. **ಅತ್ಯುತ್ತಮ ಜೀವನ ಚರಿತ್ರೆ** : **ತಿರುಮಲಾಂಬಾ** *ಲೇ: ಚಿ. ನ. ಮಂಗಳಾ*







ಗುಣವನ್ನು ಬಿಟ್ಟುಕೊಡುವುದಿಲ್ಲ ಎಂಬ ಮಾತಿಗೆ ಲಂಕೇಶರ 91ರ ಎರಡು ಪುಸ್ತಕಗಳೇ ಸಾಕ್ಷಿಯಾಗಿವೆ.

"ಅಕ್ಕ" ಬಿಟ್ಟರೆ ಮಹತ್ತ್ವಪೂರ್ಣವೆನ್ನಿಸುವ ಕಾದಂಬರಿ 91ರಲ್ಲಿ ಬಂದ ಹಾಗೆ ಕಾಣುವುದಿಲ್ಲ. ವ್ಯಾಸರಾವ್ ನಿಂಜೂರ್, ಮೊಗಸಾಲೆ, ಅನುಪಮಾ ನಿರಂಜನ, ಸಾರಾ ಅಬೂಬಕರ್, ಕೆ. ಟಿ. ಗಟ್ಟಿ ಮೊದಲಾದವರ ಕಾದಂಬರಿಗಳು ಪ್ರಕಟವಾಗಿವೆ. ಹಿರಿಯ ಬರಹಗಾರ ಪ್ರಭುಶಂಕರ ಅವರೂ ಒಂದು ಕಾದಂಬರಿಯನ್ನು ಪ್ರಕಟಿಸಿದ್ದಾರೆ. ಆದರೆ ಗಂಭೀರವಾಗಿ ಚರ್ಚಿಸಬಹುದಾದ ಕಾದಂಬರಿ ಇಲ್ಲವೆಂದೇ ಹೇಳಬೇಕು. ಅನುವಾದಿತ ಕಾದಂಬರಿಗಳ ಪೈಕಿ ಭೀಷ್ಮ ಸಾಹನಿ ಅವರ "ಗವಾಕ್ಷಿ" ಪರವಾಗಿಲ್ಲ. ಅದು

**11. ಅತ್ಯುತ್ತಮ ಪ್ರವಾಸ ಕಥನ** : ಮೌನ ಕಣಿವೆ ಸಾಹಸ ಯಾತ್ರೆ
*ಲೇ: ಎಂ. ಕೆ. ಶ್ರೀಧರ್*

**12. ಅತ್ಯುತ್ತಮ ಮಾನವಿಕ/ಇತಿಹಾಸ** : ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು
*ಲೇ: ಎನ್. ಪಿ. ಶಂಕರನಾರಾಯಣ ರಾವ್*

**13. ಅತ್ಯುತ್ತಮ ಪ್ರಬಂಧ/ಲೇಖನ/ವೈಚಾರಿಕ** : ದೇವರು
*ಲೇ: ಎ. ಎನ್. ಮೂರ್ತಿರಾವ್*

**14. ಅತ್ಯುತ್ತಮ ಲಲಿತಪ್ರಬಂಧ** : ಪ್ರೀತಿಯ ಪ್ರದರ್ಶನ ಮತ್ತಿತರ ಪ್ರಬಂಧಗಳು
*ಲೇ: ಪಿ. ಎಸ್. ರಾಮಾನುಜಂ.*

**15. ಅತ್ಯುತ್ತಮ ವಿಮರ್ಶೆ** : ಭುವನದ ಭಾಗ್ಯ
*ಲೇ: ಜಿ. ಎಸ್. ಆಮೂರ*

**16. ಅತ್ಯುತ್ತಮ ಪರಿಸರ ಸಾಹಿತ್ಯ** : ಪರಿಸರದ ಕತೆ
*ಲೇ: ಕೆ. ಪಿ. ಪೂರ್ಣಚಂದ್ರ ತೇಜಸ್ವಿ*

**17. ಅತ್ಯುತ್ತಮ ಅಭಿನಂದನ ಗ್ರಂಥ** : ಬಹುರೂಪಿ (ಪ್ರೊ। ಬಿ. ಸಿ. ಅಭಿನಂದನ ಗ್ರಂಥ)
*ಸಂ: ಕೆ. ವಿ. ನಾರಾಯಣ,*
*ಜಿ. ಶ್ರೀನಿವಾಸಮೂರ್ತಿ,*
*ಎಚ್. ವಿ. ವೆಂಕಟಸುಬ್ಬಯ್ಯ*

**18. ಅತ್ಯುತ್ತಮ ಸಂಶೋಧನೆ/ಭಾಷೆ–ಸಾಹಿತ್ಯ** : ಪದಾರ್ಥ ಚಿಂತಾಮಣಿ
*ಲೇ: ಪಾ. ವೆಂ. ಆಚಾರ್ಯ*

**19. ಅತ್ಯುತ್ತಮ ಸಂಶೋಧನೆ/ಸಾಮಾಜಿಕ–ಸಾಂಸ್ಕೃತಿಕ** : ಕರ್ನಾಟಕದ ಲಂಬಾಣಿಗಳು
*ಲೇ: ಪಿ. ಕೆ. ಖಂಡೋಬಾ*

**20. ವಿಶೇಷ ಉಲ್ಲೇಖ** : ಛಾಯೆ (ಮುಸ್ಲಿಂ ಕವಯಿತ್ರಿಯ ಮೊದಲ ಕವನ ಸಂಕಲನ)
*ಲೇ: ಡಿ. ಬಿ. ರಜಿಯಾ*







ಅವರ ಅತ್ಯುತ್ತಮ ಕೃತಿಯೇನಲ್ಲ. ಆದರೆ ಪ್ರತಿಭಾವಂತನೊಬ್ಬನ ಬರವಣಿಗೆಯ ಅನೇಕ ಹೊಳಹುಗಳಿರುವುದರಿಂದ ಸಹನೀಯವಾಗುತ್ತದೆ. ಭೀಷ್ಮ ಸಾಹನಿಯವರ "ಮಾಧವಿ" ಎಂಬ ಪ್ರಸಿದ್ಧ ನಾಟಕವೂ ಪ್ರಕಟವಾಗಿದೆ. ಪುರಾಣದ ಕಥೆಯೊಂದನ್ನು ಆಧರಿಸಿದ ಈ ನಾಟಕ ಸ್ತ್ರೀ ಶೋಷಣೆಯ ಶಾಶ್ವತ ಪ್ರತೀಕವೊಂದರ ಶೋಧದಲ್ಲಿದೆ. ರಂಗದ ಮೇಲೆ ಯಶಸ್ವಿಯಾಗಬಹುದಾದ ಈ ಕೃತಿಯನ್ನು ನಮ್ಮ ನಾಟಕ ತಂಡಗಳು ಅವಶ್ಯವಾಗಿ ಗಮನಿಸಬೇಕು.

ನಾಟಕ ಪ್ರಕಾರ ಎಂದಿನಂತೆ ಈ ವರ್ಷವೂ ಹಿಂದೆ ಬಿದ್ದಿದೆ. ಎಚ್. ಎಸ್. ಶಿವಪ್ರಕಾಶರ "ಮುಂಚೇಸ್ವಾಮಿ ಕಥಾ ಪ್ರಸಂಗ", "ಷೇಕ್ಸ್‌ಪಿಯರನ ಸ್ವಪ್ನ ನೌಕೆ", "ಮಾರನಾಯಕನ ಪ್ರಸಂಗ" ಈ ವರ್ಷ ಪ್ರಕಟವಾಗಿವೆ. ಲಂಕೇಶ, ಕಂಬಾರ, ಕಾರ್ನಾಡರ ನಂತರ ನಿಸ್ಸಂದೇಹವಾಗಿ ಶಿವಪ್ರಕಾಶರೇ ಕನ್ನಡದ ಮಹತ್ವಾಕಾಂಕ್ಷೆಯ ನಾಟಕಕಾರರು. ದೇಶೀಯ ಸತ್ವದ ಶೋಧನೆ ಮತ್ತು ದೇಶೀಯ ರಂಗ ಪ್ರಕಾರಗಳ ಶೋಧನೆ ಎರಡರಲ್ಲೂ ಕಂಬಾರರಿಗಿಂತ ಭಿನ್ನವಾದ ಪ್ರತಿಭೆ ಇವರದು. ಒಂದು ಬಗೆಯ ಆಧ್ಯಾತ್ಮಿಕ ತೀವ್ರತೆಯಲ್ಲಿ ಧರ್ಮ, ರಾಜ್ಯ ವ್ಯವಸ್ಥೆ, ಮನುಷ್ಯ ಸಂಬಂಧಗಳನ್ನು ತಡವಿ ನೋಡುವ ಶಿವಪ್ರಕಾಶ್ ಬರವಣಿಗೆಯಲ್ಲಿ ಸ್ವಲ್ಪ ಆತುರ ಮಾಡಿಕೊಳ್ಳುತ್ತಿದ್ದಾರೆ ಎನಿಸುತ್ತದೆ. ಸ್ವಲ್ಪ ತಾಳ್ಮೆ, ಸಂಯಮದಿಂದ ಕಾದು ಬರೆದರೆ ಶಿವಪ್ರಕಾಶ್ ಇನ್ನೂ ಸಂಪೂರ್ಣ ಕಲಾಕೃತಿಗಳನ್ನು ಸೃಷ್ಟಿಸಬಹುದು. ಇವರ ಸದ್ಯದ ಕಲಾತ್ಮಕ ಸೋಲುಗಳಲ್ಲೂ ಇವರ ಸುಪ್ತ ಪ್ರತಿಭೆ ಮಿಂಚಿ ಮಾಯವಾಗುತ್ತದೆ. ಅವರ ಸಮಕಾಲೀನರಲ್ಲಿ ಶಿವಪ್ರಕಾಶರಿಗೆ ಹೋಲಿಸಬಹುದಾದ ಮತ್ತೊಬ್ಬ ನಾಟಕಕಾರನಿಲ್ಲದಿರುವುದು ಕನ್ನಡದ ದುರಂತ. ಇಂಥ ಸೃಜನಶೀಲ ಸ್ಪರ್ಧೆ ಇಲ್ಲದ ಹೊತ್ತಿನಲ್ಲಂತೂ ಶಿವಪ್ರಕಾಶ್ ತಾಳ್ಮೆ ಕಾಯ್ದುಕೊಳ್ಳಬೇಕಾದದ್ದು ತೀರಾ ಅವಶ್ಯ. ಶಿವರಾಮ ಕಾರಂತರು ಬಹಳ ವರ್ಷಗಳ ಹಿಂದೆ ಪ್ರಯೋಗಿಸಿದ್ದ ಸುಮಾರು 20 ಅಪ್ರಕಟಿತ ನಾಟಕಗಳ ಬೃಹತ್ ಸಂಕಲನವೊಂದು "ಸರಳ ವಿರಳ ನಾಟಕಗಳು" ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ವಿವಿಧ ರಂಗಶೈಲಿಯನ್ನು ಅಭ್ಯಾಸ ಮಾಡಬಯಸುವ ರಂಗಭೂಮಿ ವಿದ್ಯಾರ್ಥಿಗಳಿಗೆ ಇಲ್ಲಿನ ಕೆಲವು ನಾಟಕಗಳು ಕುತೂಹಲಕಾರಿ ಪಠ್ಯವನ್ನು ಒದಗಿಸಬಲ್ಲವು.

91ರ ಕಾವ್ಯ ಪ್ರಕಟಣೆಗಳು ತುಂಬಾ ಆಶಾದಾಯಕವಾಗಿವೆ. ಹಿರಿಯ ಕವಿ ಸು.ರಂ. ಎಕ್ಕುಂಡಿಯವರ ಹೊಸ ಸಂಕಲನ "ಬಕುಲದ ಹೂಗಳು" ಪ್ರಕಟವಾಗಿದೆ. ಕಥನ ಕವನಗಳಲ್ಲಿ ಅವರು ಪಡೆದುಕೊಂಡ ಯಶಸ್ಸು ಅಷ್ಟಿಷ್ಟಲ್ಲ. ಇತಿಹಾಸ, ಪುರಾಣಗಳ ಜಗತ್ತನ್ನು ಈ ಕವಿ ನೋಡುವ ಪರಿ ಅನನ್ಯವಾದದ್ದು. ಈ ಜನಪರ ಕವಿಯ ಕಾವ್ಯದ ಛಂದೋ ಪ್ರಯೋಗಗಳೂ ಕುತೂಹಲಕಾರಿಯಾಗಿವೆ. 35 ಕವನಗಳ ಈ ಸಂಕಲನ ವಿವಿಧ ವರ್ಗದ ಓದುಗರಿಗೆ ಒಮ್ಮೆಗೇ ರುಚಿಸಬಲ್ಲುದಾಗಿದೆ. ಎಚ್. ಎಸ್. ವೆಂಕಟೇಶಮೂರ್ತಿಯವರ ಅರುವತ್ತಕ್ಕೂ ಮಿಕ್ಕಿದ ಸಾನೆಟ್‌ಗಳ ಸಂಕಲನ "ಎಷ್ಟೊಂದು ಮುಗಿಲು" ಶ್ರೀಯುತರ ಕಾವ್ಯ ಪರಿಣತಿಗೆ ಮತ್ತೊಂದು ನಿದರ್ಶನ. 'ಮಿಥುನ ಶಿಲ್ಪ' ಭಾಗದ ರಚನೆಗಳು ಮತ್ತು ಬೇಂದ್ರೆ, ಕುವೆಂಪು, ಪುತಿನ, ಅಡಿಗ, ಕೆ.ಎಸ್.ನ.ರನ್ನು ಕುರಿತ ಸಾನೆಟ್‌ಗಳು ವಿಶೇಷ ಗಮನ ಸೆಳೆಯುತ್ತವೆ. ಸವಿತಾ ನಾಗಭೂಷಣ ಅವರ "ಚಂದ್ರನನ್ನು ಕರೆಯಿರಿ ಭೂಮಿಗೆ" ಮತ್ತು ಪ್ರತಿಭಾ ನಂದಕುಮಾರ್ ಅವರ "ರಸ್ತೆಯಂಚಿನ ಗಾಡಿ" ಮತ್ತೆರಡು ಗಮನಾರ್ಹ ಕವನ ಸಂಕಲನಗಳು. ಸ್ತ್ರೀ ವಿಶಿಷ್ಟ ದೃಷ್ಟಿಕೋನವೊಂದು ಇವರಿಬ್ಬರ ಗ್ರಹಿಕೆಗಳಿಗೆ ಒಂದು ಬಗೆಯ ವಿಶೇಷತೆಯನ್ನು ತಂದುಕೊಟ್ಟಿದೆ. ತುಂಬಾ ಚುರುಕಾಗಿ, ಲವಲವಿಕೆಯಿಂದ ಬರೆಯುವ ಸವಿತಾ ಮತ್ತು ಪ್ರತಿಭಾ ನಾಳಿನ ಕಾವ್ಯದ ಭರವಸೆಗಳಾಗಿದ್ದಾರೆ. ಚಿಕ್ಕ ಚಿಕ್ಕ ವಿವರಗಳಲ್ಲೇ ಅದ್ಭುತ ಚಿತ್ರಗಳನ್ನು ಕಟ್ಟುವ ಪ್ರತಿಭಾ, ದೈನಂದಿನ ಅನುಭವಗಳಲ್ಲೇ ಅನುಭಾವದ ಕಾಣ್ಕೆಯ ಹವಣಿಕೆಯಲ್ಲಿರುವ ಸವಿತಾರನ್ನು ಓದುವುದು ನಿಜಕ್ಕೂ ಒಂದು ಚೇತೋಹಾರಿ ಅನುಭವ. ಈಗಾಗಲೇ ಪ್ರಸಿದ್ಧರಾಗಿರುವ ಲಕ್ಷ್ಮೀನಾರಾಯಣ ಭಟ್ಟ, ಅರವಿಂದ ನಾಡಕರ್ಣಿ, ವೇಣುಗೋಪಾಲ ಸೊರಬ, ಜಯಸುದರ್ಶನ, ದೇಶ ಕುಲಕರ್ಣಿ, ಸನದಿ ಮೊದಲಾದವರ ಹೊಸ ಕವನ ಸಂಕಲನಗಳು ಈ

ವರ್ಷ ಪ್ರಕಟವಾಗಿವೆ. ಹೊಸಬರಲ್ಲಿ ಬಸವರಾಜ ವಕ್ಕುಂದ ಅವರ "ಜೀವ ಝುಲ್ಲರಿ" ವಿಶೇಷವಾಗಿ ಗಮನ ಸೆಳೆಯುತ್ತದೆ. ಮುಸ್ಲಿಂ ಕವಯತ್ರಿಯ ಮೊದಲ ಕನ್ನಡ ಕವನ ಸಂಕಲನ ಎಂಬ ಹೆಗ್ಗಳಿಕೆ ಡಿ. ಬಿ. ರಜಿಯಾ ಅವರ "ಛಾಯೆ"ಯದು. ಸಿದ್ದಲಿಂಗ ದೇಸಾಯಿ, ವಿಜಯಶ್ರೀ ಸಬರದ ತಮ್ಮ ಅಭಿವ್ಯಕ್ತಿಯನ್ನು ಇನ್ನಷ್ಟು ಗಟ್ಟಿಗೊಳಿಸುವ ಪ್ರಯತ್ನದಲ್ಲಿದ್ದಾರೆ. ಅನುವಾದಿತ ಕವನಗಳಲ್ಲಿ ಅತಿ ಮುಖ್ಯವಾದದ್ದು ರಷ್ಯನ್ ಭಾಷೆಯಿಂದ ನೇರವಾಗಿ ಅನುವಾದ ಗೊಂಡಿರುವ ಆನಾ ಅಹ್ಮತೋವಾ ಅವರ "ರಿಕ್ವಿಯಂ ಮತ್ತಿತರ ನೂರು ಕವಿತೆಗಳು". ಈ ಶತಮಾನದ ಕವಯತ್ರಿಯರಲ್ಲಿ ಆನಾ ಪ್ರಮುಖಳು. ಶಾ. ಬಾಬುರಾವ್ ಅವರ ಅನುವಾದ ಮತ್ತು ಪ್ರಸ್ತಾವನೆ ಕನ್ನಡಕ್ಕೆ ಉತ್ತಮ ಕೊಡುಗೆಗಳು. ಶ್ರೀಶ್ರೀ ಅವರ "ಮಹಾ ಪ್ರಸ್ಥಾನ" ಮತ್ತು "ಮತ್ತೊಂದು ಪ್ರಸ್ಥಾನ"ದಿಂದ ಆಯ್ದ ಕವಿತೆಗಳು ಕನ್ನಡಕ್ಕೆ ಅನುವಾದಗೊಂಡು ಬಂದಿದೆ. ತೆಲುಗಿನ ಪ್ರತಿಭಟನೆಯ ಕಾವ್ಯ ಕನ್ನಡಕ್ಕೆ ಬಂದಿರುವುದರಲ್ಲಿ ಔಚಿತ್ಯವಿದೆ.

ಓರ್ವ ಮೇಜರ್ ಸಾಹಿತಿಯ ಸಮಗ್ರ ಸಮೀಕ್ಷೆಯನ್ನು ಮಾಡುವ ಮೂಲಕ ಆಧುನಿಕ ಕನ್ನಡ ವಿಮರ್ಶೆ ಮತ್ತೊಂದು ಮುಖ್ಯ ಮಜಲನ್ನು ತಲುಪುತ್ತಿದೆ. ಜಿ. ಎಸ್. ಆಮೂರ ಅವರ "ಭುವನದ ಭಾಗ್ಯ" ದ.ರಾ. ಬೇಂದ್ರೆಯ ವರ ಸಮಗ್ರ ಸಾಹಿತ್ಯವನ್ನು ಅದರ ಬೆಳವಣಿಗೆ ಯಲ್ಲಿ ಗಮನಿಸುವ ಮಹತ್ವಾಕಾಂಕ್ಷೆಯ ವಿಮರ್ಶಾ ಕೃತಿ. ಬೇಂದ್ರೆಯವರ ವಿಚಾರ ಮತ್ತು ಅಭಿವ್ಯಕ್ತಿ ಕ್ರಮಗಳ ವಿಕಾಸ ಕ್ರಮವನ್ನು ಮುಖ್ಯ ವಾಗಿ ಗಮನದಲ್ಲಿಟ್ಟುಕೊಂಡಿರುವ ಆಮೂರ್ ಇತರ ಪ್ರಕಾರಗಳಲ್ಲಿ ಬೇಂದ್ರೆಯವರ ಕೊಡುಗೆ ಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿದ್ದಾರೆ. ಬೇಂದ್ರೆಯವರ ಕಾವ್ಯದ ಬಗ್ಗೆ ಅಡಿಗರು ಬರೆದಿರುವ ಪುಸ್ತಿಕೆಯೊಂದು ಪ್ರಕಟವಾಗಿದೆ. ಕಾಳಿದಾಸನ ಕೃತಿಗಳ ಬಗ್ಗೆ ಪರಮೇಶ್ವರ ಭಟ್ಟರು, ಮಾಸ್ತಿ ಬಗ್ಗೆ ವಿ.ಸೀ. ಬರೆದಿದ್ದಾರೆ. ಮಾಸ್ತಿ ವಿಮರ್ಶೆ ಕುರಿತ ಜಿ. ಎಂ. ಹೆಗಡೆಯವರ ಸಂಪ್ರಬಂಧವೂ ಪ್ರಕಟವಾಗಿದೆ. ಬೆಂಗಳೂರು ವಿ.ವಿ.ಯ ಸಮಗ್ರ ಸಾಹಿತ್ಯ ಚರಿತ್ರೆಯ ಆರನೆಯ ಸಂಪುಟ ತಡವಾಗಿಯಾದರೂ ಹೊರಬಂದಿರು ವುದು ಸಂತೋಷದ ವಿಷಯ. "ಕರ್ನಾಟಕದ ಲಂಬಾಣಿಗಳ" ಬಗ್ಗೆ ಬಂದಿರುವ ಪಿ. ಕೆ. ಖಂಡೋಬಾ ಅವರ ಸಂಶೋಧನಾ ಪ್ರಬಂಧ ಅನೇಕ ಉಪಯುಕ್ತ ಮಾಹಿತಿಗಳನ್ನು ನೀಡು ತ್ತದೆ. ಪಾ. ವೆಂ. ಆಚಾರ್ಯರ "ಪದಾರ್ಥ ಚಿಂತಾಮಣಿ" '91ರ ಒಂದು ವಿಶಿಷ್ಟ ಕೃತಿ. ಪದವೊಂದರ ಬೆನ್ನು ಹತ್ತಿ ಅದರ ವ್ಯುತ್ಪತ್ತಿ, ವಿಸ್ತರಣ, ಸಾಂಸ್ಕೃತಿಕ ವಿಶೇಷಗಳನ್ನು ಕೆದಕುವ ಪಾ. ವೆಂ. ಅವರ ಸಂಶೋಧನೆ ಪ್ರಥಮ ದರ್ಜೆಯದು. ಸಾಮಾನ್ಯರಿಗೂ ಪಂಡಿತರಿಗೂ ಒಟ್ಟಿಗೇ ಕುತೂಹಲ ಹುಟ್ಟಿಸುವ ಕೃತಿ ಇದು. ವಿಮರ್ಶಾ ಬರಹಗಳ ಸಂಕಲನಗಳಲ್ಲಿ ಗಮನಿಸ ಬಹುದಾದವೆಂದರೆ ಕೆ. ಸತ್ಯನಾರಾಯಣ ಅವರ "ಆಸಕ್ತಿ", ಡಿ. ಎಸ್. ನಾಗಭೂಷಣ ಅವರ "ಗಮನ" ಮತ್ತು ಎಸ್. ಶಿವಾನಂದರ "ವಿಮ ರ್ಶೆಯ ಸವಾಲುಗಳು". ಬಂಡಾಯ ಸಾಹಿತ್ಯದ



ಪರಿಕಲ್ಪನೆಯನ್ನು ಕ್ರೋಢೀಕರಿಸಿ ಅದಕ್ಕೊಂದು ಸ್ಪಷ್ಟವಾದ, ಖಚಿತವಾದ ರೂಪವನ್ನು ಕೊಡಲು ಬರಗೂರು ರಾಮಚಂದ್ರಪ್ಪನವರು ತಮ್ಮ "ಬಂಡಾಯ ಸಾಹಿತ್ಯ ಮೀಮಾಂಸೆ"ಯಲ್ಲಿ ಪ್ರಯತ್ನಿಸಿದ್ದಾರೆ.

ತಮ್ಮ ಅರುವತ್ತನೆಯ ಹುಟ್ಟುಹಬ್ಬದ ನೆನಪಿನಲ್ಲಿ ಹಾ.ಮಾ. ನಾಯಕರು 91ರಲ್ಲಿ ತಮ್ಮ ಹತ್ತು ಪುಸ್ತಕಗಳನ್ನು ಹೊರ ತಂದಿದ್ದಾರೆ. ರಾಜಪ್ಪ ದಳವಾಯಿ ಅವರು ನಾಯಕರ ವಿಚಾರಗಳನ್ನು ಸಂಪಾದಿಸಿ "ನೆನಪುಗಳು ಸಾಯುವುದಿಲ್ಲ" ಎಂಬ ಗ್ರಂಥವನ್ನು ಹೊರ ತಂದಿದ್ದಾರೆ. ಎಚ್. ಎಸ್. ಸುಜಾತಾ ಅವರ "ಹಾ.ಮಾ.ನಾ. ಹೊತ್ತಗೆಗಳು" ಎಂಬ ಗ್ರಂಥ ಸೂಚಿ ಈ ಬಗೆಯ ಕೆಲಸಗಳಿಗೆ ಒಂದು ಮಾದರಿಯಾಗಿದೆ. "ಕಾರಂತ ಕೃತಿ ಕರಂಡ" ಎಂಬ ಹೆಸರಿನಲ್ಲಿ ಕಾರಂತ ಗ್ರಂಥ ಸೂಚಿಯೊಂದನ್ನು ಶೇಖರ ಇಡ್ಯ ಮತ್ತು ಮಾಲಿನಿ ಮಲ್ಯ ಸಿದ್ಧಪಡಿಸಿದ್ದಾರೆ. ಆದರೆ ಅದು ಅಷ್ಟೊಂದು ವ್ಯವಸ್ಥಿತವಾದ ಪ್ರಕಟಣೆಯಾಗಿಲ್ಲ. ಕಾರಂತ ಸೂಕ್ತಿಗಳ "ಕಾರಂತ ಚಿಂತನ" ವೊಂದನ್ನು ವಿ. ಬಿ. ಮೊಳೆಯಾರ ಸಂಪಾದಿಸಿದ್ದಾರೆ.

# 1991ರ ಒಂದುನೂರು ಉತ್ತಮ ಪ್ರಕಟಣೆಗಳು

1. **ಕಿರಗೂರಿನ ಗಯ್ಯಾಳಿಗಳು** (ಕಥಾ ಸಂಕಲನ) ಲೇ: ಪೂರ್ಣಚಂದ್ರ ತೇಜಸ್ವಿ.
2. **ಪರಿಸರದ ಕತೆ** (ನೆನಪಿನ ಚಿತ್ರಗಳು) ಲೇ: ಪೂರ್ಣಚಂದ್ರ ತೇಜಸ್ವಿ.
3. **ಅಕ್ಕ** (ಕಾದಂಬರಿ) ಲೇ: ಪಿ. ಲಂಕೇಶ್.
4. **ಗವಾಕ್ಷಿ** (ಕಾದಂಬರಿ) ಮೂಲ: ಭೀಷ್ಮ ಸಾಹನಿ; ಅನು: ಶಾರದಾ ಸ್ವಾಮಿ, ರಾಮಚಂದ್ರ ಸ್ವಾಮಿ.
5. **ರಸ್ತೆಯಂಚಿನ ಗಾಡಿ** (ಕವನ ಸಂಕಲನ) ಲೇ: ಪ್ರತಿಭಾ ನಂದಕುಮಾರ್.
6. **ಎಷ್ಟೊಂದು ಮುಗಿಲು** (ಕವನ ಸಂಕಲನ) ಲೇ: ಎಚ್. ಎಸ್. ವೆಂಕಟೇಶಮೂರ್ತಿ.
7. **ಬಕುಲದ ಹೂಗಳು** (ಕವನ ಸಂಕಲನ) ಲೇ: ಸುಬ್ಬಣ್ಣ ರಂಗನಾಥ ಎಕ್ಕುಂಡಿ.
8. **ಚಂದ್ರನನ್ನು ಕರೆಯಿರಿ ಭೂಮಿಗೆ** (ಕವನ ಸಂಕಲನ) ಲೇ: ಸವಿತಾ ನಾಗಭೂಷಣ.
9. **ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ** (ಅನುಭವ ಕಥನ) ಮೂಲ: ಸ್ವಾಮಿ ರಾಮ; ಅನು: ಡಿ. ಕೆ. ಶ್ಯಾಮಸುಂದರ ರಾವ್.
10. **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು** (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ) ಲೇ: ಎನ್. ಪಿ. ಶಂಕರನಾರಾಯಣ ರಾವ್.
11. **ಕೋಟಿ ಮನೆ** (ಆತ್ಮ ಕಥನ) ಲೇ: ಸಮೇತನಹಳ್ಳಿ ರಾಮರಾಯ.
12. **ಪ್ರಾಂಶುಪಾಲಳಾಗಿ 20 ವರ್ಷ** (ನೆನಪುಗಳು) ಲೇ: ಚಿ. ನ. ಮಂಗಳಾ.
13. **ಮನದೊಂದಿಗೆ ಮಾತುಕತೆ** (ಸಾಹಿತ್ಯಿಕ, ಸಾಂಸ್ಕೃತಿಕ ಲೇಖನಗಳು) ಲೇ: ಕೆ. ಎಸ್. ನಿಸಾರ್ ಅಹಮದ್.
14. **ಟೀಕೆ–ಟಿಪ್ಪಣಿ** (ಹತ್ತೂವರೆ ವರ್ಷದ ಕೆಲವು ಬರಹಗಳು) ಲೇ: ಪಿ. ಲಂಕೇಶ್.
15. **ಕಿರಿಯರಿಗಾಗಿ ಪರಿಸರ** (ಲೇಖನಗಳ ಸಂಗ್ರಹ) ಲೇ: ಪೂರ್ಣಚಂದ್ರ ತೇಜಸ್ವಿ, ನಾಗೇಶ ಹೆಗಡೆ, ಟಿ. ಎಸ್. ವಿವೇಕಾನಂದ.

ಅಭಿನಂದನ ಮತ್ತು ಗೌರವ ಗ್ರಂಥಗಳಲ್ಲಿ ವಿಶೇಷ ಆಸಕ್ತಿ ಹುಟ್ಟಿಸುವ ಪ್ರಕಟಣೆಗಳೆಂದರೆ "ಬಹುರೂಪಿ", "ಕಾಡಿನ ಹುಡುಗ ಕೃಷ್ಣ", "ನಮ್ಮ ಸುಬ್ಬಣ್ಣ" ಮತ್ತು "ಸುರಗಿ". ಪ್ರೊ। ಬಿ. ಸಿ. ಅಭಿನಂದನ ಗ್ರಂಥ "ಬಹುರೂಪಿ"ಯಲ್ಲಿ ರಂಗಭೂಮಿಯನ್ನು ಕುರಿತು ಕನ್ನಡದಲ್ಲಿ ಪ್ರಕಟವಾಗಿರುವ ಅನೇಕ ಮುಖ್ಯ ಲೇಖನಗಳನ್ನು ಒಂದೆಡೆ ತರುವ ಪ್ರಯತ್ನ ಮಾಡಲಾಗಿದೆ. ರಂಗಭೂಮಿಯಲ್ಲಿ ಆಸಕ್ತಿ ಇರುವವರಿಗೆ ಇದೊಂದು ಅಮೂಲ್ಯ ಆಕರ ಗ್ರಂಥ. ಶ್ರೀಕೃಷ್ಣ ಆಲನಹಳ್ಳಿ ಸಾಹಿತ್ಯದ ಸಮಗ್ರ ವಿಮರ್ಶೆಗಾಗಿ "ಕಾಡಿನ ಹುಡುಗ ಕೃಷ್ಣ" ಮುಖ್ಯವೆನಿಸುತ್ತದೆ. ಕೃಷ್ಣರಂಥ ಪ್ರತಿಭಾವಂತ ಲೇಖಕನೊಬ್ಬನ ಕೃತಿಗಳು ಹೀಗೆ ವ್ಯಾಪಕವಾಗಿ ಚರ್ಚೆಗೊಳಗಾದದ್ದು ಆಧುನಿಕ ಕನ್ನಡ ವಿಮರ್ಶೆಯಲ್ಲಿ ಒಂದು ದೊಡ್ಡ ಬೆಳವಣಿಗೆ ಎಂದೇ ಹೇಳಬೇಕು. ಕೆ. ವಿ. ಸುಬ್ಬಣ್ಣನವರಿಗೆ ಮ್ಯಾಗಸೇಸೆ ಪ್ರಶಸ್ತಿ ಬಂದಾಗ ನಾಡಿನ ಹಲವಾರು ಪತ್ರಿಕೆಗಳಲ್ಲಿ ನೂರಾರು ಲೇಖನಗಳು, ಸಂದರ್ಶನಗಳು ಪ್ರಕಟಗೊಂಡವು. ಅವುಗಳಲ್ಲಿ ಕೆಲವನ್ನು ಆಯ್ದು ಇಂಗ್ಲಿಷ್ ಮತ್ತು ಕನ್ನಡ ಲೇಖನ–ಸಂದರ್ಶನಗಳನ್ನೊಳಗೊಂಡ ಸಂಕಲನವನ್ನು "ನಮ್ಮ

---

16. **ಜೀವಿ ಸಂಕುಲಗಳ ಉಗಮ**
    ಮೂಲ: ಡಾರ್ವಿನ್; ಸಂಗ್ರಹಾನುವಾದ: ಕೆ. ಪುಟ್ಟಸ್ವಾಮಿ.
17. **ರಿಕ್ವಿಯಂ ಮತ್ತಿತರ ನೂರು ಕವಿತೆಗಳು**
    ಮೂಲ: ಆನಾ ಅಹ್ಮತೋವಾ; ಅನು: ಶಾ. ಬಾಲು ರಾವ್.
18. **ಸರಳ–ವಿರಳ ನಾಟಕಗಳು (20 ನಾಟಕಗಳ ಸಂಕಲನ)** ಲೇ: ಶಿವರಾಮ ಕಾರಂತ.
19. **ಮಂಟೇಸ್ವಾಮಿ ಕಥಾ ಪ್ರಸಂಗ (ನಾಟಕ)** ಲೇ: ಎಚ್. ಎಸ್. ಶಿವಪ್ರಕಾಶ್.
20. **ಷೇಕ್ಸ್‌ಪಿಯರನ ಸ್ವಪ್ನ ನೌಕೆ ಮತ್ತು ಮಾರನಾಯಕನ ಪ್ರಸಂಗ (ನಾಟಕಗಳು)**
    ಲೇ: ಎಚ್. ಎಸ್. ಶಿವಪ್ರಕಾಶ.
21. **ಪದಾರ್ಥ ಚಿಂತಾಮಣಿ (88 ಬರಹಗಳ ಸಂಕಲನ)** ಲೇ: ಪಾ. ವೆಂ. ಆಚಾರ್ಯ.
22. **ಮಹಾಕವಿ ಹರಿಹರನ ಕೃತಿಗಳ ಪದಕೋಶ** ಲೇ: ಬಸವರಾಜ ಮಲಶೆಟ್ಟಿ.
23. **ಮಹಾ ಪ್ರಸ್ಥಾನ–ಮತ್ತೊಂದು ಪ್ರಸ್ಥಾನ (ಆಯ್ದ ಕವಿತೆಗಳು)** ಮೂಲ: ಶ್ರೀ ಶ್ರೀ; ಅನು: ಎಚ್. ಎಸ್. ಶಿವಪ್ರಕಾಶ್, ಬಂಜಗೆರೆ ಜಯಪ್ರಕಾಶ್, ರಾಘವೇಂದ್ರ ರಾವ್.
24. **ಛಾಯೆ (ಕವನ ಸಂಕಲನ)** ಲೇ: ಡಿ. ಬಿ. ರಜಿಯಾ.
25. **ಮಾಧವಿ (ನಾಟಕ)** ಮೂಲ: ಭೀಷ್ಮ ಸಾಹನಿ; ಅನು: ಗೊರೂರು ಶ್ರೀನಿವಾಸಮೂರ್ತಿ.
26. **ತಟ್ಟು ಚಪ್ಪಾಳೆ ಪುಟ್ಟ ಮಗು (ಮಕ್ಕಳ ಕವಿತೆಗಳ ಸಂಕಲನ)**
    ಸಂ: ಬೊಳುವಾರು ಮಹಮದ್ ಕುಂಞಿ.
27. **ಶತಮಾನದ ಅಂಬೇಡ್ಕರ್ (ಡಾ। ಬಾಬಾ ಸಾಹೇಬ್ ಅಂಬೇಡ್ಕರ್ ಕುರಿತ 32 ಚಿಂತನೆಗಳು)** ಸಂ: ಮಾ. ಭರಣಿ.
28. **ಬಹುರೂಪಿ (ಪ್ರೊ। ಬಿ. ಸಿ. ಸನ್ಮಾನ ಗ್ರಂಥ)**
    ಸಂ: ಕೆ. ವಿ. ನಾರಾಯಣ, ಜೆ. ಶ್ರೀನಿವಾಸಮೂರ್ತಿ, ಎಚ್. ವಿ. ವೆಂಕಟಸುಬ್ಬಯ್ಯ.
29. **ನಮ್ಮ ಸುಬ್ಬಣ್ಣ (ಮ್ಯಾಗ್ಸಸೇ ಪ್ರಶಸ್ತಿ ವಿಜೇತ ಕೆ. ವಿ. ಸುಬ್ಬಣ್ಣ ಅವರನ್ನು ಕುರಿತ ಲೇಖನಗಳು ಮತ್ತು ಸಂದರ್ಶನಗಳು)** ಸಂ: ಬೋಳಂತಕೋಡಿ ಈಶ್ವರ ಭಟ್.

ಸುಬ್ಬಣ್ಣ" ಎಂಬ ಹೆಸರಿನಲ್ಲಿ ಪ್ರಕಟಿಸಲಾಗಿದೆ. ಈ ದೇಶದ ಅತ್ಯಂತ ಸೃಜನಶೀಲ ವ್ಯಕ್ತಿತ್ವವೊಂದರ ಬಗ್ಗೆ ಮಾಹಿತಿ ನೀಡುವ ಏಕೈಕ ಗ್ರಂಥವಾದ "ನಮ್ಮ ಸುಬ್ಬಣ್ಣ" 91ರ ಅತಿ ಮುಖ್ಯ ಪ್ರಕಟಣೆಗಳಲ್ಲಿ ಒಂದು.

ಬೊಳುವಾರು ಮಹಮದ್ ಕುಂಞಿ ಪ್ರೀತಿ, ಜವಾಬ್ದಾರಿಗಳಿಂದ ಸಂಕಲಿಸಿ ಸಂಪಾದಿಸಿ ಹೊರತಂದ "ತಟ್ಟು ಚಪ್ಪಾಳೆ ಪುಟ್ಟ ಮಗು" ಮಕ್ಕಳಿಗೆ ಒಂದು ದೊಡ್ಡ ಕಾಣಿಕೆ. ಪೂರ್ಣಚಂದ್ರ ತೇಜಸ್ವಿ, ನಾಗೇಶ ಹೆಗಡೆ, ಟಿ. ಎಸ್. ವಿವೇಕಾನಂದ ಮಕ್ಕಳಿಗಾಗಿ ಬರೆದಿರುವ "ಕಿರಿಯರಿಗಾಗಿ ಪರಿಸರ" ಆಕರ್ಷಕ ಓದು. "ಓದುವ ಆಟ"ದಲ್ಲಿ ಶಿವರಾಮ ಕಾರಂತರು ಮಕ್ಕಳಿಗೆ ಅಕ್ಷರ ಪಾಠಗಳನ್ನು ಬರೆದಿದ್ದಾರೆ. ಬೆಂಗಳೂರಿನ ಎಸ್.ಬಿ.ಎಸ್. ಪಬ್ಲಿಷರ್ಸ್ ಮಕ್ಕಳ ಪುಸ್ತಕಗಳ ಒಂದು ಮಾಲೆಯನ್ನೇ ಪ್ರಾರಂಭಿಸಿದೆ.

ಸಣ್ಣ ಕತೆಗಳ ಕ್ಷೇತ್ರದಲ್ಲಿ ತೇಜಸ್ವಿಯವರನ್ನು ಬಿಟ್ಟರೆ ವೈದೇಹಿ ವಿಶೇಷವಾಗಿ ಗಮನ ಸೆಳೆಯುತ್ತಾರೆ. ಅವರ "ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿ" ತನ್ನ ಅಪ್ಪಟ ಮಹಿಳಾ ಸಂವೇದನೆಯಿಂದ, ಸೂಕ್ಷ್ಮ ಗ್ರಹಿಕೆಗಳಿಂದ, ನವುರಾದ ಕತೆಗಾರಿಕೆಯಿಂದ ಪ್ರಿಯವಾಗುತ್ತದೆ. ಸಣ್ಣ ಕತೆಯ

---

30. **ಕಾರಂತ ಕೃತಿ ಕರಂಡ ( ಡಾ। ಶಿವರಾಮ ಕಾರಂತರ ಸಾಹಿತ್ಯ ಕೃತಿ ಸೂಚಿ)**
    ಸಂ: ಶೇಖರ ಇಡ್ಯ, ಮಾಲಿನಿ ಮಲ್ಯ.
31. **ಓದುವ ಆಟ (ಮಕ್ಕಳಿಗೆ ಅಕ್ಷರ ಪಾಠಗಳು)** ಲೇ: ಶಿವರಾಮ ಕಾರಂತ.
32. **ಎಂ. ಎಸ್. ಕಾಮತ್ ಕೃತಿಗಳು (ಸಂಪುಟ 1)** ಸಂ: ಲೀಲಾ ಭಟ್.
33. **ಕರ್ನಾಟಕದ ಲಂಬಾಣಿಗಳು** (ಒಂದು ಸಾಂಸ್ಕೃತಿಕ ಅಧ್ಯಯನ)
    ಲೇ: ಡಾ। ಪಿ. ಕೆ. ಖಂಡೋಬಾ.
34. **ಕನ್ನಡ ಚೆನ್ನುಡಿ (ತಾತ್ಪರ್ಯ, ಸುಭಾಷಿತಗಳ ಬೃಹತ್ ಸಂಪುಟ)**
    ಸಂ: ಡಾ। ಟಿ. ವಿ. ವೆಂಕಟಾಚಲ ಶಾಸ್ತ್ರೀ.
35. **ಒಂದು ಗ್ರಾಮದ ಜಾನಪದೀಯ ಅಧ್ಯಯನ** ಲೇ: ಡಾ। ಚೆನ್ನಣ್ಣ ವಾಲೀಕಾರ.
36. **ಮಾಸ್ತಿಯವರ ವಿಮರ್ಶೆ—ಒಂದು ಅಧ್ಯಯನ** ಲೇ: ಡಾ। ಜಿ. ಎಂ. ಹೆಗಡೆ.
37. **ಸಮಾಧಿಯ ಮೇಲೆ** (ಲೇಖನಗಳು) ಲೇ: ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು.
38. **ವೇದಾಂತ ರೆಜಿಮೆಂಟ್ ಮತ್ತು ಇತರ ವೈಚಾರಿಕ ಬರಹಗಳು**
    ಲೇ: ಬಿ. ವಿ. ವೀರಭದ್ರಪ್ಪ.
39. **ಕಾಡಿನ ಹುಡುಗ ಕೃಷ್ಣ ( ಶ್ರೀಕೃಷ್ಣ ಆಲನಹಳ್ಳಿ ನೆನಪಿನ ಸಂಪುಟ)**
    ಸಂ: ಡಿ. ಎಸ್. ನಾಗಭೂಷಣ, ರಾಘವೇಂದ್ರ ಪಾಟೀಲ, ಸ. ಉಷಾ.
40. **ತಿರುಮಲಾಂಬಾ (ಜೀವನ ಚರಿತ್ರೆ)** ಲೇ: ಚಿ. ನ. ಮಂಗಳಾ.
41. **ಆಸಕ್ತಿ (ಸಾಹಿತ್ಯಿಕ, ಸಾಂಸ್ಕೃತಿಕ ಲೇಖನಗಳು)** ಲೇ: ಕೆ. ಸತ್ಯನಾರಾಯಣ.
42. **ಭುವನದ ಭಾಗ್ಯ (ಬೇಂದ್ರೆ ಸಾಹಿತ್ಯ ಸಮೀಕ್ಷೆ)** ಲೇ: ಡಾ। ಜಿ. ಎಸ್. ಆಮೂರ.
43. **ವಿಮರ್ಶೆಯ ಸವಾಲುಗಳು (ವಿಮರ್ಶಾ ಲೇಖನಗಳ ಸಂಗ್ರಹ)** ಲೇ: ಎಸ್. ಶಿವಾನಂದ.
44. **ಗಮನ (ವಿಚಾರ—ವಿಮರ್ಶೆ)** ಲೇ: ಡಿ. ಎಸ್. ನಾಗಭೂಷಣ.
45. **ಗೀತ ಸಂಗೀತ (ಸಿನಿಮಾ ಸಾಹಿತ್ಯ, ಸಂಗೀತ ಕುರಿತ ಲೇಖನಗಳು)**
    ಲೇ: ಚಂದ್ರಶೇಖರ ಆಲೂರು.

ಮಾಧ್ಯಮವನ್ನೇ ತಮ್ಮ ಅಭಿವ್ಯಕ್ತಿಯ ಮುಖ್ಯ ಮಾರ್ಗವನ್ನಾಗಿ ಮಾಡಿಕೊಂಡಿರುವ ಈ ಪ್ರತಿಭಾವಂತ ಲೇಖಕಿ ಕನ್ನಡದ ಅತ್ಯುತ್ತಮ ಕತೆಗಾರರ ಸಾಲಿಗೆ ತೀರಾ ಸಮೀಪದಲ್ಲಿದ್ದಾರೆ. ಕುಮಾರ ಜೋಶಿ ಅವರ "ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ", ಅಮರೇಶ ನುಗಡೋಣಿ ಅವರ "ಮಣ್ಣು ಸೇರಿತು ಬೀಜ", ಭಾಗೀರಥಿ ಹೆಗಡೆ ಅವರ "ಅರ್ಥ", ಎಂ. ಎಸ್. ಶ್ರೀರಾಂ ಅವರ "ಮಾಯಾ ದರ್ಪಣ", ವೀರಭದ್ರ ಕೌದಿ ಅವರ "ಬರ ಮತ್ತು ಹತ್ತು ಕಥೆಗಳು", ಜನಾರ್ದನ ಎರ್ಪಕಟ್ಟೆ ಅವರ "ಪ್ರಕ್ರಿಯೆ" ಇವು ಇತರ ಉತ್ತಮ ಕಥಾ ಸಂಕಲನಗಳು.

ಡಿ. ಕೆ. ಶ್ಯಾಮಸುಂದರ ರಾವ್ ಸೊಗಾಗಿ ಅನುವಾದಿಸಿರುವ ಸ್ವಾಮಿ ರಾಮ ಅವರ "ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ", ಕೆ. ಪುಟ್ಟಸ್ವಾಮಿ ಅವರು ಅನುವಾದಿಸಿರುವ ಚಾರ್ಲ್ಸ್ ಡಾರ್ವಿನ್ನರ "ಜೀವಿ ಸಂಕುಲಗಳ ಉಗಮ", ಕೆ. ಎನ್. ಶ್ರೀನಿವಾಸಮೂರ್ತಿ ಅನುವಾದಿಸಿರುವ ಪಾಲ್‌ಕ್ಲೇ ಅವರ "ಆಧುನಿಕ ಕಲೆ" ಕನ್ನಡ ಸಂವೇದನೆಗೆ ಉತ್ತಮ ಕೊಡುಗೆಗಳು. ಕನ್ನಡಿಗರ ಜಗತ್ತು ಇಂಥ ಕೃತಿಗಳಿಂದ ಖಂಡಿತವಾಗಿ ಹಿಗ್ಗುತ್ತದೆ. ಎನ್. ಪಿ. ಶಂಕರ

---

46. **ಮಹಿಳೆ—ಬಿಡುಗಡೆಯ ಹಾದಿಯಲ್ಲಿ** ಲೇ: ಎನ್. ಗಾಯತ್ರಿ.
47. **ನಾಲ್ಕು ದಲಿತೀಯ ಕಾದಂಬರಿಗಳು** (ಲೇಖನಗಳ ಸಂಗ್ರಹ) ಸಂ: ಡಾ। ಅರವಿಂದ ಮಾಲಗತ್ತಿ.
48. **ಬಂಡಾಯ ಸಾಹಿತ್ಯ ಮೀಮಾಂಸೆ** ಲೇ: ಬರಗೂರು ರಾಮಚಂದ್ರಪ್ಪ.
49. **ಸಲೂನಿನಲ್ಲಿ ಕಂಡ ಹುಡುಗ** (ಕವನ ಸಂಕಲನ) ಲೇ: ಅರವಿಂದ ನಾಡಕರ್ಣಿ.
50. **ಜೀವ ಝಲ್ಲರಿ** (ಕವನಗಳು) ಲೇ: ಬಸವರಾಜ ವಕ್ಕುಂದ.
51. **ದೇವರು** (ವೈಚಾರಿಕ ಬರಹ) ಲೇ: ಎ. ಎನ್. ಮೂರ್ತಿರಾವ್.
52. **ಕೌಟಿಲ್ಯನ ರಾಜ್ಯ ಪದ್ಧತಿಯ ಸಮೀಕ್ಷೆ** ಲೇ: ಪ್ರೊ। ಜಿ. ಜಿ. ಜೋಶಿ.
53. **ರಥಯಾತ್ರೆಯ ರಾಜಕೀಯ** (ಎರಡು ವೈಚಾರಿಕ ಲೇಖನಗಳು) ಲೇ: ಜಿ. ರಾಜಶೇಖರ್, ಎನ್. ರಾಂ.
54. **ಹಾ.ಮಾ.ನಾ. ಹೊತ್ತಗೆಗಳು** (ಕೃತಿಸೂಚಿ) ಲೇ: ಡಾ। ಎಚ್. ಎಸ್. ಸುಜಾತಾ.
55. **ಮಣ್ಣು ಸೇರಿತು ಬೀಜ** (ಕಥಾ.ಸಂಕಲನ) ಲೇ: ಅಮರೇಶ ನುಗಡೋಣಿ.
56. **ಅರ್ಥ** (ಕಥಾ ಸಂಕಲನ) ಲೇ: ಭಾಗೀರಥಿ ಹೆಗಡೆ.
57. **ದೇವದಾಸಿ** (ಕಾದಂಬರಿ) ಲೇ: ದು. ನಿಂ. ಬೆಳಗಲಿ.
58. **ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ** (ಆರು ಉಪನ್ಯಾಸಗಳು) ವಿವಿಧ ಲೇಖಕರು.
59. **ಬರ ಮತ್ತು ಹತ್ತು ಕಥೆಗಳು** ಲೇ: ವೀರಭದ್ರ ಕೌದಿ.
60. **ಓ ಗಂಡಸೇ ನೀನೆಷ್ಟು ಒಳ್ಳೆಯವನು** (ಮೂರು ನೀಳ್ಗತೆಗಳು) ಲೇ: ಡಾ। ಎಂ. ಪಿ. ಉಮಾದೇವಿ.
61. **ಚಿತ್ತಾರ ಬರೆದ ಬದುಕು** (ಸಂಶೋಧನಾ ಪ್ರಬಂಧ) ಲೇ: ಗಾಯತ್ರೀ ನಾವಡ.
62. **ಭಾರತದ ಜಾನಪದ ಕಲೆ** ಲೇ: ಎನ್. ಮರಿಶಾಮಾಚಾರ್.
63. **ಆಧುನಿಕ ಕಲೆ** ಮೂಲ: ಪಾಲ್ ಕ್ಲೇ; ಅನು: ಕೆ. ಎಸ್. ಶ್ರೀನಿವಾಸಮೂರ್ತಿ.

ನಾರಾಯಣ್ ಅವರ "ಸ್ವಾತಂತ್ರ್ಯ ಗಂಗೆಗೆ ಸಾವಿರ ತೊರೆಗಳು" ಕನ್ನಡದಲ್ಲಿ ಉತ್ತಮ ಸ್ವತಂತ್ರ ಸಾಹಿತ್ಯೇತರ ಬರವಣಿಗೆ ಬರುತ್ತಿರುವುದಕ್ಕೆ ಉತ್ತಮ ಸಾಕ್ಷಿ. ಸೂಕ್ಷ್ಮಮತಿ ಸ್ಥಳೀಯನೊಬ್ಬ ನಾಡಿನ ಇತಿಹಾಸ ಬರೆದರೆ ಒದಗಿಬರುವ ಉತ್ತಮ ಅಂಶಗಳು ಇಲ್ಲಿ ಕಾಣುತ್ತವೆ. ಸಿನಿಮಾ ಸಾಹಿತ್ಯ–ಸಂಗೀತ ಕುರಿತ ಚಂದ್ರಶೇಖರ ಆಲೂರು ಅವರ "ಗೀತ ಸಂಗೀತ" ಈ ವಿಷಯ ಕುರಿತ ತೀರಾ ಅಲ್ಪ ಬರವಣಿಗೆಯ ಅರಕೆಯನ್ನು ಕೊಂಚ ಮಟ್ಟಿಗೆ ತುಂಬಿಕೊಡುತ್ತದೆ. "ಕೌಟಿಲ್ಯನ ರಾಜ್ಯ ಪದ್ಧತಿಯ ಸಮೀಕ್ಷೆ" ವಿಸ್ತೃತಗೊಳ್ಳುತ್ತಿರುವ ಕನ್ನಡದ ಆಸಕ್ತಿಗಳನ್ನು ಸೂಚಿಸುವಂತಿದೆ.

ಕಾದಂಬರಿಯೇತರ ಗದ್ಯ ಬರವಣಿಗೆಯಲ್ಲೂ 91ರಲ್ಲಿ ವೈವಿಧ್ಯ ಕಾಣುತ್ತದೆ. ಪರಸ್ಪರ ತುಂಬಾ ಭಿನ್ನವಾಗಿ ಆದರೆ ತಮ್ಮ ಭದ್ರ ನೆಲೆಗಳಲ್ಲಿ ಸ್ಪಷ್ಟವಾಗಿ, ದಿಟ್ಟವಾಗಿ ಚಿಂತಿಸುವ ಹಲವು ಲೇಖಕರು ತಮ್ಮ ಕೃತಿಗಳನ್ನು ಹೊರತಂದಿದ್ದಾರೆ. ಇವುಗಳಲ್ಲಿ ಎ. ಎನ್. ಮೂರ್ತಿರಾವ್ ಅವರ "ದೇವರು", ಕೆ. ಎಸ್. ನಿಸಾರ್ ಅಹಮದ್ ಅವರ "ಮನದೊಂದಿಗೆ ಮಾತುಕತೆ", ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳ "ಸಮಾಧಿಯ

---

64. **ಅಜ್ಞಾತ ಮುಂಬಯಿ** (ಪ್ರವಾಸ ಲೇಖನ) ಲೇ: ರಾಘವೇಂದ್ರ ಪಾಟೀಲ.
65. **ಪುನರಾವಲೋಕನ** ಲೇ: ಎಚ್. ವಿ. ನಾಗೇಶ್.
66. **ಕವಿ ಸಂಹಾರ** (ಕವನ ಸಂಕಲನ) ಲೇ: ಸಿದ್ಧಲಿಂಗ ದೇಸಾಯಿ.
67. **ಲಕ್ಷ್ಮಣ ರೇಖೆ ದಾಟಿದವರು** (ಕವನ ಸಂಕಲನ) ಲೇ: ವಿಜಯಶ್ರೀ ಸಬರದ.
68. **ಮೌನ ಕಣಿವೆ ಸಾಹಸ ಯಾತ್ರೆ** (ಪ್ರವಾಸ ಕಥನ) ಲೇ: ಎಂ. ಕೆ. ಶ್ರೀಧರ್.
69. **ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ** (ಕಥಾ ಸಂಕಲನ) ಲೇ: ಕುಮಾರ ಜೋಶಿ.
70. **ಸಂಬಲ** (ಲೇಖನಗಳ ಸಂಗ್ರಹ) ಲೇ: ಹಾ.ಮಾ. ನಾಯಕ.
71. **ಸುಡುಗುಂಡುಗಳ ನಾಡಲ್ಲಿ ಶಾಂತಿಯ ಕನಸು** (ಪ್ರವಾಸ ಲೇಖನ) ಲೇ: ಜಾಣಗೆರೆ ವೆಂಕಟರಾಮಯ್ಯ.
72. **ದೃಷ್ಟಿ** (ಕಾದಂಬರಿ) ಲೇ: ನಾ. ಮೊಗಸಾಲೆ.
73. **ಚಾಮುಂಡೇಶ್ವರಿ ಭವನ** (ಕಾದಂಬರಿ) ಲೇ: ವ್ಯಾಸರಾವ್ ನಿಂಜೂರ್.
74. **ಮಾಯಾ ದರ್ಪಣ** (ಕಥಾ ಸಂಕಲನ) ಲೇ: ಎಂ. ಎಸ್. ಶ್ರೀರಾಂ.
75. **ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿ** (ಕಥಾ ಸಂಕಲನ) ಲೇ: ವೈದೇಹಿ.
76. **ಸಂಪಣ** (ಬರಹಗಳ ಸಂಗ್ರಹ) ಲೇ: ಹಾ.ಮಾ. ನಾಯಕ.
77. **ಸಿವುಡು** (ಲೇಖನಗಳ ಸಂಕಲನ) ಲೇ: ಹಾ.ಮಾ. ನಾಯಕ.
78. **ಸಂಪ್ರತಿ–2** (ಅಂಕಣ ಬರಹಗಳ ಸಂಗ್ರಹ) ಲೇ: ಹಾ.ಮಾ. ನಾಯಕ.
79. **ಸಂಪ್ರತಿ–3** (ಅಂಕಣ ಬರಹಗಳ ಸಂಗ್ರಹ) ಲೇ: ಹಾ.ಮಾ. ನಾಯಕ.
80. **ಸಂಭ್ರಮ** (ಮುನ್ನುಡಿಗಳ ಸಂಕಲನ) ಲೇ: ಹಾ.ಮಾ. ನಾಯಕ.
81. **ಸೊಡರು** (ಹದಿನಾಲ್ಕು ವ್ಯಕ್ತಿ ಚಿತ್ರಗಳು) ಲೇ: ಹಾ.ಮಾ. ನಾಯಕ.
82. **ಸಿಂಚನ** (ಲೇಖನಗಳ ಸಂಕಲನ) ಲೇ: ಹಾ.ಮಾ. ನಾಯಕ.
83. **ಕನ್ನಡ ಮನಸ್ಸು** (ಹದಿನಾರು ಲೇಖನಗಳ ಸಂಗ್ರಹ) ಲೇ: ಹಾ.ಮಾ. ನಾಯಕ.

ಮೇಲೆ", ಬಿ. ವಿ. ವೀರಭದ್ರಪ್ಪ ಅವರ "ವೇದಾಂತ ರೆಜಿಮೆಂಟ್ ಮತ್ತು ಇತರ ವೈಚಾರಿಕ ಬರಹಗಳು", ವೈ.ಎನ್.ಕೆ. ಅವರ "ವಂಡರ್ ವಂಡರ್", ಪಿ. ಎಸ್. ರಾಮಾನುಜಂ ಅವರ "ಪ್ರೀತಿಯ ಪ್ರದರ್ಶನ ಮತ್ತು ಇತರ ಪ್ರಬಂಧಗಳು", ಹಾ.ಮಾ. ನಾಯಕರ "ವೆಂಕಣ್ಣಯ್ಯ: ಕೆಲವು ಪ್ರಸಂಗಗಳು" ಇವುಗಳನ್ನಾದರೂ ಹೆಸರಿಸಬೇಕು. ಪ್ರವಾಸ ಗ್ರಂಥಗಳಲ್ಲಿ ಎಂ. ಕೆ. ಶ್ರೀಧರ್ ಅವರ "ಮೌನ ಕಣಿವೆಯ ಸಾಹಸ ಯಾತ್ರೆ", ರಾಘವೇಂದ್ರ ಪಾಟೀಲ ಅವರ "ಅಜ್ಞಾತ ಮುಂಬಯಿ", ಜೀವನ ಚರಿತ್ರೆಗಳಲ್ಲಿ ಚಿ. ನ. ಮಂಗಳಾ ಅವರ "ತಿರುಮಲಾಂಬಾ", ಎಂ. ಆರ್. ರಾಮಯ್ಯ ಅವರ "ಹೆಲೆನ್ ಕೆಲರ್", ಜಿ. ಟಿ. ನಾರಾಯಣ ರಾವ್ ಅವರ "ಪ್ಲಾಂಕ್ ಐನ್‌ಸ್ಟೈನ್ ಬೋರ್" ಉಪಯುಕ್ತವೆನ್ನಿಸುತ್ತವೆ.

ಎಸ್. ಗಾಯತ್ರಿ ಬರೆದಿರುವ "ಮಹಿಳೆ ಬಿಡುಗಡೆಯ ಹಾದಿಯಲ್ಲಿ" ಎಂಬ ಪುಸ್ತಕವೂ 91ರಲ್ಲಿ ಹೊರ ಬಂದಿದೆ. ಇದರರ್ಥ ಇಷ್ಟೆ. ಕನ್ನಡದ ಮನಸ್ಸು ಎಂದೂ ಒಂದೇ ಸೀಮಿತ ಪರಿಧಿಯಲ್ಲಿ ಸುತ್ತುತ್ತಿಲ್ಲ. ವೈವಿಧ್ಯಮಯತೆ ವ್ಯಾಪಕತೆ ಈ ಕಾಲದ ಮುಖ್ಯ ಗುಣಗಳು. ●

---

84. **ವೆಂಕಣ್ಣಯ್ಯ: ಕೆಲವು ಪ್ರಸಂಗಗಳು** ಲೇ: ಹಾ.ಮಾ. ನಾಯಕ.
85. **ಹೆಲೆನ್ ಕೆಲರ್ (ಜೀವನ ಚರಿತ್ರೆ)** ಲೇ: ಎಂ. ಆರ್. ರಾಮಯ್ಯ.
86. **ಸುರಗಿ (ಎಂ. ಕೆ. ಇಂದಿರಾ ಅಭಿನಂದನ ಗ್ರಂಥ)** ಸಂ: ಎಚ್. ಎಸ್. ಪಾರ್ವತಿ.
87. **ಎಚ್ಚೆಸ್ಕೆ ಎಪ್ಪತ್ತು (ಎಚ್ಚೆಸ್ಕೆ ಗೌರವ ಗ್ರಂಥ)** ಸಂ: ತೇ. ಸಿ. ವಿಶ್ವೇಶ್ವರಯ್ಯ.
88. **ವಂಡರ್—ವಂಡರ್ (ಅಂಕಣ ಬರಹಗಳ ಸಂಕಲನ)** ಲೇ: ವೈ.ಎನ್.ಕೆ.
89. **ಪ್ರೀತಿಯ ಪ್ರದರ್ಶನ ಮತ್ತು ಇತರ ಪ್ರಬಂಧಗಳು**
    ಲೇ: ಪಿ. ಎಸ್. ರಾಮಾನುಜಂ.
90. **ಸ್ವಾತಂತ್ರ್ಯೋತ್ತರ ಕನ್ನಡ ಹಾಗೂ ತೆಲುಗು ಕಾವ್ಯಗಳಲ್ಲಿ ಸಾಮಾಜಿಕ ಪ್ರಜ್ಞೆ**
    ಲೇ: ಅರ್ಕಸಾಲಿ ವೃಷಭೇಂದ್ರಾಚಾರ್.
91. **ಪು.ತಿ.ನ. ಕಾವ್ಯ—ಒಂದು ಅಭ್ಯಾಸ** ಲೇ: ಎ. ಎಸ್. ವೇಣುಗೋಪಾಲ ರಾವ್.
92. **ಶೀಕೃಷ್ಣ ಪಾರಿಜಾತ—ಒಂದು ಅಧ್ಯಯನ** ಲೇ: ಶ್ರೀರಾಮ ಇಟ್ಟಣ್ಣನವರ.
93. **ಪ್ಲಾಂಕ್ ಐನ್‌ಸ್ಟೈನ್ ಬೋರ್ (ಜೀವನ ಚರಿತ್ರೆ)** ಲೇ: ಜಿ. ಟಿ. ನಾರಾಯಣ ರಾವ್.
94. **ಮೂಲ ಮುಖಿ (ಕಾದಂಬರಿ)** ಲೇ: ಅನುಪಮಾ ನಿರಂಜನ.
95. **ಜೀವ ಜೀವದ ನಂಟು (ಕಾದಂಬರಿ)** ಲೇ: ಪ್ರಭುಶಂಕರ.
96. **ಪಾಶ್ಚಾತ್ಯ ಸಾಹಿತ್ಯ ಮಾರ್ಗ** ಲೇ: ಸರೋಜಿನಿ ಚವಲಾರ.
97. **ಕರ್ಣ (ನಾಟಕ)** ಲೇ: ಸಿ. ಆರ್. ಸಿಂಹ.
98. **ಸಿಂಹಾಲೋಕ (ಸಿ. ಆರ್. ಸಿಂಹ ಅಭಿನಂದನ)**
    ಸಂ: ಕೆ. ಎಂ. ಶ್ರೀನಿವಾಸ ಗೌಡ, ಕಿ. ರಂ. ನಾಗರಾಜ, ಚಂದ್ರಶೇಖರ ಉಪಾಲ.
99. **ಕಾರಂತ ಚಿಂತನ (ಕಾರಂತರ ವಿಚಾರಗಳು)** ಸಂ: ವಿ. ಬಿ. ಮೊಳೆಯಾರ.
100. **ನೆನಪುಗಳು ಸಾಯುವುದಿಲ್ಲ (ಹಾ.ಮಾ. ನಾಯಕ ವಿಚಾರಧಾರೆ)**
    ಸಂ: ಆರ್. ರಾಜಪ್ಪ ದಳವಾಯಿ. ●



## ಅಕ್ಕಿಮುಡಿ

ವಸ್ತುಗಳನ್ನು ರಕ್ಷಿಸಿಡಲು ನಾವಿಂದು ಬಳಸುವ ಆಧುನಿಕ ವಿಜ್ಞಾನದ ಕೊಡುಗೆಗಳಾದ ಪಾಲಿಥೀನ್ ಚೀಲಗಳು, ಪ್ಲಾಸ್ಟಿಕ್ ಕವರ್‌ಗಳು ಮುಂತಾದವು ಜೈವಿಕವಾಗಿ ನಾಶಹೊಂದದೆ ಪರಿಸರ ಮಾಲಿನ್ಯಕ್ಕೆ ಕಾರಣವಾಗುತ್ತಿವೆ.

ದ.ಕ. ಅಕ್ಕಿಯನ್ನು ಕಾಪಿಡಲು ಇದ್ದ ಮುಡಿ ಕಟ್ಟುವ ವಿಧಾನ ಈ ಹಿನ್ನೆಲೆಯಲ್ಲಿ ಬಹಳಷ್ಟು ಪ್ರಾಮುಖ್ಯತೆ ಪಡೆಯುತ್ತದೆ. (ಎಲೆಗಳ ತಟ್ಟೆ, ದೊನ್ನೆಲೋಟ, ಬಾಳೆಲೆಯ ಊಟ ಎಂದು ನಮ್ಮಲ್ಲಿ ದಿನದಿನವೂ ಬಳಕೆಯಾಗುತ್ತಿದ್ದ ಬಯೋಡೀಗ್ರೇಡೇಬಲ್ ವಸ್ತುಗಳೂ ಒಂದೆರಡಲ್ಲ; ಅವನ್ನೆಲ್ಲ ನಾವು ಮರೆತಿದ್ದೇವೆ ಅಷ್ಟೆ)

17ನೇ ಶತಮಾನದಲ್ಲಿ ಭಾರತಕ್ಕೆ ಬಂದ ಫ್ರೆಂಚ್‌ಪ್ರವಾಸಿ ಪಿರಾರ್ಡ್‌ದೆಲವಲ್ ಎಂಬವನು ದ.ಕ. ಜಿಲ್ಲೆಯ ಅಕ್ಕಿಮುಡಿ ಕಟ್ಟುವ ಬಗ್ಗೆ ತನ್ನ ಪ್ರವಾಸ ಕಥನದಲ್ಲಿ ಬರೆದಿದ್ದಾನೆ.

"ಅಕ್ಕಿಯನ್ನು ಭತ್ತದ ಹುಲ್ಲಿನ ಮೂಡೆಗಳಲ್ಲಿ ಸುತ್ತಿ, ಮೇಲೆ ಹುರಿಕಟ್ಟಿ ಮಾರಾಟಮಾಡುತ್ತಾರೆ. ಈ ಮೂಡೆಗಳಿಗೆ ಫಾರ್ದೆನ್ (Farden) ಗಳೆನ್ನುತ್ತಾರೆ. ಹೀಗೆ ಮೂಡೆಗಳಲ್ಲಿ ಬಂದ ಅಕ್ಕಿಯೇ ಉತ್ತಮವಾದದ್ದು...".

ಒಂದೊಮ್ಮೆ ಈ ಜಿಲ್ಲೆಯಿಂದ ಅಕ್ಕಿ ರಫ್ತಾಗುತ್ತಿತ್ತು. ಇವತ್ತು ಅಪರೂಪಕ್ಕೆ ಭತ್ತದ ಗದ್ದೆಗಳು ಕಣ್ಣಿಗೆ ಬೀಳುತ್ತವೆ. ವಾಣಿಜ್ಯೀಕರಣದ ಒತ್ತಡದಲ್ಲಿ ಭತ್ತದ ಗದ್ದೆಗಳು ಇಟ್ಟಿಗೆ ಗೂಡುಗಳಾಗಿ ಪರಿವರ್ತನೆಗೊಂಡಿವೆ. ಇಂದು ಅಕ್ಕಿಮುಡಿ ಕಟ್ಟುವ ವಿಧಾನವಂತೂ ಕಣ್ಮರೆಯಾಗಿ ಬಿಟ್ಟಿದೆ ಎಂದರೆ ತಪ್ಪಲ್ಲ. ಕೆಲವೊಮ್ಮೆ ಬ್ಯಾಂಕ್‌ಗಳು, ಯುವಸಂಸ್ಥೆಗಳು ಅಕ್ಕಿಮುಡಿಕಟ್ಟುವ ಸ್ಪರ್ಧೆಗಳನ್ನು ನಡೆಸುತ್ತಿರುತ್ತವೆ.

ಅಕ್ಕಿಮುಡಿ ಕಟ್ಟುವುದೊಂದು ಜಾಣ್ಮೆಯ ಕಲೆ. ಇಲ್ಲಿ ಅನ್ಯ ಅಗತ್ಯಗಳಿಲ್ಲ. ಪರಿಸರ ಮಾಲಿನ್ಯವಿಲ್ಲ, ಅಧಿಕ ವೆಚ್ಚವಿಲ್ಲ.



## ವೃಕ್ಷ ಸಂಸ್ಕಾರ

ಅಶ್ವತ್ಥಮರಕ್ಕೆ ಉಪನಯನ, ಬೇವಿನ ಮರದೊಂದಿಗೆ ವಿವಾಹ ದ.ಕ. ಜಿಲ್ಲೆಯ ವಿಶಿಷ್ಟ ಸಂಪ್ರದಾಯ ಅಧ್ಯಯನ ಯೋಗ್ಯ. ಅಶ್ವತ್ಥಕ್ಕೆ ಅಸ್ವಸ್ಥಮರ ಎಂದೂ ಕರೆಯುವುದೂ ಇಲ್ಲಿ ವಾಡಿಕೆಯಲ್ಲಿದೆ. ಆಯಾಸ ಪರಿಹಾರಕ್ಕೆ ಅಶ್ವತ್ಥ ಮರದ ಕಟ್ಟೆಗಳಿಗಿಂತ ಬೇರೆ ಸ್ಥಳ ಬೇಕೇ. ಆಮ್ಲಜನಕ ಉತ್ಪಾದನೆಯಲ್ಲಿ ಮುಂದೆ ಎನ್ನಲಾಗಿರುವ ಈ ಮರಕ್ಕೆ ದೈವೀ ಸ್ವರೂಪ ಕೊಡಲಾಗಿದೆ.

● ದೈತೋಟ

# ಕಳೆದವರು ಯಾರು?

● ಟಿ. ಸುನಂದಮ್ಮ

**ತಂಗಮಣಿಯಮ್ಮಾಳ್ ಮತ್ತು ನರಸಿಂಹಯ್ಯಂಗಾರ್ ದಂಪತಿ 'ಕನಡಾ' ಆಗಿಬಿಟ್ಟಿದ್ದು ಕನ್ನಡಿಗರಿಗೆಲ್ಲ ಬೇರೊಂದು ರೀತಿಯಲ್ಲಿ ಅನುಕೂಲವಾಯಿತ್ತು.**

"ಅಜ್ಜೀ! ಯಾರೋ ಬರ್ತಿದಾರೆ ನಮ್ಮನೇಗೆ; ನಿಮ್ಮನ್ನ ಹುಡುಕಿಕೊಂಡು ಬರೋರೇ ಇರ ಬೇಕು"—ಮೊಮ್ಮಗ ಸಣ್ಣ ಲೌಡ್ ಸ್ಪೀಕರ್ ಧ್ವನಿಯಲ್ಲಿ ಹೇಳಿದ. ಘಾಟೀ ಚೂಟಿ! ಲ್ಯಾಬ ರೇಟರಿಯಲ್ಲಿ ರಸಾಯನಗಳನ್ನು ನೆಟ್ಟಗೆ ಕೂಗ ಲಾರದೆ ಕಾಲೇಜಿನಲ್ಲಿ ಕುಂಟು ಹೆಜ್ಜೆ ಹಾಕು ತ್ತಿದ್ದರೂ ಮನೆಗೆ ಬಂದವರ ವಯೋಮಿತಿಯ ತಕ್ಕಾಡಿ ಅಚ್ಚುಕಟ್ಟಾಗಿ ಕೂಗುತ್ತಾನೆ; ಯಾರು ಯಾರ 'ವ್ಹಿಸಿಟರ್' ಎನ್ನುವುದನ್ನು ನಿಗದಿ ಮಾಡಿಬಿಡುತ್ತಾನೆ.

ಗೇಟು ತೆಗೆದು ಅಡ್ಡಡ್ಡ ಕಾಲು ಎಳೆಯುತ್ತ ಒಳಹೊಕ್ಕ ಹೆಂಗಸನ್ನು ನೋಡಿಯೇ ನೋಡಿದೆ. ಎಲ್ಲೋ. ನೋಡಿದ್ದಂತೆ ಕೆರೆಕೆರೆ ಭಾವನೆ; ದಡ್ಡ ನೆನಪು ಗಾಡಿಕಟ್ಟಿಕೊಂಡು ಹೋಗಿಯೇ ಬಿಟ್ಟಿದೆ.

"ಹೆಹೆ....ಯಾಕೆ ಅಪ್ಪಡಿ ನೋಡ್ತೀ ಸರಸಮ್ಮ? ನಾನು...ತಂಗ, ತಂಗಮಣಿ!"

ಹೌದಲ್ಲ ? ಅದೇ ಮುಖ ! ಆದರೆ ಭೂಪಟ ಪೂರಾ ಬದಲಾಗಿದೆಯಲ್ಲ ? ಮೂಗಿನ ಎರಡು



ಬದಿಗಳು ಬ್ಯಾಲೆನ್ಸು ಆಗುವಂತೆ ಒಂದು ಪಕ್ಕಕ್ಕೆ ವಜ್ರದ ಹತ್ತು ಹರಳಿನ ಬೇಸರಿ, ಇನ್ನೊಂದು ಪಕ್ಕಕ್ಕೆ ದಪ್ಪ ವಜ್ರಕ್ಕೆ ಮರಿಗಳಂತೆ ನೇತು ಹಾಕಿಕೊಂಡಿದ್ದ ಮೂರು ಹರಳುಗಳು. ಕಿವಿಗಳಲ್ಲಂತೂ ಕಿಂಬರ್ಲೀ ಡೈಮಂಡ್ ಗಣಿಗಳೇ. ಭಾರ ತಡೆಯಲಾರದ ಕಿವಿಯಾಲೆಗಳು ಓಲೆಗಳನ್ನು ಕೆಳತುದಿಗೆ ನೂಕಿ ಬಿಟ್ಟಿದ್ದರಿಂದ, ತಂಗಮಣಿಯಮ್ಮಾಳ್ ಮಾತನಾಡುತ್ತ ಹಾಗೆ ಹೀಗೆ ತಿರುಗಿದರೆ, ತಲೆ ಆಡಿಸಿದರೆ, ಅವೂ ಬೀಸಣಿಗೆಯಂತೆ ಅಲ್ಲಾಡುತ್ತಿದ್ದವು. ಹದಿನೆಂಟು ಮೊಳದ ಕಾಂಜೀವರಂ ಶುತ್ತುಪೊಡವೆ, ಕಂಕುಳ ಕೆಳಗೆ ಸಿಕ್ಕಿಸಿದ ಸೆರಗು!....ಇದು, ನಮ್ಮ ರಸ್ತೆಯ ತುದಿ ಬಂಗಲೆಯೊಡತಿ, ನಾನು ಮೂವ್ವತ್ತೈದು ವರ್ಷಗಳಿಂದ ಹೀಗೆ ಕಂಡಿರುವ ತಂಗಮಣಿಯಮ್ಮಾಳ್‌ರವರ ವ್ಯಕ್ತಿ ಚಿತ್ರಣ.

ಆದರೆ ಇಂದು? ಬದಲಾದ ಅವತರಣಿಕೆ! ಕಿವಿಯಲ್ಲಿ ಸಾದಾ ವೋಲೆ, ಮೂಗಿನಲ್ಲಿ ಒಂದೇ ಹರಳಿನ ಮೂಗುಬಟ್ಟು; ಕರ್ನಾಟಕದ ನೆರಿಗೆ ಸೀರೆ!

"ಇ...ಇದೇನ್ ತಂಗಮಣಿ? ಹೀಗಾಗಿ ಬಿಟ್ಟಿದ್ದೀರಿ? ಯಾರಾದರೂ...ನಿಮ್ಮೋರು... ಅಲ್ಲ....ಊರಿಂದ ಕೆಟ್ಟ ಸುದ್ದಿ....?"

"ಛೇ ಛೇ! ಒಣ್ಣುಮಿಲ್ಲೇಮ್ಮ, ನಾನು 'ಕನಡಾ' ಆಗಿಬಿಟ್ಟಿದ್ದೀನಿ. ರೊಂಬ ಭಯ ಬಂದು ಬಿಟ್ಟಿದೆ ನಮಗೆ! ಯಾರಾದರೂ ಏನಾದರೂ ಮಾಡಿಬಿಟ್ಟರೆ? ಈಸ್ವರ ಎಮ್ ಸಂಪತ್ತೂ ಕೂಡೆ ಹೇಳಿದನಂತೆ. ಮನೆ ಉಳ್ಳೆ ಬಂದ್ಬಿಡ್ತಾರಂತೆ, ಶಾಮಾನೆಲ್ಲ ಎಡಕ್ಕೊಂಡು ಹೋಗ್ತಾರಂತೆ. 'ಎನ್ನಡಾ?' ಅಂದರೆ ಪೋರುಂ, 'ಹೊಡೀಡಾ?' ಅಂತಾರಂತೆ.

ಮಗ್ಗುಲಲ್ಲಿ ಬಂದು ನಿಂತಿದ್ದ ಈಶ್ವರ ಮೆಲ್ಲನೆ ಕಣ್ಣು ಮಿಟುಕಿಸಿದಾಗ, ಇದು ಇವನ 'ಕಿತಾಪತಿ' ಎಂದು ಅರ್ಥವಾಯಿತು. ಅಬುದಾಬಿಯಲ್ಲಷ್ಟು ಹಣ ಕೊಳ್ಳೆಹೊಡೆದು ಬಂದು ಬೊಂಬಾಯಿ ಫಿಲಂ ಪ್ರೊಡ್ಯೂಸರೊಬ್ಬರಿಗೆ ಸಾಲಕೊಟ್ಟು ಪಾರ್ಟ್ನರ್ ಪದವಿ ಗಿಟ್ಟಿಸಿಕೊಂಡಿರುವ ನಮ್ಮ ಕಿರಿಮಗನ ಸಿನಿಮೀಯ ಪ್ರಯೋಗ!

"ಒಳಗೆ ಬನ್ನಿ, ಆಮೇಲೆ ಮಾತಾಡುವಿರಂತೆ!"....ತಂಗಮಣಿ ತಡವರಿಸುತ್ತ ಸೀರೆ ನೆರಿಗೆಗಳನ್ನು ತಿರುಗು ಮುರುಗು ಮಾಡಿಕೊಳ್ಳುತ್ತ ಕೂತುಕೊಂಡರು.

"ನಮ್ ವೀಟ್ಕಾರು ನಾಲ್ಕೂ ದಿನದಿಂದ ಬರಿಮೈಲಿದ್ದಾರೆ; ಸರಸಮ್ಮ! ಪಾರ್ಕರ ದಿಕ್ಕಿ ಆಗಲ್ಲ....ಹುಹುಹುಹು..." ಕಣ್ಣೀರು ಕಾರ್ಯಕ್ರಮ ಆರಂಭಿಸಿದಾಗ ನಾವು ಬೆಪ್ಪಾಗಿ ಗಾಭರಿಯಾಗಿ ಬಾಯ್ತೆರೆದು ನಿಂತಾಗ, ಹಣೆ ತೋರಿಸಿ 'ಬರೀದು ಖಾಲಿ' ಅಂದರು. 'ಹಣೆ' ಮಣಿಯಮ್ಮಾಳ್ ಬಾಯಲ್ಲಿ 'ಮೈ' ಆಗಿರುವುದು; ನರಸಿಂಹಯ್ಯಂಗಾರ್ ಹಣೆಯ ಮೇಲಿನ ತಿರುಪತಿ ತಿಮ್ಮಪ್ಪ ನಾಮ ಸಾಲುಗಳು ಈಗ ನಾಪತ್ತೆಯಾಗಿವೆಯೆಂದೂ ಅರ್ಥೈಸಿಕೊಂಡೆವು.

"ಮಾಮೀ! ನೀವು ಶುದ್ಧ ಕನ್ನಡ ಆಡೋದನ್ನ ಮೊದಲು ಕಲಿಕ್ಕೊಳ್ಳಿ! ಬರೀ ವೇಷ ಬದಲಾಯ್ಸಿದರೆ ಸಾಲದು. ಭಾಷೇನೂ ಶೋಧಿಸಿಟ್ಕೊಳ್ಳಬೇಕು!"... ರಜೆಗೆ ಬಂದಿದ್ದ ಊರ್ಮಿಳೆ ಉವಾಚ.

ನಮ್ಮ ಅಸಮಾಧಾನ ತೋರಿಸಲು ಒಂದು ಅವಕಾಶ! ತಂಗಮಣಿಯಮ್ಮಾಳ್‌ರಂಥ ಅನೇಕರು, ಮೂರು ತಲೆಮಾರಿನಿಂದಲೂ ಕನ್ನಡ ನಾಡಿನಲ್ಲಿದ್ದರೂ 'ಸೀತಮ್ಮ ಹಾರತೀಗೆ ಕರೆದಿದಾನೆ', 'ಯಜಮಾನ್ರು ಕಚ್ಚೇರಿಗೆ ಹೋದ', 'ಕಾಮಾಕ್ಷೀ ಪೊಣ್ಣು ಕಲ್ಯಾಣಕ್ಕೆ ಕೂಗಿದಾರೆ...' ಇತ್ಯಾದಿ ಅಪಭ್ರಂಶವನ್ನೇ ಆಡುವುದು!

ಈಶ್ವರ ನನ್ನ ಒಂದು ಕಿವಿಯಲ್ಲಿ ಏನೋ ಪಿಸುಗುಟ್ಟಿದ; ಊರ್ಮಿಳೆ ಇನ್ನೊಂದು ಕಿವಿಯಲ್ಲಿ ಮತ್ತೇನೋ ತೂರಿದಳು. ನನ್ನ ಮುಖ ಊರಗಲವಾಯಿತು!

ಮಾರನೇ ದಿನದಿಂದ ಎರಡು ತರಗತಿಗಳು ಪ್ರಾರಂಭವಾದುವು. ನಮ್ಮ ಸುತ್ತಮುತ್ತ ಇರುವ ತಮಿಳು ಮಹಿಳೆಯರಿಗಾಗಿ ನಮ್ಮ ಮನೆಯಲ್ಲಿ 'ಕನ್ನಡ' ಶಿಕ್ಷಣ, ಕನ್ನಡ ಮಹಿಳೆಯರಿಗಾಗಿ 'ತಮಿಳು ಅಡಿಗೆ ತಿಂಡಿ' ತರಬೇತಿ, ತಂಗಮಣಿಯಮ್ಮಾಳ್ ಮನೆಯಲ್ಲಿ.

ಜನವರಿ ಹದಿನೈದರಂದು ಅವರೆಲ್ಲ 'ಸಂಕ್ರಾಂತಿ' ಆಚರಿಸಿದರು. ('ಪೊಂಗಲ್' ಪದ ಬಳಸಲೇ ಇಲ್ಲ!) ಹಸಿಬಿಸಿ ಹುರಿದ ಬೆರಕೆ ಎಳ್ಳನ್ನು ಹಂಚಿದರು. ನಮ್ಮ ಮನೆಯಲ್ಲಿ

ಊರ್ಮಿಳೆ ಮತ್ತು ನನ್ನ 'ಜಾಯಿಂಟ್ ಎಫರ್ಟ್ಸ್'ನಲ್ಲಿ ಪುಳಿಯೋಗರೆ ಶಕ್ಕರೆ ಪೊಂಗಲ್ ತಯಾರಾಯ್ತು.

ಎರಡು ತಿಂಗಳ ನಂತರ "ಎರಡೂ ತರಗತಿಗಳು ಮುಕ್ತಾಯ" ಎಂದು ನಾವು ಘೋಷಿಸಿದಾಗ, ಅವರಿಗೆಲ್ಲ ಆಶ್ಚರ್ಯ. "ಯಾಕೆ ಸರಸಮ್ಮ? ನಮಗೆ ಕನ್ನಡ ಕಲಿಸೊಕ್ಕೆ ಬೇಜಾರಾಯಿತೇ?" ಎಂದರು.

"ನಮ್ಮ ಪಾಠ ಪೂರ್ತಿ ಆಯ್ತು ಮಾಮೀ!"... ಊರ್ಮಿಳೆ ನಕ್ಕಳು.

"ಹೌದು ತಂಗಮಣಿ. ನಿಮ್ಮ ಪುಳಿಯೋಗರೆ, ಅವಿಯಲ್‌ವೆತ್ತ ಕೊಳಂಬು, ಕುಣಿತೆಂಗೊಳಲ್, ಸಜ್ಜಪ್ಪ ನಮಗೆ ಮಾಡಕ್ಕೆ ಬರ್ತಿರಲಿಲ್ಲ. 'ಟ್ರೇಡ್ ಸೀಕ್ರೆಟ್'ನ ನೀವುಗಳು ಬಿಟ್ಕೊಡೋದಿಲ್ಲ. ಅದಕ್ಕೇ—ಊರ್ಮಿಳ ಈ ಪ್ಲಾನ್ ಮಾಡಿದ್ದು."

"ನಿಮಗೂ ಒಂದಿಷ್ಟು 'ಬೆಟರ್' ಕನ್ನಡ ಬಂದ ಹಾಗಾಯ್ತಲ್ಲ?...ಹಿಹಿ..." ಊರ್ಮಿಳೆ ದನಿಗೂಡಿಸಿದಳು. "ಅಂದ ಹಾಗೇ ಮಾಮೀ! ಯುಗಾದಿ ಹಬ್ಬದ ದಿನ ನೀವು...ಮಾಮೂಲು ಮಾಮಿ ಆಗಿ ನರಸಿಂಹಯ್ಯಂಗಾರ್ರು ಯಥಾಪ್ರಕಾರದ ಹಣೆ ಗುರುತು ಸಹಿತ ನಮ್ಮ ಮನೇಗೆ ದಯವಿಟ್ಟು ಬರಬೇಕು"

"ಆದರೆ... ಆದರೆ... ಕನ್ನಡಿಗ... ತಮಿಳು ಜನ?"

"ತಂಗುಮಾಮೀ! ಅದೆಲ್ಲ ಕಟ್ಟು ಕಥೆ—ನಾನು ಕಟ್ಟಿದ್ದು. ನಿಮ್ಮನೇಲಿ ತಿಂದು ರುಚಿಕಂಡ ನಾಲಗೆ, ಅಮ್ಮಾನೂ ಕಲೀಲಿ ಮಾಡಲಿ ಅಂತ ಸಂಪತ್ತೂಗೆ 'ನಿಮಗೆ ವಿಪತ್ತು' ಅಂತ ಹೆದರಿಸಿದೋನು ನಾನೇ! ಇಷ್ಟು ವರ್ಷ ಯಾವ ಬೇಧವೂ ಇಲ್ಲದೆ ಬದುಕಿರೋರು ನಾವು ಈಗ ಒಡೀತೀವಾ?"

"ಹೌದೇನೋ ಈಸ್ವರಾ? ನಲ್ಲ ಪುಳ್ಳೆಪ್ಪ?"

"ನಲ್ಲ ಅಲ್ಲ, ಪುಳ್ಳೆ, ಸುಳ್ಳು! ಒಳ್ಳೆ ಹುಡುಗ! ಹ್ಹಹ್ಹಹ್ಹ!"

"ಹ್ಹಹ್ಹಹ್ಹ! ಹ್ಹಹ್ಹಹ್ಹ!!"

* * *

ಮೂಗಿನ ಎರಡು ಬದಿಗಳು ಬ್ಯಾಲೆನ್ಸ್ ಆಗುವಂತೆ ಒಂದು ಪಕ್ಕಕ್ಕೆ ಹತ್ತು ವಜ್ರ ಹರಳಿನ ಬೇಸರಿ, ಇನ್ನೊಂದು ಪಕ್ಕಕ್ಕೆ ತಾಯಿ



ಹಾಗಿದ್ರೆ, ಅಲ್ಲಿ ಓಟಗೆ ನಿಲ್ಲುವುದಿದ್ರೆ—ಆಲೋಚಿಸಬೇಕಾಗುತ್ತೆ.

ಹಕ್ಕಿ-ಮರಿಗಳಂತೆ ದಪ್ಪ ಹರಳಿಗೆ ನೇತುಹಾಕಿದ್ದ ಮೂರು ಕಿರು ವಜ್ರಗಳು. ಕಿವಿಗಳಲ್ಲಿ ಜಗ್ಗಿ ಬಗ್ಗಿರುವ ನಾಲ್ಕೂ ಕ್ಯಾರೆಟ್ಟಿನ ಓಲೆಗಳು, ಕೊರಳಲ್ಲಿ ಐದೆಳೆ ಬಂಗಾರದ ಚೈನು; ಹದಿನೆಂಟು ಮೊಳದ ಹಳದಿ ಕೆಂಪು ಚೌಕಳಿ ಪಟ್ಟು ಸೀರೆ, ಮೀಟರುದ್ದದ ಜರಿ ಸೆರಗು ಕಂಕುಳ ಕೆಳಗೆ 'ನಗೆ ಮಲ್ಲಿಗೆ ಚೆಲ್ಲುತ್ತ' ಹೆಜ್ಜೆ ಇಡುವ ನಡಿಗೆ!

ಮೇಲುಕೋಟೆ ಅಂಚಿನ ಕಚ್ಚೆ ಪಂಚೆ, ನಾಲ್ಕೂ ಬೆಟ್ಟಂಚಿನ ಕಲಾಪತ್ತು ಶಲ್ಯ, ಹಣೆಯಲ್ಲಿ ಥಾಳಾದ ನಾಮಗೆರೆಗಳು, ಕಣ್ಣಲ್ಲಿ ಮಿಂಚುವ ಪ್ರೀತಿ ವಿಶ್ವಾಸದ ಬೆಳಕು!

ಮೇಲಿನ ಎರಡು ಚಿತ್ರಣಗಳು ತಂಗಮಣಿಯಮ್ಮಾಳ್ ನರಸಿಂಹಯ್ಯಂಗಾರ್ ದಂಪತಿಗಳು ಯುಗಾದಿಯ ದಿನ ನಮ್ಮ ಮನೆಗೆ ಬರುವಾಗಿನ ದೃಶ್ಯ.

ಹಾ! ಫೋಟೋ ಹಿಡಿಯುತ್ತೇವೆ, ಸಾಧ್ಯವಾದರೆ 'ತುಷಾರ'ಕ್ಕೆ ರವಾನಿಸುತ್ತೇವೆ; ನೀವೂ ನೋಡುವಿರಂತೆ. ಅಂದ ಹಾಗೇ, 'ಫ್ಲಾಷ್'ನ ಆವಶ್ಯಕತೆ ಇಲ್ಲ. ಅರ್ಥವಾಯಿತಲ್ಲ? ●

ಅದೊಂದು ಬೋಳು ಬಯಲು.

ಬಯಲೆಂದರೆ ಬರೀ ಬಯಲು. ವೈಶಾಖದ ಬಿಸಿಲಲ್ಲಿ ಸುಟ್ಟು ಇಟ್ಟಿಗೆಯಾದ, ಆಯತ–ವೃತ್ತ–ಚೌಕ ಎಂದು ಹೆಸರಿಸಬಹುದಾದ ಯಾವುದೇ ಆಕಾರವನ್ನೂ ಹೊಂದಿರದ, ಗುರುತಿಸಬಹುದಾದ ಯಾವ ಸ್ವಂತಿಕೆಯನ್ನೂ ಪ್ರಕಟಪಡಿಸದೆ ಸುಮ್ಮನೆ ಹಾಸಿಬಿದ್ದ ಒಣನೆಲ, ಅದರ ದಕ್ಷಿಣ ಮೂಲೆಯಲ್ಲಿ ಹಬ್ಬಿಕೊಂಡ ಮುಳ್ಳು ಬೇಲಿ ಮಾತ್ರ ಹಸಿರಾಡುತ್ತಿದೆ. ಅದರೊಳಗಿಂದ ಮುಖವೆತ್ತಿದ ಸುಮಾರಾದ ಮಂಗಳೂರು ಹೆಂಚಿನ ಮನೆ, ಹಂಚುಗಳ ಸಾವಿರಾರು ಅಡ್ಡ ಉದ್ದ ಕೂಡುಗೆರೆಗಳು ಮುದುಕರ ಕೆನ್ನೆಯ ಸುಕ್ಕುಗಳಂತೆ, ಮನುಷ್ಯ ಕುಲದ ಹಣೆಬರಹದಂತೆ. ಗೆರೆಗಳನ್ನು ಅಳಿಸುತ್ತ ಸ್ಪಷ್ಟಗೊಳಿಸುತ್ತ ಆಕಾಶದಲ್ಲಿ ಒಬ್ಬಂಟಿಯಾಗಿ ನಿಂತ ತೆಂಗಿನ ಮರ, ಮರದ ಕೆಳಗೆ ಮನುಷ್ಯತ್ವವನ್ನು ಮತ್ತಷ್ಟು ಕುಬ್ಜಗೊಳಿಸುತ್ತ ಆತ ನಿಂತಿದ್ದಾನೆ. ಬೆಳಗಿನ ಹತ್ತು ಗಂಟೆಗೇ ಬದುಕಿನ ಭೇರನ್ನೇ ಕಮರಿಸುವ ಬಿಸಿಲ ಝಳಕ್ಕೆ ಬೆವರಿಳಿಯುತ್ತಿದ್ದರೂ ಆ ಬೆವರ ಹನಿಗಳೇ ಆರಿ ತಣ್ಣಗಾಗಿ ಗಾಳಿ ಬೀಸಿದಾಗ ತಂಪು ತರಬಹುದೆಂದು ನಿರೀಕ್ಷಿಸುತ್ತಿದ್ದಾನೆ.

ನಿರೀಕ್ಷೆ ನಿರೀಕ್ಷೆ ಮಾತ್ರವೇ ಆಗಿ ಕಾಯುವ ಕ್ಷಣಗಳು ಒಂದೊಂದೂ ಹತ್ತಾಗಿ ನೂರಾಗಿ ಹಿಗ್ಗುತ್ತ ಹೋದಂತೆ 'ಥತ್ತೇರಿ' ಎಂದು ಗಡಬಡಿಸಿ ಹೆಜ್ಜೆ ಕಿತ್ತು ದಣಪೆ ಸರಿಸಿ, ಹೊರಗೆ ಬಂದು ಕಣ್ಣಿಗೆ ಕೈ ಹಚ್ಚಿ ಎದುರಿಗೆ ಉದ್ದೋ ಉದ್ದ ಬಿದ್ದುಕೊಂಡ ಡಾಮರು ರಸ್ತೆಯಲ್ಲಿ ಹುಡುಕಿಯೇ ಹುಡುಕಿದ. ಕಿಸೆಯಿಂದ ಚಶ್ಮಾ ತೆಗೆದು ಕಣ್ಣಿಗೇರಿಸಿ ನೋಡಿದ. ಇಲ್ಲ, ಯಾರೂ ಇಲ್ಲ. ಮನುಷ್ಯರು ಹಾಗಿರಲಿ. ಕಾಗೆ–ಗುಬ್ಬಿ–ನಾಯಿ–ಕುನ್ನಿಗಳ ಸುಳಿವೂ ಇಲ್ಲದೆ ಖಾಲಿಯೆಂದರೆ ಖಾಲಿಯೇ ಆಗಿಬಿಟ್ಟಿದೆ ದಾರಿ....

ಹೌದು, ಹತ್ತು ಜನ ಓಡಾಡುವ ಹಾದಿಯಲ್ಲಿ ಹುಲ್ಲೂ ಮೊಳೆಯುವುದಿಲ್ಲವೆಂದು–ಅಸಂಖ್ಯಾತ ಹೆಜ್ಜೆ ತುಳಿತಕ್ಕೆ ಸಿಕ್ಕಿ ನುಗ್ಗಾಗಿ ಸತ್ತುಹೋದ ದಾರಿಯಲ್ಲಿ ಜೀವಂತಿಕೆ ಬದುಕಲಾರದೆಂದು–ಹುಟ್ಟಿ ಸಾಯುವದರೊಳಗಿನ ಮಾನವ ಜೀವಿತವನ್ನು ನೋವಿಲ್ಲದ – ನರಳುವಿಕೆಯಿಲ್ಲದ – ಹಸಿವಿನ – ಹಾಹಾಕಾರವಿಲ್ಲದ–ಪಿಶಾಚ ಕ್ರೌರ್ಯವಿಲ್ಲದ ಹೊಸ ಹಾದಿಯಲ್ಲಿ ಹೊರಡಿಸುವ ಪ್ರಯತ್ನಕ್ಕೆ ಆತ ತನ್ನೆಲ್ಲವನ್ನೂ ಇಡಿಯಾಗಿ ತೊಡಗಿಸಿದ್ದ. ಬದುಕಿನ ಕುರೂಪವನ್ನೆಲ್ಲ ಗುಡಿಸಿ ಗುಡ್ಡೆ ಹಾಕಿ, ಅದೇ ತಿಪ್ಪೆಯಿಂದಲೇ ಚೆಲುವನ್ನರಳಿಸುವ ಬಹುದೊಡ್ಡ ಸವಾಲನ್ನು ತನ್ನ ಜೀವನ್ಮರಣದ ಪ್ರಶ್ನೆಯಾಗಿ ಸ್ವೀಕರಿಸಿದ್ದ.

ಅವನ ಜೊತೆಯಲ್ಲಿ ಊರಿನ ನೂರಾರು ಭಿಕ್ಷುಕರ ಚರಂಡಿ ಬದುಕಿತ್ತು. ಅವರ ಮಕ್ಕಳ ರೌರವ ನರಕವಾದ ಬಾಲ್ಯವಿತ್ತು. ಊರೆಲ್ಲ ಉಂಡು ಎಸೆದ ಎಂಜಲೆಲೆಯನ್ನು ಅವರು ನಾಯಿಗಳೊಂದಿಗೆ ನೆಕ್ಕುವ ವಾಸ್ತವವಿತ್ತು. ಕುಡಿತ–ಕಳ್ಳತನ–ಹಾದರಗಳೇ ಸಾರ್ವತ್ರಿಕ ಮೌಲ್ಯವಾದ ನಿಷ್ಠುರ ಪ್ರಪಂಚವಿತ್ತು. ಅದರ ಪಕ್ಕದಲ್ಲೇ ನಾಗರಿಕತೆ–ಪೌರಪ್ರಜ್ಞೆ–ಕಾಯಿದೆ–ಕಾನೂನುಗಳಿದ್ದವು. ಬಂಗ್ಲೆ–ಕಾರು–ವಸ್ತ್ರ–ಒಡವೆ–ಬ್ಯಾಂಕ್ ಬ್ಯಾಲೆನ್ಸ್‌ಗಳಿದ್ದವು. ಹೊಟ್ಟೆ ತುಂಬಿದಾಗ ಸಲೀಸಾಗಿ ಉರುಳುವ ಔದಾರ್ಯವಿತ್ತು. ತ್ಯಾಗ–ಸಂಯಮಗಳಿದ್ದವು.

ಅವನೆದುರು ಅಪ್ಪನ ಉಪೇಕ್ಷೆ, ಅಣ್ಣ–ತಮ್ಮಂದಿರ ಅಪಹಾಸ್ಯ, ಗೆಳೆಯರ ಅನುಕಂಪಗಳಿದ್ದವು. ಜೇಬಿನಲ್ಲಿ ಅಪ್ಪ ಕಲಿಸಿದ ನಾಲ್ಕಕ್ಷರಗಳು ಮಾತ್ರ ಇದ್ದವು. ಅವು ತೋರಿಸುವ ವಿಶ್ವರೂಪ ದರ್ಶನವನ್ನು ಹಿಡಿದಿಟ್ಟುಕೊಳ್ಳಲು ಕೈ ಚಾಚಿ ಆತ ಹೊರಟಿದ್ದ.

ಪೇಟೆಯ ಹೊರಗೆ ಎರಡೆಕರೆ ಸರಕಾರಿ ಪಡ ಜಮೀನಿನಲ್ಲಿ ಗುಡಿಸಲು ಹಾಕಿಕೊಂಡು ನಾಲ್ಕೇ ನಾಲ್ಕು ತಿರುಪೆ ಮಕ್ಕಳನ್ನು ತಂದಿಟ್ಟುಕೊಂಡು ಅನಾಥಾಶ್ರಮ ಆರಂಭಿಸಿ, ಕಾರೆ ಹಿಂಡು ಕಿತ್ತು ಅಂಗಳದಲ್ಲೊಂದು ತೆಂಗು ನೆಟ್ಟ. ತಾನೇ ಗುದ್ದಲಿ ಹಿಡಿದು ಹಗಲು ರಾತ್ರಿ ಅಗೆದು ಬಾವಿ ತೋಡಿ ಅದಕ್ಕೆ ನೀರೆತ್ತಿ ಹೊಯ್ದ. ಆ ಕೊಳೆ ಮಕ್ಕಳ ಸಿಂಬಳ ಒರೆಸಿ, ಜಡೆಗಟ್ಟಿದ ಕೂದಲು,



● ಭಾಗೀರಥಿ ಹೆಗಡೆ

ಅವತ್ತು ಓಡಿಹೋದ
ಅವಳು ಇದೀಗ
ಹತ್ತು ವರ್ಷಗಳಾದ
ಮೇಲೆ ಬರುತ್ತಾಳಂತೆ,
ತನ್ನ ನೋಡಬೇಕಂತೆ,
ಮಾತನಾಡಬೇಕಂತೆ,
ಯಾಕೊ?...
ಏನಿದೆಯೊ
ಮಾತಾಡಲು?



ತಿಕ್ಕಿ ಮೀಸಿ, ಒಗೆದ ವಸ್ತ್ರ ತೊಡಿಸಿ ದೂರ ನಿಂತು ಈಗ ಹೇಗೆ ಕಾಣುತ್ತಾರೆಂದು ನೋಡಿ ನೋಡಿ ಹಿಗ್ಗಿದ. ಬಿಸಿ ಬಿಸಿ ಗಂಜಿ ಕಾಸಿ ಹೊಯ್ದು ಅವು ಗಬಗಬ ಮುಕ್ಕುವಾಗ ಕಸಿವಿಸಿಗೊಂಡು, ತೇಗಿದಾಗ ತಾನೂ ಸಂತೃಪ್ತಿಯಿಂದ ತೇಗಿ, ಆ ಎಳೆಯ ಕೈಗಳಿಂದ ಕಳೆ ಕೀಳಿಸಿ ಗಿಡ ನೆಡಿಸಿ ಹೂದೋಟ ಎಬ್ಬಿಸಿದ. ಕೈ ಹಿಡಿದು ಅ ಆ ತಿದ್ದಿಸಿ ಶಾಲೆಗೆ ಕಳಿಸಿ ಪಾಲಕನಾಗಿ ತನ್ನ ಹೆಸರನ್ನೇ ಬರೆಸಿ ಅವು ಒಂದನೇಯತ್ತೆ ಪಾಸಾದಾಗ ತನ್ನ ಕನಸು ನನಸಾಗಿದ್ದಕ್ಕೆ– ಅತ್ಯಲ್ಪ ಪ್ರಮಾಣದಲ್ಲೇ ಆದರೂ ಮನುಷ್ಯರನ್ನು ಮಾನವರನ್ನಾಗಿಸುವ ಕಾರ್ಯ ಸಾಧ್ಯವಾಗಿದ್ದಕ್ಕೆ ಸಮಾಧಾನ ಪಡುತ್ತಿರುವಾಗಲೂ.... ತನ್ನಿಂದ ತಪ್ಪಾಗಿಬಿಟ್ಟಿತೆ? ತಂದೆ ತಾಯಿಗಳಿಂದ ಇವರನ್ನಗಲಿಸಿ ಅವರವರ ಸಹಜ ಜೀವಿತದಿಂದ ವಂಚಿಸಿಬಿಟ್ಟೆನೆ?... ತನ್ನ ಪ್ರಯತ್ನ ಅನಪೇಕ್ಷಿತ ಅತಿಕ್ರಮಣವಾಗಿಬಿಡಲಿಲ್ಲವಷ್ಟೆ? ಎಂದೆಲ್ಲ ಗೊಂದಲಗೊಂಡು ಎಷ್ಟೋ ರಾತ್ರಿ ನಿದ್ದೆಗೆಟ್ಟ. ಅಲ್ಲೇ ಮತ್ತೆ ಕದ್ದು ಕದ್ದು ಆ ಮಕ್ಕಳು ಮದುವೆ ಮನೆಯ ಎಂಜಲೆಲೆ ರಾಶಿಯಿಂದ ಜಿಲೇಬಿ ಹೆಕ್ಕಿ ತಿಂದಿದ್ದು ಗೊತ್ತಾಗಿ ನಾಲ್ವರಿಗೂ ದನ ಬಡಿತ ಬಡಿದು ನಂತರ ನಾಲ್ವರನ್ನೂ ಒಟ್ಟಾಗಿ ಅಪ್ಪಿಕೊಂಡು 'ಹೋಽಽ' ಎಂದು ಅತ್ತ. ಅತ್ತವನು ಎಂಟಾಣೆ ಪೆಪ್ಪರಮೆಂಟು ತಂದು ತಿನ್ನಿಸಿ ಕಣ್ಣೀರೊರಸಿದ. ಅವುಗಳಿಗಾಗಿ ಜೋಳಿಗೆ ಹಾಕಿ ಯಾರ್ಯಾರಿಂದ ಏನೇನೆಲ್ಲ ಅನ್ನಿಸಿಕೊಂಡೂ ಗೊಬ್ಬರ ಹೀರಿ ಮೊಗ್ಗರಳಿಸುವ ಗುಲಾಬಿಯಂತೆ ನಕ್ಕ. ಆದರೆ ಏನೇ ಮಾಡಿದರೂ ಆ ಮಕ್ಕಳ ಕಣ್ಣಲ್ಲಿ ಮಡುಗಟ್ಟಿ ನಿಂತ ಭೀತಿಯನ್ನು ಪರದೇಸಿತನವನ್ನು ಕಂಡಾಗಲೆಲ್ಲ ಝುಲ್ಲೆಂದು ಬೆವರಿದ.

ನಾಲ್ಕು ಮಕ್ಕಳು ನಲವತ್ತಾಗಿ ತುಂಬಿಕೊಂಡರು. ಎರಡೆಕೆರೆ ಇಪ್ಪತ್ತಾಯಿತು. ಸರಕಾರದಿಂದ ಸಾರ್ವಜನಿಕರಿಂದ ಸಹಾಯ ಹೊಳೆಯಾಗಿ ಹರಿದು ಬಂತು. ಹುಲ್ಲು ಜೋಪಡಿ ಆರ್.ಸಿ.ಸಿ. ಬಂಗ್ಲೆಯಾಯಿತು. ಸಾವಿರಾರು ಎಳೆಯ ಅಸಹಾಯ ಜೀವಗಳು ಅಂಬೆಗಾಲಿಕ್ಕಿ ಎದ್ದು ನಿಂತು ತಮ್ಮ ಬದುಕಿನ ಪಯಣದ ಮೊದಲ ಹೆಜ್ಜೆ ಕಿತ್ತಿಟ್ಟರು. ಮೊಟ್ಟಮೊದಲ ತೊದಲಿನಲ್ಲಿ ತಮ್ಮನ್ನು ಇತರರಿಗೆ ಪರಿಚಯಿಸಿದರು. ಆಶ್ರಮ ದಾಟಿ ಅಕ್ಷರ ಕಲಿತವರು ಎಷ್ಟೋ ಮಂದಿ ತಮ್ಮ ತಮ್ಮ ಹಾದಿ ಹುಡುಕಿ ಹೊರಟಿದ್ದರು. ಇನ್ನೆಷ್ಟೋ ಹೊರಗೆ ಹಾದಿ ಕಾಣದವರು ಒಳಹೊಕ್ಕರು. ಒಂದು ಮಹಾಮನೆಯ ಒಡೆಯನಾಗಿ "ನೀನೇ ಸೈ" ಅನ್ನಿಸಿಕೊಳ್ಳುತ್ತಿದ್ದಾಗಲೂ – ಛೆ ಈ ಪ್ರಯತ್ನ ಯಾತಕ್ಕೂ ಬಾರದು. ಕೋಟ್ಯಂತರ ಕಣ್ಣುಗಳ ಕಂಬನಿ ಒರೆಸಲು ಇವೆರಡು ಕೈ ಎಷ್ಟಕ್ಕೂ ಸಾಲದೆಂಬ ಅತೃಪ್ತಿಯೂ ಆಗಾಗ ಮೇಲೆದ್ದು ಕುಟುಕುತ್ತಿತ್ತು...

ಅಲೆಲೆಲೆಲೆಲೆ! ಯಾವನೊ ಅವನು? ಈಗೆಲ್ಲಿ ಹಾಳಾಗಿ ಹೋದ? ಹಿಡ್ಕೊಂಡ್ ಬನ್ನಿ ಇಲ್ಲಿ ಅವ್ನ... ತನ್ನ ಜೋಕಿಗೆ ತಾನೇ ನಕ್ಕು ಆತ ಅಂದರೆ ನಮ್ಮ ಕಥಾನಾಯಕ ಆಕಾಶ, ಚಪ್ಪಾಳೆ ತಟ್ಟಿದ. ಖಾಲಿ ಹಾದಿಯಲ್ಲಿ ಕಣ್ಣು ಹಾಯಿಸಿ ನಿಟ್ಟುಸಿರಿಟ್ಟ.

ಖಾಲಿ ಕಾಗದದಲ್ಲಿ ಕವನವಾಗಿ ಬರೆದುಕೊಳ್ಳಬೇಕಾಗಿದ್ದ ಸುಗುಣ... ಒಂದೇ ಒಂದು ನೋಟದಲ್ಲಿ ಸಾವಿರ ಅರ್ಥ ಹೊಳೆಯಿಸುತ್ತಿದ್ದ ಆಪ್ತ ಸಹಾಯಕಿ... ತಾನೇ ಕೈಯಾರೆ ಮೀಸಿ ನೆತ್ತಿಗೆಣ್ಣೆ ಪೂಸಿ ತುತ್ತು ತಿನ್ನಿಸಿ ಬೆಳೆಸಿದ ಮುದ್ದಿನ ಕೂಸು... ಇಪ್ಪತ್ತೈದು ವರ್ಷಗಳ ಅಂತರ ಮರೆತು ಯಾವತ್ತಿನಿಂದ ತನ್ನಲ್ಲಿ ಸಾಮಾನ್ಯಕ್ಕೆ ಹೊರತಾದ ಮೋಹ ಇರಿಸಿಕೊಂಡಿತ್ತೊ ಗೊತ್ತೇ ಆಗಲಿಲ್ಲವಲ್ಲ... ಅದೆಲ್ಲಿಯವರೆಗೆಂದರೆ ಎಲ್ಲರೂ ಮಲಗಿ ಇಡೀ ಆಶ್ರಮ ನಿಃಶ್ಶಬ್ದವಾದರೂ ತಾವಿಬ್ಬರೂ ಕೂತು ಬರೆಯುತ್ತಿದ್ದ ಲೆಕ್ಕಪತ್ರದ ಕೆಲಸ ಮುಗಿದು ಮೇಲೆದ್ದರೂ ಅವಳು ಮಾತ್ರ ಕುರ್ಚಿಗಂಟಿಯೇ ಇರಬೇಕು. ನಾಲ್ಕು ಬಾರಿ ತಾನು 'ಹೋಗು ಮಲಗು' ಎಂದರೂ ಅವಳು ಮೇಲೇಳದೆ ಕೊನೆಗೆ ಬೈದೇ ಆಚೆ ಕಳಿಸಬೇಕು. ಆಗಲೂ ಅಷ್ಟೇ, ತಿರುಗಿ ತಿರುಗಿ ನೋಡುತ್ತ ಕಾಲೆಳೆದೆಳೆದು ಹಾಕುತ್ತ ಅವಳು ಹೊರಟರೆ ಆ ಅಭಿಮಾನ ಹೊತ್ತಿದ್ದಕ್ಕೆ ತನ್ನೆದೆ ಉಬ್ಬಿ ಉಬ್ಬಿ ಗಡಿಗೆಯಾಗಬೇಕು....

ಆದರೆ ಆ ಅವಿನಾಭಾವದ ಮೂಲನೆಲೆಯ ಸಾಕ್ಷಾತ್ಕಾರವಾದಾಗ ತನಗೆ ಆಘಾತವಾಗಿತ್ತು ಅಸಹ್ಯವೆನಿಸಿತ್ತು. ನೀವು ಹೆಣ್ಣುಗಳೇ ಹೀಗೆ, ಕೇವಲ ಅದೊಂದನ್ನೇ ಪಡೆದು ಹುಟ್ಟಿದ್ದೀರಿ ಎಂದು ಕಟುವಾಗಿ ನುಡಿದು–ನಾನು ನಿನ್ನ ಸಾಕಿದ ತಂದೆ. ನನ್ನ ದೇಹದ ಮೇಲೇ ಕಣ್ಣು ಹಾಕಲು

ನೀನೇನು ಮನುಷ್ಯಳೊ ಎಮ್ಮೆಯೊ ಎಂದು ಹೀಗಳೆದಾಗ, ಅವಳು ಬಾಯಿಗೆ ಸೆರಗೊತ್ತಿ ಓಡಿಹೋದವಳು ನಾಲ್ಕೇ ದಿನಕ್ಕೆ ಆಶ್ರಮದಿಂದ ಪರಾರಿಯಾಗಿದ್ದಳು.

ಇದೀಗ ಹತ್ತು ವರ್ಷಗಳ ನಂತರ ಬರುತ್ತಾಳಂತೆ, ನನ್ನ ನೋಡಬೇಕಂತೆ, ಮಾತನಾಡಬೇಕಂತೆ, ಯಾಕೊ?... ಏನಿದೆಯೋ ಮಾತಾಡಲು?...

ಮುಂಜಾನೆ ಹತ್ತಕ್ಕೆಲ್ಲ ಆಶ್ರಮದ ಬಾಗಿಲಲ್ಲಿರುತ್ತೇನೆಂದು ಬರೆದವಳು ಹನ್ನೊಂದಾದರೂ ಪತ್ತೆಯಿಲ್ಲ. ಎಲ್ಲಿ ಬಸ್ಸು ಲೇಟಾಯಿತೋ... ಮುದುಕ ಕಾಯ್ತಾ ಇರಲಿ ಎಂಬ ಸೊಕ್ಕೊ... ಅಥವಾ... ಅಥವಾ ಬರುವದೇ ಇಲ್ಲವೊ? ಈ ವಿಚಾರ ಬಂದದ್ದೇ ಮೈಯೆಲ್ಲ ಸೋತು ಬಿದ್ದು ಹೋಗುತ್ತೇನೆಂಬ ಭೀತಿಯುಂಟಾದಾಗ ದಣಪೆಗೆ ಬೆನ್ನು ಕೊಟ್ಟು ಭಾರವಾಗುತ್ತಿದ್ದ ರೆಪ್ಪೆ ಬಿಗಿಯಾಗಿ ಬೆಸೆದುಕೊಂಡು ನಿಂತ.

ಹಾಗೆ ಎಷ್ಟು ಹೊತ್ತಾಗಿತ್ತೊ... ರಿಕ್ಷಾವೊಂದರ ಹಾರ್ನಿಗೆ ಬೆಚ್ಚಿ ಕಣ್ಣು ತೆರೆದಾಗ ಹೆಂಗಸೊಬ್ಬಳು ನೇರ ಆಕಾಶದಿಂದಿಳಿದವಳಂತೆ ಉದ್ದಕ್ಕೂ ನಿಂತುಬಿಟ್ಟಿದ್ದಾಳೆ. ಗುಳಿಬಿದ್ದ ಕಣ್ಣು—ಸಣಕಲು ಕೈ ಕಾಲು—ಬತ್ತಿದ ಕೆನ್ನೆ... ಆತ ರೆಪ್ಪೆ ತಿಕ್ಕಿ ತಿಕ್ಕಿ ನೋಡಿದ.

"ಓಹೊ! ಗುರ್ತಾಗಲಿಲ್ಲ?" ಆಕೆ ನಗಲು ಹೋಗಿ ವಿಕಾರವಾಗಿ ಹಲ್ಲು ಕಿರಿದಳು.

"ನೀನು... ನೀನು... ಸುಗುಣ ಅಲ್ವೆ?"

"ಹಾಂ, ಪರವಾ ಇಲ್ಲ. ಇಷ್ಟು ನೆನಪಿದೆ ಅಂತಾಯ್ತು. ಹೌದು ಸುಗುಣ ಅನ್ನೋ ದುರ್ಗುಣಳೇ ನಾನು. ನನ್ನ ಪತ್ರ ಸಿಕ್ಕಿತಾ?"

ಆತ ಒಮ್ಮೆಲೆ ಸುಂಟರಗಾಳಿಗೆ ಸಿಕ್ಕಿದಂತೆ ಥರಥರ ನಡುಗಿ ಹೋದ. ಗೋದಿಗೆಂಪು ಮೈಬಣ್ಣದ ಸಿಡಿದರೆ ಒಡೆದಂತಿದ್ದ ಮೈಕಟ್ಟಿನ ಸುಗುಣ?... ಮೂವತ್ತಕ್ಕೆ ಮುದಿಯಾದ ಈ ಹೆಂಗಸು? ಅಯ್ಯೊ ದೇವರೆ! ಯಾವುದು ನಿಜ?...

"ಬಾ, ಒಳಗೆ ಬಾ. ನಿನ್ನೆ ಬಂತು ಪತ್ರ. ಬೆಳಗಿಂದ ಕಾಯ್ತಾ ಇದ್ದೆ. ಬಚ್ಚಲಲ್ಲಿ ಬಿಸಿ ನೀರಿದೆ. ಆಮೇಲೆ ಬೇಕಾದ್ರೆ ಸ್ನಾನ ಮಾಡ್ಬಹುದು. ಕೂತ್ಕೊ. ಚಾ ಮಾಡಿ ತರ್ತೇನೆ" ಅನ್ನುತ್ತ ಅದೇನೋ ಹೊಸ ಹುರುಪು ತುಂಬಿ ಚಾ ಅವಲಕ್ಕಿ ತಂದು ಅವಳೆದುರಿಗಿಟ್ಟು "ತಗೊ" ಎಂದು ಇದೀಗ ಹೇಳು ಅದೇನು ಏಕಾಏಕಿ ನನ್ನ ನೆನಪಾದದ್ದು ಎಂಬಂತೆ ಅವಳ ಕಣ್ಣಲ್ಲೇ ನೋಡಿದಾಗ ಅವಳು ತಲೆ ತಗ್ಗಿಸಿ ಮರು ಕ್ಷಣಕ್ಕೆ ಮೇಲೆತ್ತಿ "ಎಲ್ಲಿ ಯಾರೂ ಕಾಣ್ತಾ ಇಲ್ವಲ್ಲ" ಎಂದು ಆಚೀಚೆ ಹುಡುಕಿದಳು.

"ಇದ್ದರಲ್ಲವೆ ಕಾಣೋದು"

"ಇಲ್ಲದೆ ಎಲ್ಲಾ ಎಲ್ಲಿ ಹೋದ್ರು?"

"ಹೋದ್ರು ಎಲ್ಲೆಲ್ಲೊ ಕಾಲು ಎಳ್ಕೊಂಡು ಹೋದ ಕಡೆ..."

"ಇದೇನೀರೀತಿ ಒಗಟೊಗಟಾಗಿ ಮಾತಾಡ್ತೀರಿ? ಏನಂತ ಸರಿಯಾಗಿ ಹೇಳ್ಬಾರ್ದಾ?"

"ಹೇಳ್ತೇನೆ, ನೀ ಮೊದ್ಲು ಚಾ ಕುಡಿ, ತಗಾ ಅವಲಕ್ಕಿ".

ಹುಂ, ಸರಿಯಾಗಿ ಹೇಳ್ಬೇಕಂತೆ ಸರಿಯಾಗಿ. ಕಳ್ಳ ಲೌಡೀನ್ನ ತಂದು ಹೇಳಬೇಕಾದರೂ

**ಕೋರಿಕೆ**

ಛಂದಸ್ಸು
ವ್ಯಾಕರಣ
ರಾಗ ತಾಳಗಳ
ಚಿಂತೆ ಬಿಡಿ
ವಿಮರ್ಶಕರ
ತಲೆಕೆಡಿಸುವ
ಕವನ ಬರೆದುಕೊಡಿ

● ಮಹಾಬಲ ಆಳ್ವ



**ಫಜೀತಿ**

"ನೀನು ನಕ್ಕರೆ
ಹಾಲು ಸಕ್ಕರೆ"
ಎಂದಿದ್ದೇ ತಪ್ಪಾಯಿತು ನೋಡಿ,
ತಂದುಕೊಡುತ್ತಾಳೆ
ಬರೀ ಡಿಕಾಕ್ಷನ್
ತುಂಟ ನಗೆಯೊಂದ ಬೀರಿ!

● ವಿಶ್ವ, ಮರಕ್ಕಿಣಿ




ಏನನ್ನು?.... ಎಲ್ಲಿಂದ?..... ಹೇಗೆ? ಈ ಭೂಮಿ ಮೇಲೆ ಹುಟ್ಟಿ ಬಂದ ಸಮಸ್ತ ಮಾನವರ ಬದುಕನ್ನು ಹಸನುಗೊಳಿಸುವ ಸಲುವಾಗಿ ನಡೆದ ಸಾವಿರದೊಂದನೆಯ ಆ ಯಶಸ್ವೀ ಪ್ರಯೋಗ ಎಂದೆ?... ಕರಿ ತುರಗಗಳ ಹೆಣಗಳ ನಡುವೆ... ಮುರಿದು ಬಿದ್ದ ಬಿಲ್ಲು–ಬಾಣ–ರಥ–ಖಡ್ಗಗಳ ರಾಶಿಯ ಮಧ್ಯೆ–ಗುಟುಕು ನೀರಿಗಾಗಿ ಬಾಯಿ ಬಿಡುತ್ತ ಹೊರಳಾಡುತ್ತಿರುವ ಕಾಲಾಳುಗಳ ಸಂಕಟವನ್ನು ತೆರೆದ ಕಣ್ಣಿಂದ ಅಸಹಾಯಕ ನೋಟದಿಂದ ನೋಡುತ್ತಲೇ ಇರುವ ಸೌಭಾಗ್ಯ ನನ್ನದೆಂದು ವರ್ಣಿಸಲೆ?... ನನ್ನ ಗುಂಡಿಗೆಯ ರಕ್ತವಷ್ಟನ್ನೂ ಬಸಿದು ಕಟ್ಟಿದ ಕನಸುಗಳ ಸಾಮ್ರಾಜ್ಯ ಉರಿದು ಬೂದಿಯಾಗಿ ಆ ಬೂದಿ ಗುಡ್ಡೆಯ ಮೇಲೆ ನಾನೊಬ್ಬನೇ ನಿಂತುಬಿಟ್ಟಿದ್ದೇನೆಂದೆ? ವ್ರತವೂ ಇಲ್ಲದ ಸುಖವೂ ಇಲ್ಲದ ಗೊಡ್ಡು ಬಾಳುವೆ ನನ್ನದಾಗಿ ಹೋಯಿತು ಎನ್ನಲೆ?... ನನ್ನ ಧ್ಯೇಯಾದರ್ಶಗಳ ಮುಸುಡಿಗೆ ಒದ್ದುಹೋದ ಈ ಇವಳೆದುರು ಏನೆಲ್ಲವನ್ನೂ ಯಾಕೆ ಬಚ್ಚಿಡಲಿ?

ಇವಳೇ... ಈ ಹೆಣ್ಣೆ ಓಡಿಹೋದದ್ದೇ ಒಂದು ನೆಪವಾಗಿ ಊರಿನ ಏಕೈಕ ಪತ್ರಿಕೆಯಲ್ಲಿ ಯಾರೋ ಅನಾಮಧೇಯ ಹೇಡಿ ಯಧ್ವಾತದ್ವಾ ಪತ್ರ ಬರೆದು, ಇಡೀ ಊರಿಗೂರೇ ತಿರುಗಿ ಬಿದ್ದಿದ್ದು... ಸರಕಾರ ತನಿಖೆ ನಡೆಸಿದ್ದು... ಅಲ್ಲಿ ಅತ್ಯಂತ ಅನಿರೀಕ್ಷಿತವಾಗಿ ನಾಲ್ಕಾರು ಹುಡುಗ ಹುಡುಗಿಯರು ಸಿಕ್ಕಿಬಿದ್ದಿದ್ದು... ತನಗೆ ಯಾವೊಂದು ಸುಳುಹೂ ಗೊತ್ತಾಗದೆ ನಡೆಯುತ್ತಿರುವ ಅವ್ಯವಹಾರ ಕಂಡು ತಾನು ಸಂಪೂರ್ಣ ಕುಸಿದು ಹೋಗಿ, ಇಡೀ ಮನುಷ್ಯ ಕುಲದ ಮೇಲೇ ಹೇಸಿಕೆ ಹುಟ್ಟಿ, ಆಶ್ರಮದ ಬಾಗಿಲು ಮುಚ್ಚಿ ಅನಾಥ ಮಕ್ಕಳನ್ನೆಲ್ಲ ದೂರದ ಇನ್ನೊಂದು ಆಶ್ರಮಕ್ಕೆ ಸೇರಿಸಿ, ತನ್ನ ಮೊಟ್ಟಮೊದಲಿನ ಎರಡೆಕೆರೆಯ ಹೊರತಾದ ಆಸ್ತಿಯನ್ನಷ್ಟೂ ಸರಕಾರಕ್ಕೆ ವಹಿಸಿ, ಕೈ ತೊಳೆದುಕೊಂಡಿದ್ದು... ಇದನ್ನೆಲ್ಲ ಹೇಗೆ?... ಹೇಗೆ ಹೇಳಲಿ ಹೆಣ್ಣೆ? ಹೇಳ ಹೊರಟರೆ ಸುಖ ಇಲ್ಲ ನೋಡು.

"ಹೋಗ್ಲಿ ನಂತ್ರ ನೀವು ಮದುವೆಯಾದ್ರೂ ಆಗ್ಬಹುದಿತ್ತಲ್ಲ..." ತನಗಿದೆಲ್ಲ ಮೊದಲೇ ಗೊತ್ತಿತ್ತು ಎಂಬಂತೆ. ತನ್ನ ನೆನಪಿನಲ್ಲೇ ಈತ ಒಂಟಿಯಾಗುಳಿದನೆಂಬ ಹೆಮ್ಮೆಯಿಂದ–ಅವಳು ಹೇಳಿದಾಗ ಆತನಿಗೆ ಆಶ್ಚರ್ಯವೇನೂ ಆಗಲಿಲ್ಲ, ವಾದರೂ ಭಯಂಕರ ಸಿಟ್ಟು ಉಕ್ಕಿತು.

"ಛೆ ಛೆ, ಅದೇನ್ ಯಾವಾಗ್ಲೂ ಮದುವೆ–ಮದುವೆ. ಮದುವೆ? ಅದು ಬಿಟ್ರೆ ಬೇರೆ ಮಾತೇ ಇಲ್ವ? ಮದುವೆಯಾಗ್ದೆ ಇದ್ದವ್ರೆಲ್ಲ ಮನುಷ್ಯರ ಲೆಕ್ಕದಲ್ಲಿ ಬರೋದೇ ಇಲ್ವೇನೊ?"

ಅವಳು ತಿರುಗಿ ಉಸಿರೆತ್ತಲಿಲ್ಲ. ಒಂದೊಂದೇ ಅವಲಕ್ಕಿ ಕಾಳು ಹೆಕ್ಕಿ ತಿಂದು ಮುಗಿಸಿ ಮೇಲಿಂದ ಚಾ ಸುರುವಿ ಕುಳಿತಳು.

ಯಾಕೆ? ಯಾಕೀರೀತಿ ಸಿಟ್ಟು? ಮದುವೆಯೆಂದ ಕೂಡಲೆ ತುರಿಕೆ ಬಳ್ಳಿ ತಾಗಿದವರಂತೆ ತಾನು ಕುಣಿದಾಡುವದ್ಯಾಕೆ? ತಾನೇನು ಗಂಡಸಲ್ಲವೆ?... ಸಹಜ ಜೈವಿಕ ಆಕಾಂಕ್ಷೆಯಿಲ್ಲದ ರೋಗಿಯೆ? ಮಾನವ ಸಂದರ್ಭಗಳ ದ್ವಂದ್ವಗಳನ್ನೆಲ್ಲ ಗೆದ್ದೆನೆಂಬ ಗರ್ವವೆ?..... ಅಥವಾ ಈ ಲೋಕ ವ್ಯಾಪಾರಕ್ಕೇ ಅತೀತನಾದ ಸಂತನೆ? ಛೆ, ಛೆ, ಬಿಡು ಅನ್ನು. ಅದನ್ನೆಲ್ಲ ತಾನು ಹೇಗೆ ಗೆದ್ದೆನೆಂದು, ಅಲ್ಲ ಗೆದ್ದೆನೆಂದು ತೋರಿಸಿಕೊಳ್ಳುವ ಪ್ರಯತ್ನದಲ್ಲಿ ತಾನು ಹೇಗೆ ಸೋತು ಸೊಪ್ಪಾಗಿ ಹೋಗುತ್ತಿದ್ದೇನೆಂದು–ಉಮಿಯೊಳಗಿನ ಬೆಂಕಿ ಉರಿದು ಧಗಿಧಗಿಸದೆ ಆರಿ ತಣ್ಣಗಾಗದೆ ಅದೆಷ್ಟು ಯಮಯಾತನೆ ಕೊಡುತ್ತಿತ್ತೆಂದು ಹೇಗೆ ಹೇಳ

ಬೇಕು? ತನ್ನೊಬ್ಬನ ಎದೆಯ ಸತ್ಯವನ್ನು ಉಗುಳಿ ಇನ್ನೊಬ್ಬನನ್ನೂ ಯಾಕೆ ದಹಿಸಬೇಕು?

ಆದರೆ... ಆದರೆ ತಾನೇನೂ ಭೀಷ್ಮಾಚಾರ್ಯ ನಂತೆ ಆಜನ್ಮ ಬ್ರಹ್ಮಚಾರಿಯಾಗಿರುವ ಪ್ರತಿಜ್ಞೆ ಮಾಡಿರಲಿಲ್ಲ. ಕಾವಿ ಉಟ್ಟು ದೀಕ್ಷೆ ಪಡೆದಿರ ಲಿಲ್ಲ. ಅಥವಾ ಯಾವೊಂದು ಹೆಣ್ಣಿನ ನೆನಪಿ ನಲ್ಲಿ ಜೀವ ಸವೆಸುವದೂ ಆಗಿರಲಿಲ್ಲ. ತನ್ನ ನಿರ್ಣಯ ನಿರಪೇಕ್ಷವಾಗಿತ್ತು. ನಿರ್ನಿಮಿತ್ತ ವಾಗಿತ್ತು. ತನ್ನ ಅಂತಃಶಕ್ತಿಯನ್ನು ಪ್ರಾಮಾಣಿಕತೆ ಯನ್ನು ತಾನೇ ಒರೆಗೆ ಹಚ್ಚುವ ಹಟವಾಗಿತ್ತು. ಆ ಹಟದ ಹಿಂದೆ ಬಹುಶಃ... ಅಮ್ಮ ಇದ್ದಳು, ಅಪ್ಪ ಇದ್ದ. 'ಯಾವ ಹೆಂಗಸ್ರೂ ಅಪ್ಪಿಂದ ಬಚಾವಾಗಿ ಬರೋದಿಲ್ಲ' ಎಂಬ ಅಪ್ಪನ ಖ್ಯಾತಿ ಇತ್ತು.

ತನ್ನ ಒಂಭತ್ತನೆಯ ಗರ್ಭವನ್ನು ಆಚೆ ಹಡೆದು ಈಚೆ ಸತ್ತ ಅಮ್ಮನ ಹೆಣ–ದಿನ ತುಂಬುವ ಮೊದಲೇ ಭೂಮಿಗೆ ಬಿದ್ದು ಸತ್ತ ಹೆಣ್ಣು ಕೂಸು–ಜಗುಲಿಗೆ ಕಾಲಿಡಲಿಕ್ಕಿಲ್ಲ ಹಸಿ ರಕ್ತದ ವಾಸನೆ. ಭೊಂಯ್ ಎಂದು ಹಾರಾಡುವ ನೊಣಗಳ ರಾಶಿ. ಅಂಥಾದ್ರಲ್ಲೂ ಅಮ್ಮ ಸತ್ತು ಇಪ್ಪತ್ತೇ ದಿನಕ್ಕೆ ಇನ್ನೊಂದು ಮದುವೆಯಾದ ಅಪ್ಪ... ಮೊಮ್ಮಗಳ ವಯಸ್ಸಿನ ಹೆಣ್ಣು ಅತ್ತ ಹೆಂಡತಿಯೂ ಆಗದೆ, ಇತ್ತ ತನಗಿಂತ ಹಿರಿಯ ರಿಗೆ ತಾಯಿಯಾಗಲಿಕ್ಕಂತೂ ಶಕ್ಯವಿರದೆ ತಾಟಕಿಯಾದದ್ದು–ಶೂರ್ಪನಖಿಯಾಗಿದ್ದು... ಯಾವುದೊ ಒಂದು ಹುಣ್ಣಿಮೆ ಎದುರಿನ ರಾತ್ರಿ ಯಲ್ಲಿ ಮಾಳಿಗೆಯಲ್ಲಿ ಮಲಗಿದ ತನ್ನ ಹೊದಿಕೆ ಯನ್ನು ಯಾರೋ ಎಳೆದಂತಾಗಿ ಅಯ್ಯಯ್ಯೋ ಎಂದು ಕೂಗಿ ಸ್ವಿಚ್ ಒತ್ತಿದಾಗ ಅವಳು ದುಡು ದುಡು ಏಣಿ ಇಳಿಯುತ್ತಿರುವದು ಕಂಡು ತನ್ನ ಕರುಳು ಬಾಯಿಗೆ ಬಂದದ್ದು... ಇತ್ಯಾದಿ ಇತ್ಯಾದಿ ಗಳೆಲ್ಲ ತನ್ನ ಯಾವುದೊ ಆಳದಲ್ಲಿ ಗಡ್ಡೆಕಟ್ಟಿ ಕೂತು ಹೆಣ್ಣುಗಳಿಂದ ದೂರ ಓಡಿಸುತ್ತಿರ ಬಹುದೆ? ಅಥವಾ... ಅಥವಾ... ತನ್ನ ಒಂದಂಶವನ್ನು ಇನ್ನೊಂದರಲ್ಲಿ ಕರಗಿಸಿಕೊಂಡು ನಷ್ಟವಾಗಬೇಕಾಗುತ್ತದೆಂಬ ಭೀತಿಯೆ?...

ಮೇಲೇರಿದ ಹೊತ್ತು ತನ್ನಷ್ಟಕ್ಕೆ ಕೆಳಗಿಳಿಯು ತ್ತಿತ್ತು. ಬಯಲ ಮೌನದಲ್ಲಿ ಆಲಯ ಕಳೆದು ಹೋಗಿತ್ತು. ಥಟ್ಟನೆ ಆತ ಮೇಲೆದ್ದು ಒಳಗೆ ಹೋಗಿ ತಾಟು ತೊಳೆದಿಟ್ಟು ಕರೆದ.

"ಅದೆಲ್ಲ ಸಾಯ್ಲಿ, ಈಗಂತೂ ಊಟ ಮಾಡೋಣ ಬಾ..."

ಅವಳು ಮೊದಲಿನ ಅದೇ ವಿಧೇಯತೆಯಿಂದ ಹಿಂಬಾಲಿಸಿ ಅವನಿಂದ ಸೇವೆ ಮಾಡಿಸಿಕೊಳ್ಳು ತ್ತಿರುವ ಮುಜುಗರದಿಂದಲೇ ಊಟ ಮಾಡ ತೊಡಗಿದಳು.

"ಅಂದ ಹಾಗೆ ಈಗ ನೀ ಎಲ್ಲಿರೋದು? ಏನ್ಮಾಡ್ತಾ ಇದ್ದೀಯಾ?... ಮದುವೆ ಗಿದುವೆ..."?

ಅವಳು ಘಳ್ಳನೆ ನಕ್ಕ ಅಬ್ಬರಕ್ಕೆ ಬಾಯೊಳಗಿನ ತುತ್ತು ಹಾರಿ ಅವನ ತಾಟಿಗೂ ಅನ್ನದಗುಳು ಸಿಡಿದದ್ದನ್ನು ಅವಳು ಗಮನಿಸಲಿಲ್ಲವಾದರೂ ಅವನಿಗೆ ನಿಚ್ಚಳವಾಗಿ ಕೊಂಚವೇ ಹೇಸಿಕೆಯೆನಿ ಸಿತು. ಆದರದನ್ನು ತೋರಿಸಿಕೊಳ್ಳದೆ ತಲೆ ಯೆತ್ತಿದಾಗಲೂ ಅವಳ ನಗೆ ಮಾತ್ರ ಅರ್ಥ ವಾಗಲಿಲ್ಲ.

"ಆಗಿತ್ತು ಸರ್, ಮದುವ್ಯಾಗಿತ್ತು ಮಕ್ಳಾಗ್ಲಿಲ್ಲ. ಆಗ್ಲಿಕ್ಕೆ ನನ್ನ ಗಂಡ ಕೊಡ್ಲಿಲ್ಲ. ಅಂದ್ರೆ ಬೇರಿಲ್ದ ಮರಕ್ಕೆ ಎಷ್ಟು ಊರುಗೂಟ ಕೊಟ್ಟು ನಿಲ್ಸಿದ್ರೂ ಅದೆಂದಾದ್ರೂ ನಿಲ್ಲುತ್ತಾ ಹೇಳಿ? ಕುಲ ಗೋತ್ರ ಜಾತ್ಕ ಸಾಯ್ಲಿ, ಹೇಳಿಕೊಳ್ಳಲಿಕ್ಕೊಂದು ತಾಯಿ ಕೂಡ ಇಲ್ದಿದ್ದವಳಿಗೆ ಅದೆಲ್ಲಿ ಬದುಕು ಸಿಗುತ್ತೆ ಹೇಳಿ... ಮೊದ್ಲೇನೋ ಶರೀರದ ಹುಮ್ಮಸ್ಸು– ಮದುವ್ಯಾದ ಆರು ಅಂದ್ರೆ ಆರೇ ತಿಂಗಳು ನಾವು ಒಟ್ಟಿಗಿದ್ದದ್ದು–ಅಷ್ಟಕ್ಕೇ ಏನಾಯ್ತೊ ಏನೊ ನಿನ್ನಂಥಾ ನೀಚ ಜಾತಿ ಹೆಣ್ಣು ಮದುವ್ಯಾದ ತಾನೇ ಮೂರ್ಖ ಅಂದ. ಹೋಗಿ ಎಲ್ಲಾದ್ರೂ ತಿರುಪೆ ಬೇಡು ಅಥವಾ ಬೊಂಬ್ಬೈ ಪೇಟೆಯಲ್ಲಿ ಧಂಧೆ ಮಾಡು ಅಂದ. ನೀ ನನ್ನ ಹೆಂಡ್ತಿಯಲ್ಲ ನಡಿ ಹೊರಗೆ ಎಂದು ಕೈ ಹಿಡಿದು ಎಳೆದು ಹೊರಗೆ ತಂದುಬಿಟ್ಟ. ಎಷ್ಟಂದ್ರೂ ನಮ್ದು ದೇವರೆದುರಿಗೆ ತಾಳಿ ಕಟ್ಟಿದ ಮದುವೆ. ಸಾಕ್ಷಿ ಹೇಳ್ಲಿಕ್ಕೆ ಅವನೆಲ್ಲಿ ಎದ್ದು ಬರ್‍ತಾನೆ ಹೇಳಿ. ಇಡೀ ಐದು ವರ್ಷ ಅವನ ಹೊಡೆತ ಒದೆತ ತಾಳಿ ಕೊಂಡೆ. ಕೊನೆಗೆ ತಡೀಲಿಕ್ಕಾಗದೆ ಹೊರಬಿದ್ದೆ, ಈಗೆರಡು ತಿಂಗಳ ಹಿಂದೆ, ಹೇಳಿ ಸರ್... ಕೈ ಕಾಲು ಕಲ್ಲು ಗುಂಡಿನ್ಹಾಗಿದ್ದು ತಿರುಪೆ ಬೇಡ್ಲಾ?... ಅಥವಾ ಅವ ಹೇಳಿದ ಅಂತ ಧಂಧೆ ಮಾಡ್ಲಾ?... ಅಥವಾ ಉಪವಾಸ ಬಿದ್ದು ಸಾಯ್ಲಾ?... ಖರೆ ಹೇಳಿ ಸರ್.... ನನ್ನ ತಾಯಿ ಯಾರಾಗಿದ್ಲು?... ಏನ್ ಮಾಡ್ತಿದ್ಲು?... ಅವ್ಳೀಗಲೂ ಬದುಕಿರ ಬಹುದಾ? ಬದುಕಿದ್ರೆ... ಎಲ್ಲಾದ್ರೂ ಅವ್ಳು

ನನಗೆ ಸಿಕ್ಕರೆ ಕೇಳೇ ಬಿಡ್ತೀನಿ. ಸಾಕೊ ತಾಖತ್ತಿಲ್ಲ ದಿದ್ದಾಗ ಯಾಕ್ ನನ್ನ ಹಡೆದೆ?... ಯಾಕೀ ದರಿದ್ರ ಭೂಮಿಗೆ ನನ್ನ ತಂದುಬಿಟ್ಟೆ ಅಂತ ಅವ್ರ ಜನ್ಮ ಜಾಲಾಡಿ ಬಿಡ್ತೀನಿ... ಹುಂ ಹೇಳಿ ಸರ್..."

ಅವಳ ಮಾತಿನ ರಪರಪ ಹೊಡೆತಕ್ಕೆ ಆಕಾಶ ಮೆಟ್ಟಿಬಿದ್ದ. ಒಂದು ಲೋಟ ನೀರು ಕುಡಿದ. ತುದಿಗಣ್ಣಿಂದ ಅವಳತ್ತ ನೋಡಿ ತಲೆ ತಗ್ಗಿಸಿದ. ಅವಳೀಗ ಎದ್ದು ತನ್ನ ಭುಜ ಹಿಡಿದು ಕಣ್ಣಲ್ಲಿ ಕಣ್ಣಿಟ್ಟು ಕೇಳುತ್ತಾಳೆ. ಸತ್ಯದ ಅವಶೇಷವನ್ನೂ ಅಗೆಯುತ್ತಾಳೆ. ಅಗೆದು ಏನೆಲ್ಲ ಪಳೆಯುಳಿಕೆ ಗಳನ್ನು ತೆಗೆದು ಬಿಡುತ್ತಾಳೆ. ತೆಗೆದರೆ... ತೆಗೆದು ಬಿಟ್ಟರೆ... ಅಯ್ಯೊ...

ಅವನ ಒಳಗೊಂಡು ಅರಬ್ಬಿ ಸಮುದ್ರವೇ ಭೋರ್ಗರೆಯಿತು. ಸತತವಾಗಿ ನಾಲ್ಕನೇ ಹೆಣ್ಣು ಕೂಸಾಗಿ ಹುಟ್ಟಿದ ನಿನ್ನನ್ನು ಗಂಡನ ಕರಕರೆ ತಾಳಲಾರದೆ ಹನ್ನೆರಡನೇ ದಿನ ಟವೆಲ್ಲಲ್ಲಿ ಸುತ್ತಿ ತಂದು ನಿನ್ನ ತಾಯಿ ನನ್ನ ಕೈಯಲ್ಲೇ ಕೊಟ್ಟು, ಹಸಿ ಬಾಣಂತಿ ತಾಸೆಲ್ಲ ಅತ್ತು ಹೋದಳೆಂದು, ಆಗಲೂ ನಿನ್ನಪ್ಪ ಅವಳಿಗೆ ಜಬರಿಸುತ್ತಲೇ ಇದ್ದನೆಂದು... ಈಗಲೂ ನಿನ್ನ ತಂದೆ ತಾಯಿ–ಅಕ್ಕಂದಿರು ತಮ್ಮ ಎಲ್ಲರೂ ಸಮೀಪದ ಒಂದೂರಿ ನಲ್ಲಿ ಸುಖವಾಗಿ ಸಮೃದ್ಧಿಯಾಗಿ ಇದ್ದಾರೆಂದು... ತಮ್ಮ ಜಾತಿ, ಕುಲ, ಗೋತ್ರಗಳೊಂದಿಗೆ, ಆಸ್ತಿ ಮನೆಗಳೊಂದಿಗೆ, ಮನೆತನದ ಮರ್ಯಾದೆ ಯೊಂದಿಗೆ, ಹೋಮ, ನೇಮ, ಸಂತರ್ಪಣೆ ಯೊಂದಿಗೆ ಬದುಕಿಯೇ ಇದ್ದಾರೆಂದು ಹೇಳಿ ಬಿಡಲೆ?... ನಿನ್ನನ್ನು ನರಕಕ್ಕೆ ತಳ್ಳಿದ ತಾಯಿ ಇನ್ನೂ ಜೀವಂತ ಇದ್ದಾಳೆಂದು ಸತ್ಯದ ಮೊಟ್ಟೆ ಒಡೆದು ಬಿಡಲೆ?... ಆ ಲೋಳೆ ನೀರಲ್ಲಿ ಸಿಕ್ಕಿ ಅವರೆಲ್ಲ ಮುಳುಗುತ್ತಿರುವದನ್ನು ನೋಡಿ ಆನಂದಿಸಲೆ?... ಇವಳಪ್ಪ, ತನ್ನ ಕನಸಿನ ಸಾಮ್ರಾಜ್ಯವನ್ನು ಪುಡಿ ಮಾಡಿದ ಧೀರ–ಅವನ ಮರ್ಯಾದೆ ಮೂರು ಕಾಸಿಗೆ ಮಾರಿಬಿಡಲೆ? ಇಂಚಿಂಚಾಗಿ ತನ್ನ ಕೊಲ್ಲುತ್ತಿರುವ ಬೆಂಕಿ ಇದ ರಿಂದ ತಣಿದೀತಲ್ಲವೆ?... ಅಲ್ಲವೆ?... ಅಯ್ಯೋ ತಣಿಯಬಹುದೆ?... ಅಯ್ಯಯ್ಯೊ ಬೇಡ ಬೇಡ. ಅದರಿಂದ ಈ ಇವಳಿಗಂತೂ ಮತ್ತಷ್ಟು ಅವ ಮಾನ ಹಿಂಸೆಯೇ ಕಟ್ಟಿಟ್ಟ ಬುತ್ತಿ. ಆ ತಾಯಿ, ಏಳು ಗೆರೆಗಳೊಳಗೆ ಬಿಗಿದುಕೊಂಡ ಅಸಹಾಯಕ ಜೀವ... ಈ ಇಳಿಹಾದಿಯಲ್ಲಿ ಅವಳನ್ನು ಅಲ್ಲೋಲಕಲ್ಲೋಲಗೊಳಿಸುವದು ಬೇಡ. ಬೇಡ... ನನ್ನಿಂದ ಯಾರೂ ನೋಯಬಾರದು, ನಿಟ್ಟುಸಿರಿಡಬಾರದು.

ಭೋರ್ಗರೆತ ಅಷ್ಪಷ್ಟಾಗಿ ಇಳಿಯುತ್ತಿದ್ದಂತೆ ಆತ ಎಲ್ಲೋ ನೋಡುತ್ತ ಯಾರಿಗೊ ಎಂಬಂತೆ ಹೇಳಿದ.

"ಊರಮ್ಮನ ಜಾತ್ರೆ ಮರುದಿನ ಮುಂಜಾನೆ ಹದಿನೈದು ದಿನದ ಮಗುವಾದ ನಿನ್ನ ಯಾರೊ ಆಶ್ರಮದ ಬಾಗಿಲಲ್ಲಿ ಮಲಗಿಸಿ ಹೋಗಿದ್ದರು. ಆಗಷ್ಟೇ ಬಾಣಂತನ ಮುಗಿಸಿದ್ದ ಕೆಲಸದ ನಿಂಗಮ್ಮ ತನ್ನ ಮಗನ ಜೊತೆ ನಿನಗೂ ಹಾಲು ಣಿಸಿದಳು. ನಂತ್ರ ಎಲ್ಲಾ ಮಕ್ಕಳಂತೆ ನೀನೂ ಬೆಳೆದೆ ನೋಡು. ನನಗೆ ಗೊತ್ತಿರೋದಿಷ್ಟೇ ನೈ. ಆದ್ರೆ ನನಗೆ ಮಕ್ಕಳು ಎಲ್ಲಿಂದ ಬಂದ್ರು–ಎಲ್ಲಿ ಹೋದ್ರು ಅನ್ನೋದ್ರಲ್ಲೆಲ್ಲಾ ಆಸಕ್ತಿ ಇಲ್ಲ ನೋಡು. ನಾವೆಲ್ಲಾ ಬರೋದು ಒಂದೇ ಬಾಗಿ ಲಿಂದ ಅನ್ನೋದು ಗೊತ್ತು. ಆದ್ರೆ ಯಾರದೋ ಚಾಪಲ್ಯದಿಂದಾಗಿ ಈ ಭೂಮಿಗೆ ಬಿದ್ದು ಅತ್ಯಂತ ದೈನ್ಯಾವಸ್ಥೆಯಲ್ಲಿ ಹುಳು ಹುಪ್ಪಡಿಗಳಂತೆ ಮಿಜಿ ಗುಡ್ತಾವಲ್ಲ. ಅವುಗಳನ್ನೆತ್ತಿ ಅನ್ನ ತಿನ್ನಿಸಿ ಆಶ್ರಯ ಕೊಟ್ಟು ಕೈಹಿಡಿದು ಹೆಜ್ಜೆ ಹಾಕಿಸೊ ಮಹಾ ಕಾಯಕ ಇದೆಯಲ್ಲ ಅದು ನನಗೆ ಮುಖ್ಯ. ಅದು ನನಗೆ ನಿಜವಾದ ಸಂತೃಪ್ತಿ ಸಂತೋಷ ಕೊಡೋ ಸಂಗತಿ. ಅದು ಬಿಟ್ಟು ಮತ್ತೇನೆಲ್ಲಾ ವಿಚಾರಿಸ್ಲಿಕ್ಕೇ ಹೊಗೋದಿಲ್ಲ. ಆದ್ರೆ ಅವೆಲ್ಲ ಈಗ್ಯಾಕೆ?.... ಎಲ್ಲಾ ಚರಿತ್ರೆಯಾಗಿ ಹೋದ ವಿಷಯ..." ಯಾಕೊ ಆತ ಗಪ್ಪನೆ ಬಾಯಿಮುಚ್ಚಿಬಿಟ್ಟ.

ಹತ್ತು ನಿಮಿಷದ ನಂತರ ಏನೋ ನೆನಪಾದವ ಳಂತೆ ಅವಳು ಕೇಳಿದಳು.

"ಸರ್, ಒಂದುಪಕಾರ ಮಾಡ್ಬೇಕಲ್ಲ ನೀವು. ಇವ್ಳಿಗೆ ಯಾರೂ ಇಲ್ಲ. ನಮ್ಮ ಆಶ್ರಮದಲ್ಲೇ ಬೆಳೆದವ್ಳು ಅಂತ ಒಂದು ಸರ್ಟಿಫಿಕೇಟ್ ಕೊಡ ಬೇಕಲ್ಲ. ಯಾವ್ದಾದ್ರೂ ಆಫೀಸಿನಲ್ಲಿ ಚಪರಾಸಿ ಕೆಲ್ಸ ಆದ್ರೂ ಸಿಗಬಹುದು ಅಂತ ಆಶೆ ನೋಡಿ. ದಯವಿಟ್ಟು ಇದೊಂದು ಉಪಕಾರ ಮಾಡಿ ಸರ್... ಜನ್ಮ ಇರ್ರಾ ನಿಮ್ಮ ಉಪಕಾರ ಮರೆ ಯೋದಿಲ್ಲ" ಎನ್ನುತ್ತಿದ್ದವಳು ತಟಕ್ಕನೆ ನಾಲಿಗೆ ಕಚ್ಚಿಕೊಂಡಳು. ಈತ ತನಗೆ ಮಾಡಿದ ಉಪಕಾರ ಒಂದೇ ನೈಯೊ?.... ಅನ್ನವಿಕ್ಕಿ, ಅಕ್ಷರ ಕಲಿಸಿ,

ಬದುಕು ಕೊಟ್ಟವನು, ಅವನೊಂದಿಗೆ ಈ ಮಾತೆ?... ಉಹುಂ, ತಪ್ಪು. ಈತ ತನ್ನ ಬದುಕಿಸಿದ್ದೇ ದೊಡ್ಡ ತಪ್ಪು. ತಾಯಿಗೆ ಬೇಡಾದ ಮಗು ಈ ಭೂಮಿ ಮೇಲಿರಬಾರದು ಆಗಿಂದಾಗ ಸತ್ತು ಹೋಗಬೇಕು.... ಹುಂ, ಸತ್ತುಹೋಗಬೇಕು ಎಂದುಕೊಳ್ಳುತ್ತಿದ್ದಂತೆ ಆತನ ಕುರಿತು ವಿಪರೀತ ಹೇವರಿಕೆಯುಂಟಾಗಿ ದಡಕ್ಕನೆ ಎದ್ದು ಕಿಟಕಿಗೆ ಹೋಗಿ ನಿಂತಳು.

ಆತ ಯಾಕೋ ಮರುಮಾತಿಲ್ಲದೆ ಎದ್ದು ಮುಸುರೆ ಎತ್ತಿ, ನೆಲ ಒರೆಸಿ, ಪಾತ್ರೆ ತಿಕ್ಕಿ, ಬೋರಲು ಹಾಕಿ ಚಾಪೆಯ ಮೇಲೆ ಅಡ್ಡಾಗುವವರೆಗೂ ಹಾಗೇ ನಿಂತವಳು ಕೈ ತೊಳೆದು ಹೊರಗೆ ಸೂರಂಚಿನಲ್ಲಿ ತಲೆಗೆ ಕೈಕೊಟ್ಟು ಮಲಗಿದಳು.

ಅದೆಷ್ಟೋ ಹೊತ್ತಿನ ಮೈಮರೆವು ಹರಿದ ನಂತರ ಆಕಾಶ ಕಣ್ಣುಬಿಟ್ಟು ನೋಡಿದ. ಆಚೀಚೆ ಹುಡುಕಿದ. ಅವಳು ಕಾಣಲಿಲ್ಲ, ಭಯವಾಯಿತು. ಹೊರಗೆ ಬಂದ. ಸುಗುಣ ಮಲ್ಲಿಗೆ ಹಿಂಡಿನ ಬುಡದಲ್ಲಿದ್ದ ಕಳೆ ಕೀಳುತ್ತಿದ್ದಳು. ಅವನನ್ನು ನೋಡಿ "ಇಂದು ನಾನಿಲ್ಲೇ ಉಳೀತೇನೆ" ಅಂದಳು.

"ಆಯ್ತು ಈಗೆರಡು ಕಪ್ ಟೀ ಮಾಡ್ತೀಯಾ?"

ತಲೆ ಅಲ್ಲಾಡಿಸಿ ಒಳಗೆದ್ದು ಚಾ ಮಾಡಿ ತಂದು ಆತನಿಗೂ ಕೊಟ್ಟು ತಾನೂ ಕುಡಿಯುತ್ತ "ಇಲ್ಲೇ ಒಬ್ಬರ ಮನೆಗೆ ಹೋಗಿ ಬರ್ಬೇಕಾಗಿದೆ. ಇನ್ನೊಂದು ತಾಸಿಗೆ ಬರ್ತೇನೆ" ಎಂದು ಅವಳು ಮೆಟ್ಟಲಿಳಿದಾಗ ಅವನಿಗೆ ಒಳಗೊಳಗೇ ಭೀತಿ. ಇವಳೀಗ ತನ್ನನ್ನು ಪೂರ್ತಿ ಕಂಡುಕೊಂಡುಬಿಟ್ಟಿದ್ದಾಳೆ. ತನ್ನ ಮನಸ್ಸಿನೊಳಗಿನ ಅಷ್ಟೂ ಸತ್ಯಗಳೂ ಎಲ್ಲಾ ಗಂಟುಗಳೂ ಇವಳೆದುರಿಗೆ ಬಯಲಾಗಿ ಬಿಟ್ಟಿವೆ. ಈಗಿವಳು ಸೀದಾ ತನ್ನ ಅಪ್ಪ ಅಮ್ಮಂದಿರೆದುರು ಹೋಗಿ ನಿಲ್ಲುತ್ತಾಳೆ. ಹಣಾಹಣಿ ಜಗಳ ಮಾಡಿ ಮುಖಕ್ಕೆ ತಿವಿಯುತ್ತಾಳೆ. ನೆಲ ಬಡಿದು ಶಾಪ ಹಾಕುತ್ತಾಳೆ... ಎಂಬೆಲ್ಲ ವಿಚಿತ್ರ ಅನಿಸಿಕೆಯಲ್ಲಿ ವಿಹ್ವಲನಾಗಿ ಮೈ ತುಂಬ ಬೆವರು ಧಾರೆಯಿಟ್ಟರೂ ತುಟಿ ಬಿಚ್ಚಿಕೊಳ್ಳಲಿಲ್ಲ.

ಸಂಜೆ, ಕತ್ತಲು ಕವಿಯುತ್ತಿರುವ ಮನೆಗೆ ಮಿಣಿ ಮಿಣಿ ಬೆಳಕಿನಂತೆ ಬಂದಳು. ಬಂದವಳು ಸದ್ಗೃಹಿಣಿಯಂತೆ ಮನೆ ತುಂಬ ಸ್ವಿಚ್ ಒತ್ತಿ ಬೆಳಕು ಮಾಡಿ, ಅಡಿಗೆ ಮನೆಗೆ ನುಗ್ಗಿ ಅನ್ನ ಬೇಯಿಸಿ, ಸಾರು ಕುದಿಸಿ ಊಟಕ್ಕೆ ಕರೆದಾಗ ಆತ ತಾನೇ ಮಾಡಿದ ಸಾರಾದರೂ ಬೇರೇನೊ ರುಚಿ ಕಂಡು ಎಷ್ಟೋ ವರ್ಷಗಳ ನಂತರ ಮೊದಲ ಬಾರಿಗೆ ತೇಗು ಬರುವಷ್ಟು ಉಂಡ.

ನೀನೆಲ್ಲೂ ಹೋಗುವದು ಬೇಡ, ಇಲ್ಲೆ ಇದ್ದು ಬಿಡು. ನಾನುಂಡ ತುತ್ತಿನಲ್ಲಿ ನಿನಗರ್ಧ ಎಂದು ಹೇಳಬೇಕಿದ್ದವನು, ಇಲ್ಲ, ಆಳ ಕಾಣದೆ ಧುಮುಕಬಾರದು. ಅನ್ಯಾಯವಾಗಿ ಉಸಿರುಗಟ್ಟಬಾರದು ಅಂದುಕೊಳ್ಳುವಾಗ ಅಂದಿನ ಆ ಸುಗುಣೆಯ ನೆನಪು.



ತನ್ನ ಹಾಸಿಗೆ ಹಾಸಿ ಬಟ್ಟೆ ಒಗೆದು ಇಸ್ತ್ರಿ ಮಾಡಿ, ಕೈ ಹಿಡಿದು ತೊಡಿಸಲಿಕ್ಕೊಂದು ತೊಡಿಸುತ್ತಿರಲಿಲ್ಲ ಪುಣ್ಯಾತ್ಗಿತ್ತಿ. ಕಾಲೊತ್ತುವದೇನು? ಬಡಿಸುವದೇನು? ಕುರ್ಚಿಯಿರಲಿ—ಮಂಚವಿರಲಿ—ನೆಲಕ್ಕಾಗಲಿ—ಮೈ ಹೊಸೆಯುತ್ತ ಹತ್ತಿರ ನಿಲ್ಲುವದೇನು?... ಕೊನೆಗೂ ಈ ಪ್ರಾಣಿ ಕಲ್ಲುಬಂಡೆ ಎಂಬುದು ಗೊತ್ತಾದಾಗ ಬಾಯಿಬಿಟ್ಟೇ ಹೇಳಿದ್ದಳು. "ಸರ್... ಸರ್... ಸರ್...ನಾ ನಿಮ್ಮ ಪ್ರೀತಿಸ್ತೇನೆ. ನಾ ನಿಮ್ಮ ಮದುವೆಯಾಗ್ತೇನೆ. ನೀವು ಕೈ ಬಿಟ್ರೆ ನಾ ಸತ್ತೇ ಹೋಗ್ತೇನೆ" ಎಂದೆಲ್ಲ ಕೆಂಪು ಮುಖ ಮಾಡಿ ಬಡಬಡಿಸಿ ಜಡೆ ತುದಿ ತಿರುಪುತ್ತ ನಿಂತುಕೊಂಡಾಗ ಆತ ಜ್ವಾಲಾಮುಖಿಯಾಗಿ ಸಿಡಿದು ಬಿಟ್ಟಿದ್ದ.

ಕೈ ತೊಳೆಯುತ್ತ ಆತ ಗೊಂದಲಗೊಂಡ. ತಾನು ಅಲ್ಲೆ ಎಡವಿಬಿಟ್ಟೆನೆ?... ಹೆಣ್ಣೊಂದರ ಸುಕುಮಾರ ಪ್ರೀತಿಯನ್ನು, ಮಧುರ, ಸರ್ವಾರ್ಪಣೆಯನ್ನು ಸಹಜ ಸೃಷ್ಟಿಶೀಲ ತುಡಿತಗಳನ್ನು ಸ್ವೀಕರಿಸಿ ಆನಂದಿಸಿ ಅದೇ ಆನಂದವನ್ನು ಮರಳಿ ಕೊಡುವ ಮಹಾ ಅವಕಾಶವನ್ನೂ ಎಡಗಾಲಿಂದ ಒದ್ದುಬಿಟ್ಟೆನೆ?... ಹೆಣ್ಣೊಬ್ಬಳು ನೀಡುವ ಸಂತೋಷದ ಮುಂದೆ ಮಾನವ ಜಗತ್ತಿನ ಇನ್ನಾವುದೂ ಏನೂ ಅಲ್ಲ... ಕಾಲೇಜಿನ ದಿನಗಳಲ್ಲಿ ಹೀಗೇ ವೃಥಾ ಕಾಲಕ್ಷೇಪ ಮಾಡುತ್ತಿದ್ದಾಗ ಫಿಲಾಸಫಿ ಪ್ರೊಫೆಸರ ಒಬ್ಬರು ಹೇಳಿದ್ದರು. ಆಕಾಶ ಅದನ್ನು ಖಂಡಿಸಿದ್ದ. ಈ ಭೂಮಿಯಲ್ಲಿ ಹೊಟ್ಟೆಯ ಹೊರತಾಗಿ—ತೊಗಲಿನ ಹೊರತಾಗಿ ಮತ್ತೂ ಬೇಕಾದಷ್ಟು ಸಾಫಲ್ಯಗಳಿವೆ. ಆನಂದಗಳಿವೆ. ಆದರ್ಶಗಳಿವೆ. ತಾನದನ್ನು ಸಾಧಿಸಿ ತೋರಿಸ್ತೇನೆ ಎಂದೆಲ್ಲ ಗಂಟಲ ನರ ಉಬ್ಬಿಸಿ ಕೂಗಿದ್ದ. ಅದೆಷ್ಟೊ ವರ್ಷಗಳವರೆಗೆ ಅದನ್ನೇ ಪರಮ ಸತ್ಯವೆಂದು ನಂಬಿದ್ದ. ನಂಬಿಕೆಯನ್ನು ನಂಬಿದಂತೆಯೇ ಆಚರಣೆಗೂ ತಂದಿದ್ದ. ಆದರೆ ಆ ಸಂಕಟ ಮಾತ್ರ ಬಾಯಿಬಿಟ್ಟು ಹೇಳಬಾರದು. ಕಿವಿ ತೆರೆದು ಕೇಳಲಾಗದು. ಯಜ್ಞಕುಂಡದಲ್ಲಿ ಬಿದ್ದ ಕಬ್ಬಿನ ತುಂಡಿನಂತೆ ಜೀವ ಹಾರದೆ—ಎಚ್ಚರ ತಪ್ಪದೆ—ಆ ಉರಿಯನ್ನು ನುಂಗಿಯೇ ನೀಗಿಕೊಳ್ಳಬೇಕಾದ ಸಂಕಟ....

ಜಗತ್ತಿನ ತುಂಬಾ ಬೇಕಾದಷ್ಟು ಹೆಣ್ಣುಗಳಿದ್ದಾರೆ, ಆದರೆ ಅವರಲ್ಲೊಬ್ಬಳೂ ನನ್ನವಳಲ್ಲ. ಊರಿನಲ್ಲಿ ನೂರಾರು ಮಕ್ಕಳಿವೆ. ಆದರೆ ಅವು ನನ್ನವಲ್ಲ. ಈ ನೆಲದ ತುಂಬಾ ಹೂವುಗಳಿವೆ. ಹಣ್ಣುಗಳಿವೆ. ಮೊಳಕೆಯಿದೆ. ಚಿಗುರಿದೆ. ಆದರೆ ತನಗೆ... ತನಗೆ ಮಾತ್ರ ಏನೇನೂ ಇಲ್ಲ. ತಾನು ಮೊಳೆಯುವದಿಲ್ಲ. ತಾನು ಚಿಗುರುವದಿಲ್ಲ. ತಾನು ಹಣ್ಣಲ್ಲ—ಹೂವಲ್ಲ. ಏನೂ ಅಲ್ಲ. ಎಲ್ಲಿಗೂ ಅಲ್ಲ. ಊರಿನ ಶಾಲೆ, ಕಾಲೇಜು, ಆಸ್ಪತ್ರೆ, ಅಂಗಡಿ, ಮನೆಗಳ ತುಂಬಾ ಜನರಿದ್ದಾರೆ. ಆದರೆ ಯಾರೂ ತನ್ನವರಲ್ಲ. ಯಾರಿಗೂ ಇದೊಂದು ಪ್ರಾಣಿ ಉಂಡಿತೋ ಬಿಟ್ಟಿತೊ, ಬದುಕಿತೊ—ಸತ್ತಿತೋ ನೋಡುವ ಪುರುಸೊತ್ತಿಲ್ಲ, ಮನಸ್ಸೂ ಇಲ್ಲ. ಹಾಲಿನವನ ಬಿಟ್ಟರೆ—ತಿಂಗಳಿಗೊಮ್ಮೆ ಮಾಸಾಶನ ತಂದುಕೊಡುವ ಅಂಚೆಯವನ ಬಿಟ್ಟರೆ ಮಾನವ ಸ್ಪರ್ಶವೇ ಇಲ್ಲ. ಸಂಜೆ—ಮುಂಜಾವು—ನಡು ಹಗಲು—ಮಳೆಗಾಲ—ಬೇಸಿಗೆ—ಚಳಿಗಾಲ ಎಷ್ಟಾದವೊ—ಹೀಗೆ ಇನ್ನೆಷ್ಟು ಕಾಣಬೇಕೊ—ಸತ್ತ ಬದುಕನ್ನು ಇನ್ನೆಷ್ಟು ಬದುಕಬೇಕೋ.... ದಿನವಲ್ಲದ ದಿನಗಳನ್ನು ಹೇಗೆ ದೂಡಬೇಕೊ.... ಆತ ಗಡಗಡ ನಡುಗಿ ಹೋದ.

ಮತ್ತೊಂದರ್ಧ ತಾಸಿಗೆ ಚೇತರಿಸಿಕೊಂಡು ಅವಳಿಗೆ ರೂಮಿನಲ್ಲಿ ಹಾಸಿಕೊಟ್ಟು ತಾನು ಪಡಸಾಲೆಯಲ್ಲಿ ಚಾಪೆ ಬಿಚ್ಚಿದ್ದ. ರಾತ್ರಿ ಏರುತ್ತಿತ್ತು. ಕತ್ತಲು ದಟ್ಟವಾಗುತ್ತ ಹೊರಟಿತ್ತು. ಕಗ್ಗತ್ತಲೆಯಲ್ಲಿ ಬೆಳಕಿನ ಇರುವಿಕೆ ಮಾತ್ರವನ್ನಷ್ಟು ಸ್ಪಷ್ಟಗೊಳಿಸುತ್ತಿದ್ದ ತಾರೆಗಳು ಅದೇನೊ ಕ್ಷೀಣ ಆಶಾವಾದವನ್ನು ಸ್ಫುರಿಸುತ್ತಿದ್ದವು. ಆತ ಮೇಲೆದ್ದು ತನ್ನ ಎದೆ—ಕೈಕಾಲು ಹೊಟ್ಟೆಯನ್ನೆಲ್ಲಾ ಒಮ್ಮೆ ಸವರಿ ನಂತರ ಉಜ್ಜಿ ನೋಡಿಕೊಂಡ. ಇಲ್ಲ, ಅಷ್ಟೇನೂ ಮುದಿಯಾಗಿಲ್ಲ. ಅರುವತ್ತರ ದಶಕದ ಯಾವುದೇ ರೋಗರುಜಿನ ಹಾಗಿರಲಿ, ಒಂದು ಮೇಲುಬ್ಬಸ ಕೂಡ ಇಲ್ಲ. ಕ್ರಮಬದ್ಧ ಆಹಾರ—ದುಡಿಮೆ—ವಿಹಾರ ತನ್ನನ್ನಿನ್ನೂ ಜೀವಂತವಾಗಿಟ್ಟಿವೆ. ತನ್ನೊಳಗಿನ್ನೂ ಜೀವಂತಿಕೆ ಪುಟಿಯುತ್ತಿದೆ. ಜೀವಸೃಷ್ಟಿಯ ಹಂಬಲ, ಮುಂದುವರಿಕೆಯ ಹಂಬಲ ತನ್ನೊಳಗೆಲ್ಲೊ ಕಟ್ಟಿಕೊಂಡು, ಒರತೆಯಾಗಿ ಹೊರಬೀಳಲು ಹಾತೊರೆಯುತ್ತಿವೆ.... ಇನ್ನು ಹತ್ತಿಕ್ಕಬಾರದು... ಇನ್ನೊಮ್ಮೆ ಮೂರ್ಖನಾಗಬಾರದು... ಅಂಗೈಗೆ

ಬಿದ್ದ ಹಣ್ಣನ್ನು ಮಣ್ಣಲ್ಲಿ ಚೆಲ್ಲಿ ತುಳಿಯಬಾರದು... ತುಳಿಯಲಾರೆ. ಆತ ನಿರ್ಧರಿಸಿದ. ಕುತ್ತಿಗೆಯವರೆಗೆ ಚಾದರ ಎಳೆದು ಮುಚ್ಚಿ ಮತ್ತೊಂದು ಕ್ಷಣಕ್ಕೆ ಗೊರಕೆ ಹೊಡೆಯ ತೊಡಗಿದ.

ಬೆಳಗಾಯಿತು. ಗುಬ್ಬಚ್ಚಿಗಳು ಹಾಸಿಗೆಯ ಪಕ್ಕದಲ್ಲೇ ಚೀಂ ಚೀಂಗುಟ್ಟಿದವು. ತೆಂಗಿನಮರ ತಲೆ ಅಲ್ಲಾಡಿಸಿ ಉದಯರಾಗ ಹೇಳಿತು. ಮಲ್ಲಿಗೆ ಹಿಂಡು ಕುಡಿ ಹೂವರಳಿಸಿ ಹೊಸ ಬೆಳಗಿಗೆ ಆರತಿ ಎತ್ತಿತು. ಆತ ಅದೇನೋ ಮಹಾ ಹುರುಪಿನಿಂದ ಮೇಲೆದ್ದ. ಸುಗುಣ ಅದಾಗಲೇ ಚಾ ಮಾಡುತ್ತಿದ್ದಳು. ಹೇಗೆ ಪ್ರಾರಂಭಿಸಬೇಕೆಂಬುದು ತಿಳಿಯದೆ ಚಡಪಡಿಸುತ್ತಿದ್ದ ಅವಳನ್ನೇ ಕದ್ದು ಕದ್ದು ನೋಡುತ್ತ ಆತ ಚಾ ತಿಂಡಿ ಮುಗಿಸಿದ. "ನಾನಿನ್ನು ಹೊರಡ್ತೇನೆ. ಆ ಸರ್ಟಿಫಿಕೇಟ ಕೊಡ್ತೀರಾ ಸರ್...?" ಎಂದು ಆಕೆ ಕೈ ಚೀಲ ಹಿಡಿದು ನಿಂತಾಗ ಕುಸಿದು ಹೋದ.

"ಸರ್ಟಿಫಿಕೇಟ್ ಬೇಕಾದ್ರೆ ಕೊಡೋಣಂತೆ ಆದ್ರೆ... ಆದ್ರೆ ಕೇಳಿಲ್ಲಿ. ಒಂದು ವಿಚಾರ ಏನೂಂತಂದ್ರೆ... ಹತ್ತು ವರ್ಷದ ಹಿಂದೆ ನೀ ಕೇಳಿದಾಗ ನಾನೇನೊ ಭ್ರಮೆ ಇಟ್ಕೊಂಡಿದ್ದೆ. ಈಗದೆಲ್ಲಾ ಹರಿದು ಬಟಾ ಬಯಲಾಗಿ ಬೋಳು ಬೆಟ್ಟವಾಗಿ ನಿಂತಿದ್ದೇನೆ. ಈಗ... ಈಗ ನೀ ಹೂಂ ಅಂದ್ರೆ ಸಾಕು. ಸಂಜೆ ರಿಜಿಸ್ಟರ್ ಆಫೀಸಿಗೆ ಹೋಗೋಣ..." ಎಂದು ನಿಲ್ಲಿಸಿ ಅವಳ ಮುಖವನ್ನೇ ನೋಡಿದಾಗ ಮೊದಲು ಇವನೇನನ್ನುತ್ತಿದ್ದಾನೆಂಬುದು ಅರ್ಥವೇ ಆಗದೆ, ಆಗುತ್ತಿದ್ದಂತೆ ವಿಚಿತ್ರ ಉರಿ ಮೇಲೆದ್ದು—

"ಏನು... ಏನಂತೀರಿ ಸರ್? ಈಗ ನೀವು ನನ್ನ ಮದುವೆಯಾಗ್ತೀರಾ? ಖರೆ ಹೌದೆ? ಈ ಎಮ್ಮೆ ಜಾತಿಯವಳು ಈಗ ನಿಮಗೆ ಬೇಕಾದಳಾ? ಇಲ್ಲ ಸರ್... ಚಟ್ಟ ಏರ್ಲಿಕ್ಕೊಂಟ ನಿಮಗೆ ಇನ್ನೂ ಕಣ್ಣು ಬಿಡ್ತಾ ಇರೊ ನನಗೆ ಯಾವ ತಾಳ ತಂತಿ ಇಲ್ಲ. ನೀವು ಎಲ್ಲಾ ತೊರೆದ ಸಂತರು— ನಾನು ಸಂಸಾರದಲ್ಲಿ ಪೂರ್ತಿ ಮುಳುಗ್ತಾ ಏಳ್ತಾ ಜೀವಹಿಡಕೊಂಡವಳು. ಆವಾಗೇನೋ ಆರೀದ ಬಾಲೆಯಾಗಿದ್ದೆ, ಮೂರ್ಖಳಾಗಿದ್ದೆ. ಈಗ ಅದಾಗೋದಿಲ್ಲ ಸರ್. ಇವೆಲ್ಲಕ್ಕಿಂತ ಮುಖ್ಯವಾಗಿ ತಾನಿವರನ್ನೆಲ್ಲ ಉದ್ಧಾರ ಮಾಡ್ಲಿಕ್ಕೆಂದೇ ಹುಟ್ಟಿದ್ದೇನೆ. ಇವ್ರೆಲ್ಲಾ ಬಚ್ಚಲ ಕಲ್ಲಡಿಗಿನ



## ಪರಿತಾಪ

ನಾನು ನಡೆದ ದಾರಿ  
ಯಲ್ಲಿ ಸುಮಗಳರಳಲಿಲ್ಲ;  
ನಾನು ಕುಳಿತ ಪೀಠ  
ದಲ್ಲಿ ಕಸ್ತೂರಿ ಪರಿಮಳಿಸಲಿಲ್ಲ  
ಮಲಗಿದ ತಾಣ  
ದಲ್ಲಿ ಕನಸುಗಳು  
[illegible] ನು ಕಟ್ಟಲಿಲ್ಲ  
[illegible] ಮೂಡಿದಾಗ  
ಹೊತ್ತಿನ್ನು ಉಳಿದಿರಲಿಲ್ಲ!

● ವನರಾಗ ಶರ್ಮ

ಹುಳುಗಳು ಅನ್ನೋ ನಿಮ್ಮ ಧೋರಣೆ ಈಗ ನನಗೆ ಸ್ಪಷ್ಟವಾಗಿ ಕಾಣ್ತಾ ಇದೆ, ಆವಾಗ ಗೊತ್ತಾಗ್ತಿರಲಿಲ್ಲ. ನಿಮ್ಮ ನೆರಳು ನನ್ನ ಕಣ್ಣು ಮುಚ್ಚಿ ಬಿಟ್ಟಿತ್ತು. ಆದ್ರೆ ಹುಳವೋ ನೊಣವೊ ಏನೇ ಆಗಿದ್ರೂ ಅದರದರ ಬದುಕು ಸಾವು ಅದಕೇ ಅಲ್ಲವೆ? ಅದನ್ನು ತಿದ್ದಿ ತೀಡಿ ಸಮ ಮಾಡ್ತೇನೆ ಅನ್ಲಿಕ್ಕೆ ನೀವ್ಯಾರು?... ಅತ್ಲಾಗೂ ಇಲ್ಲ... ಇತ್ಲಾಗೂ ಇಲ್ಲ... ಅಂದ್ಹಾಂಗೆ ತ್ರಿಶಂಕು ಗತಿ ಮಾಡ್ಲಿಕ್ಕೆ ನಿಮಗೆ ಅಧಿಕಾರ ಯಾರು ಕೊಟ್ಟರು? ಇಷ್ಟು ಮಾತ್ರ ತಿಳ್ಕೊಳ್ಳಿ ಸರ್, ನಿಮ್ಮ ಎಲ್ಲಾನೂ ಗೆದ್ದ ಅಹಂಕಾರದ ಕ್ರೌರ್ಯಕ್ಕಿಂತ ನಮ್ಮ ಸರ್ವಸ್ವವನ್ನೂ ಸೋತ ಜೀವನ ಪ್ರೀತಿ ಸಾವಿರ ಪಾಲು ಮೇಲು. ಲಕ್ಷಾಧೀಶನಿಗಿಂತ ಭಿಕ್ಷಾಧೀಶನೇ ಹೆಚ್ಚು ಸಂತೋಷವಾಗಿರ್ತಾನೆ. ಆಯ್ತು, ನಾನಿನ್ನು

ಬರ್ತೇನೆ. ನೀವೂ ಸಾಕು. ನಿಮ್ಮ ಸರ್ಟಿಫಿಕೇಟೂ ಸಾಕು" ಎಂದು ಹೂಂಕರಿಸುತ್ತ ಅವಳು ದಣಪೆ ದಾಟಿಯೇ ಬಿಟ್ಟಳು.

ಆತ ಕುಸಿದುಬೀಳಲಿಲ್ಲ ನಿಂತೇ ಇದ್ದ. ಇಡೀ ಮನುಷ್ಯನಾಗಿಯೇ ನಿಂತಿದ್ದ. ಆದರೆ ಈ ಕಾಲು ಕಾಲಲ್ಲ. ಕೈ ಕೈಯಲ್ಲ. ಬೆನ್ನು ಹೊಟ್ಟೆ ತಲೆ ಕೊರಳು ಯಾವುದೂ ನಾನಲ್ಲ. ನಾನು ಅನ್ನುವವನು ಎಲ್ಲೊ ಕಳೆದುಹೋಗಿದ್ದಾನೆ ಎಂಬ ವಿಚಿತ್ರ ಅನುಭೂತಿಯಲ್ಲಿ ತೇಲುತ್ತ ಮುಳುಗುತ್ತ ಅದರಿಂದ ಪಾರಾಗುವ ಪ್ರಯತ್ನವನ್ನೂ ಮಾಡದೆ ಅದನ್ನೇ ಒಂದು ರೀತಿ ಆನಂದಿಸುತ್ತಿದ್ದ. ಆತನ ಹಿಂದೆ, ನೆಲದಿಂದ ನೇರವಾಗಿ ಆಕಾಶಕ್ಕೆ ಜಿಗಿದು ಅಲ್ಲಿ ತನ್ನ ಸಾಧ್ಯತೆಗಳನ್ನೆಲ್ಲಾ ಬಿಚ್ಚಿ ಹರಡಿ ನಿಂತ ತೆಂಗಿನ ಮರವಿತ್ತು, ತನ್ನ ಗರಿಗಳನ್ನೂ—ಹೆಡೆ ರೆಂಬೆಗಳನ್ನೂ ವಂಶವಾಹಿ ಕಾಯಿಗಳನ್ನೂ ಇಕಾ ತಗೊಳ್ಳಿ—ಬನ್ನಿ ಆರಿಸಿಕೊಳ್ಳಿ ಎಂದು ಚೆಲ್ಲಿಕೊಟ್ಟು, ಬೇಕಾದಷ್ಟು ಹೆಕ್ಕಿಕೊಳ್ಳಿ ಎಂದು ಕೆಳಗೊಗೆಯುತ್ತ—ತಾನು ಮಾತ್ರ ಮೇಲೆ ಮೇಲೆ ಇನ್ನೂ ಮೇಲೆ—ಮತ್ತೂ ಮೇಲೆ... ಓ ಅಲ್ಲಿ ಸೂರ್ಯನ ಮನೆ, ಅಗಾ ನಕ್ಷತ್ರದ ಅಂಗಳ.... ಇಲ್ಲಿ ಈ ಬದಿಗೆ ಚಂದ್ರಾಮದ ಆಟದ ಬಯಲು... ಮುಟ್ಟಬೇಕು—ಮೆಟ್ಟಬೇಕು, ಅಲ್ಲಿರುವ ಜೀವದ್ರವ್ಯವನ್ನೆಲ್ಲ ನೆಕ್ಕಬೇಕು. ಇಡೀ ವಿಶ್ವದ ಬೆಳಕನ್ನು ಶಕ್ತಿ ಸರ್ವಸ್ವವನ್ನು ತನ್ನೊಳಗೆ ಕರೆದುಕೊಳ್ಳಬೇಕು. ತಾನು ತುಂಬಬೇಕು. ತುಂಬಿ ತುಳುಕಬೇಕು ಎಂಬ ವಿಪರೀತ ಕಾತರ... ಕೈ ಚಾಚಿ—ಕೊರಳು ಚಾಚಿ—ಕಣ್ಣು ಹರಿದಷ್ಟಕ್ಕೂ ನೋಟ ಹರಿಸಿ...

ಆತ ಕಣ್ಣು ತಿಕ್ಕಿ ಮರವನ್ನೆ ಹೊಚ್ಚ ಹೊಸದೆಂಬಂತೆ ನೋಡಿದ—ಇಲ್ಲ, ನಕ್ಷತ್ರದಂಗಳವಿಲ್ಲ – ಸೂರ್ಯನರಮನೆಯಿಲ್ಲ – ಚಂದ್ರನ ಬಯಲೂ ಇಲ್ಲ. ಇದ್ದಿದ್ದು ಭೂಮಿಯಲ್ಲದ ಬಾನಲ್ಲದ ಮುಷ್ಠಿಗೆ ನಿಲುಕದ ಶೂನ್ಯ ಮಾತ್ರ. ಹತ್ತೂ ದಿಕ್ಕಿನಿಂದ ಹಿಸುಕಿ ಕೊಲ್ಲುವ ಖಾಲಿ ಅವಕಾಶ ಮಾತ್ರ. ಮೇಲೇರಿದಷ್ಟಕ್ಕೂ ಮಣ್ಣಿನಿಂದ ದೂರವಾಗುತ್ತ ಹೋಗುವ ಅಸಹನೀಯ ವಾಸ್ತವ ಮಾತ್ರ. ●

# ಕಂಡಕ್ಟರ್ ಕರಿಯಪ್ಪ
## ಜೂನಿಯರ್

• ಎಂ. ಎಸ್. ನರಸಿಂಹಮೂರ್ತಿ
ಫೋಟೋ: ವಿ. ಗೋಪಾಲ್

# 4. ಸ್ಟ್ಯಾಂಡಿಂಗ್ ಸೀಟು

ಅಪ್ಪನ ಮಾತುಗಳು ಕರಿಯಪ್ಪನ ಕಿವಿಯಲ್ಲಿ ಆಗಾಗ ಪ್ರತಿಧ್ವನಿಸುತ್ತಿರುತ್ತದೆ. ಸಂಸ್ಥೆಗಾಗಿ ದುಡಿದು, ಜೀವ ತೇಯ್ದು 'ಟೈರ್ ಪ್ರಶಸ್ತಿ' ಪಡೆದ ತನ್ನ ಅಪ್ಪನ ಬಗ್ಗೆ ಕರಿಯಪ್ಪನಿಗೆ ಸದಾ ಹೆಮ್ಮೆ. ಬಸ್ಸಿನ ಮೂತಿ ನೋಡಿದಾಗಲೆಲ್ಲ ಕರಿಯಪ್ಪನಿಗೆ ತನ್ನ ಅಪ್ಪನ ಮುಖ ನೆನಪಾಗುತ್ತದೆ.

'ಕಂಡಕ್ಟ್ರು-ಡ್ರೈವರ್ರು ಸಂಬಂಧ ಅಣ್ಣ-ತಮ್ಮಂದಿರ ಹಂಗೆ. ಗಂಡ-ಹೆಂಡ್ತಿ ಅಂದ್ರೂ ಒಪ್ಪುತ್ತೆ. ಅವರಿಬ್ಬರ ಅಂಡರ್‌ಸ್ಟ್ಯಾಂಡಿಂಗ್ ಚೆಂದಾಗಿದ್ರೆ ಬಸ್‌ನಾಗ ಓವರ್ ಸ್ಟ್ಯಾಂಡಿಂಗ್ ಇದ್ರೂ ನಡೀತದೆ. ಸ್ಟಾಪ್ ಇಲ್ಲದ ಜಾಗದಾಗೂ ಗಾಡೀನ ನಿಲ್ಸಿ ಜನಗಳ್ನ ಅತ್ತಿಸ್ಕೋತಾನೆ. ಡ್ರೈವರ್‌ನ ಮಾತ್ರ ಚೆಂದಾಗಿ ಮಡಕ್ಕೋ' ಎಂದು ಅಪ್ಪ ಹಲಬಾರಿ ಹೇಳಿದ್ದ.

ಕರಿಯಪ್ಪ ತನ್ನ ಬಸ್ಸಿನ ಡ್ರೈವರನ್ನು ಹೋಟೇಲ್ಲಿಗೆ ಕರೆದೊಯ್ದು ಎದುರಿಗೆ ಕೂರಿಸಿಕೊಂಡ. ದೋಸೆಗೆ ಆರ್ಡರ್ ಮಾಡಿದ.

'ನಾವು ಎಷ್ಟೇ ಚೆಂದಾಗಿ ಶೇವೆ ಮಾಡಿದ್ರೂ



ಈ ಜನ ಅಂಬೋದು ತಪ್ಪೊಲ್ಲ. ಪ್ಯಾಸೆಂಜರ್‌ಗೆ ಇರೋ ಬೆಲೆ ನಮಗೆ ಕೊಡೋಕಿಲ್ಲ' ಎಂದು ಡ್ರೈವರ್ ಬಡಿಯಪ್ಪ ಹೇಳಿದ್ದ.

'ನಿನ್ನ ಹೆಸರು ಬಡಿಯಪ್ಪ ಅಂತ ಯಾಕಿಟ್ರು?' ಎಂದು ಕರಿಯಪ್ಪ ಕೇಳಿದ. 'ಚಿಕ್ಕಂದಿನಲ್ಲಿ ಎಲ್ಲರ್‍ರೂ ಬಡೀತಿದ್ರಾ?'

'ಅದು ನಮ್ ವಂಶದಾಗ ಬಂದಿರೋ ಹೆಸ್ರು. ದಡಿಯಪ್ಪನ ಅಣ್ಣನ ಮಗ ನಾನು. ನನ್ನ ಸೋದರ ಮಾವಾ ಸಿಡಿಯಪ್ಪ. ನಮ್ತಾತ ಮಡಿಯಪ್ಪ.'

'ಅದ್ಸರಿ. ಈ ಹೆಸರುಗಳು ಗಂಡಸರಿಗೇನೋ ಒಪ್ಪುತ್ತೆ. ಹೆಣ್ಣು ಮಕ್ಕಳು ಹುಟ್ಟಿದ್ರೆ? ಬಡಿಯಮ್ಮ, ಜಡಿಯಮ್ಮ ಅಂತ ಇಡ್ತೀರಾ?' ಕಂಡಕ್ಟರ್ ನಕ್ಕ.

'ನನ್ಗೆ ಎರಡವೆ ಎಣ್ಣುಮಕ್ಕಳು. ದೊಡ್‌ಲಚ್ಮಿ, ಚಿಕ್ಕಲಚ್ಮಿ ಅಂತ ಹೆಸರು ಮಡಗಿದ್ದೀನಿ.'

'ಗಂಡ್ ಮಕ್ಕಳು?'

'ಇಲ್ಲ... ಸಾಕ್ ಬುಡು. ಯಾವ ಬಸ್ ನೋಡಿದ್ರೂ ಓವರ್ ಲೋಡು, ನಮ್ಮ ದೇಶದ್ ಥರಾ. ಗಂಡ್ಮಗ ಬೇಕು ಅಂತ ಗಾಡೀನ ಗೇರ್ ನಾಗೇ ಮಡಗಿದ್ರೆ ಸಂಸಾರ ನಿಭಾಯ್ಸೋದು ಗಾಸಿ. ಬಸ್ಸುಗಳು ಜಾಸ್ತಿ ಆಕೋವರ್ಗೂ



**ಬಿಟಿಎಸ್ ಕಂಡಕ್ಟರಾಗಿ ಕೆಲಸ ಸಿಕ್ಕಾಗ ಜೂನಿಯರ್ ಕರಿಯಪ್ಪನಿಗೆ ಕನಸು ನನಸಾಗಿತ್ತು. ಮೊದಲ ದಿನದ ಡ್ಯೂಟಿಯಲ್ಲಿ ಒಂದು ಸೇವೆ ಮಾಡುವ ಅವಕಾಶವೂ ಅವನಿಗೆ ದೊರೆತು ಹೋಯಿತು. ಅಪ್ಪ ಕರಿಯಪ್ಪನ 'ಅಡ್‌ವೈಸ್' ಅವನಿಗೆ ಪ್ರತಿಕ್ಷಣದಲ್ಲೂ ಸಿಗುತ್ತಿತ್ತು.**

ಮಕ್ಕಳು ಹೆಚ್ಗೆ ಆಗಬಾರ್ದು.'

'ನಾಳೆ ನನಗೆ ಮದುವೆ ಆದ್ರೆ...'

'ಆಗ್ಲೂ ಅಂಗೇನೇ. ಒಂದೋ, ಅರ್ಧಾನೋ! ಸಾಕು. ಇಂಜಿನ್ ಆಫ್ ಮಾಡ್ಕೊಂಡ್ ಡೌನ್ ನಾಗೆ ಗಾಡಿ ಓಡಿಸಬೇಕು.'

ಬಡಿಯಪ್ಪನಿಗೆ ದೋಸೆ ಕೊಡಿಸಿದ್ದೂ ಸಾರ್ಥಕ ವಾಯಿತು ಎನ್ನಿಸಿತು. 'ಚಿಕ್ಕ ಕುಟುಂಬ, ಚೊಕ್ಕ ಕುಟುಂಬ' ಎಂಬ ಜಾಹಿರಾತು ಬಸ್ಸುಗಳ ಮೇಲೆ ಬರೆಸಿದ್ದರಿಂದ ಬಸ್ಸುಗಳ ಸಂಖ್ಯೆ ಕಡಿಮೆಯಾಯಿ ತಷ್ಟೆ. ಬಸ್ಸೊಳಗಿನ ಜನರವರೆಗೂ ಇದು ಇನ್ನೂ ತಲುಪಿಲ್ಲ ಎಂದುಕೊಂಡ.

ಕಾಫಿ ಮುಗಿಸಿ ಈಚೆಗೆ ಬಂದಾಗ ದೂರದಲ್ಲಿ ಗೆಳೆಯನೊಬ್ಬ ಹೋಗುತ್ತಿದ್ದ. ಅವನನ್ನು ಕರೆಯೋಣವೆಂದು ಚಪ್ಪಾಳೆ ತಟ್ಟಿದ. ಅವನಿಗೆ ಕೇಳಿಸಲಿಲ್ಲ. ಆದರೆ ಬಸ್ಸಿಗಾಗಿ ಕಾದಿದ್ದ ತರುಣಿ ಯೊಬ್ಬಳು ತಿರುಗಿ ನೋಡಿ ಸುಮ್ಮನಾದಳು. ಕರಿಯಪ್ಪ ಸರಸರ ನಡೆಯುತ್ತಾ ಶಿಲ್ಲೆ ಹಾಕಿದ. ಗೆಳೆಯ ದೂರದಲ್ಲೇ ಇದ್ದಾನೆ. ಅದೇ ಲೈನಿನಲ್ಲಿ ಹುಡುಗಿಯೂ ನಿಂತಿದ್ದಾಳೆ.

ಕರಿಯಪ್ಪ ಹೊಡೆದ ಶಿಲ್ಲೆಯನ್ನು ಅಪಾರ್ಥ ಮಾಡಿಕೊಂಡ ಆ ತರುಣಿ ಬಿರಬಿರನೆ ನಡೆದು ಬಂದಳು.

'ಏನ್ರಿ ಅದು, ನನ್ನ ನೋಡಿ ವಿಷಲ್ ಹಾಕ್ತೀರ?' ಎಂದು ರೇಗಿದಳು.

ತುಷಾರ



'ನಿಮಗಲ್ಲ. ಅಲ್ಲಿ ನನ್ನ ಸ್ನೇಹಿತ ಇದ್ದಾನೆ. ಅವನ್ನ ಕರೆದೆ' ಎಂದ ಕರಿಯಪ್ಪ, ಉಗುಳು ನುಂಗುತ್ತಾ.

'ಶಿಲ್ಲೆ ಹಾಕಿ ಕರೆಯೋದು ಹುಡ್ಗೀರು ಇದ್ದಾಗಲೇ ಜಾಸ್ತಿ. ನನಗೆ ಗೊತ್ತಿಲ್ವಾ?' ಎಂದವಳು ದಬಾಯಿಸಿದಳು.

ಅಷ್ಟರಲ್ಲಿ ಬಡಿಯಪ್ಪ ರಾಜಿ ಮಾಡಲು ಬಂದ.

'ಹೊಸ್ದಾಗಿ ಡ್ಯೂಟೀಗೆ ಸೇರವ್ನೆ ಇವ್ನು. ಶಿಲ್ಲೆ ಆಕೋದು ಅಭ್ಯಾಸ ಆಗ್ಲಿ ಅಂತ ಎಲ್ಲರ್ಗೂ ಒಡೀತಾ ಇರ್ತಾನೆ. ಏನೂ ಅನ್ಕೋಬೇಡಿ. ನಮ್ ಕರಿಯಪ್ಪ ಅಂಥವ್ನಲ್ಲ.'

ಆಕೆಗೆ ಸ್ವಲ್ಪ ಸಮಾಧಾನ ಆದಂತಾಯಿತು.

'ಆದ್ರೂ ನೋಡ್ಕೊಂಡ್ ವಿಷಲ್ ಹಾಕಬೇಕು. ನನ್ನ ಜಾಗದಲ್ಲಿ ಬೇರೆ ಹುಡುಗಿ ಇದ್ದಿದ್ರೆ ಅವ್ಳೂ ವಿಷಲ್ ಹಾಕಿ ಉತ್ತರ ಕೊಟ್ಟಿರೋವಳು' ಎಂದು ಹೇಳಿ ನಡೆದು ಹೋದಳು.

ಅಷ್ಟರಲ್ಲಿ ಆ ಗೆಳೆಯ ಮರೆಯಾಗಿದ್ದ. ಕರಿಯಪ್ಪ ಬಂದು ಬಸ್ ಏರಿದ. ನೋಡಿದರೆ ಅಲ್ಲಿ ಪರಮಾಶ್ಚರ್ಯ. ಆ ಹುಡುಗಿ ಬಸ್ಸಲ್ಲಿ ಕುಳಿತು ಮನದಲ್ಲೇ ನಗುತ್ತಿದೆ.

ಕರಿಯಪ್ಪನಿಗೆ ಸಂತೋಷವಾಯಿತು. ಬಸ್ ಹೊರಗೆ ಅವರು ಜೋರಾಗಿದ್ದರೂ ಬಸ್ನೊಳಗೆ ಮೆತ್ತಗಿರುತ್ತಾರೆಂಬ ವಿಷಯ ಅವನಿಗೆ ಗೊತ್ತು. ಟಿಕೆಟ್‌ಗಳು ಇಶ್ಯೂ ಮಾಡೋವಾಗಲೂ ಇದು ಅನುಭವಕ್ಕೆ ಬಂದಿದೆ. ಹುಡುಗಿಯರದು ಮೃದು ಶರೀರ.

ಕರಿಯಪ್ಪ ಟಿಕೆಟ್‌ಗಳು ಕೈಲಿ ಹಿಡಿದು ಅವಳ ಬಳಿಗೆ ಬಂದ. ಅವಳು ನೋಡಿದಳು.

'ಶಿಲ್ಲೆ ಹೊಡ್ದೆ ಅಂತ ಬೇಸರಾನಾ?' ಎಂದ.

'ಹಿಂದೆ-ಮುಂದೆ ನೋಡಿ ಶಿಲ್ಲೆ ಹೊಡೀಬೇಕು' ಎಂದಳವಳು. ಕರಿಯಪ್ಪ ಪಾಕೆಟ್ ಡೈರಿ ತೆಗೆದು ಏನೋ ಬರೆದುಕೊಂಡ.

'ನೀವು ಹೇಳಿದ್ದನ್ನೇ ಬರ್ಕೊಂಡೆ. ಚಿನ್ನದಂಥ ಮಾತು.'

'ಎಲ್ಲರಿಗೂ ಗೊತ್ತಿರೋ ವಿಷಯಾನೇ ಅದು, ಬಿಡಿ' ಎಂದಳು ಹುಡುಗಿ.

'ನಿಮ್ಮ ಹೆಸರು ಹೇಳಿದ್ರೆ, ಈ ಮಾತು ಯಾರು ಹೇಳಿದ್ದು ಅಂತ ಬರ್ಕೋತಿದ್ದೆ.'

'ಪ್ಯಾಸೆಂಜರು ಅಂತ ಬರ್ಕೊಳ್ಳಿ' ಎಂದಳು ಎಕ್ಸ್‌ಪ್ರೆಸ್ ಸ್ಪೀಡಿನಲ್ಲಿ.

'ಪ್ಯಾಸೆಂಜರು ಅಂದ್ರೆ ಗಂಡ್ಸೋ, ಹೆಂಗ್ಸೋ

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ

# ಖುಷಿ ಕೊಡುವ ಬಸ್ಸುಗಳು

'ಕೆಲಸ ಸಿಕ್ಕರೆ ನಿನಗೆ ಕೋಡುಬಳೆ ಹಾರ ಹಾಕಿಸುತ್ತೇನೆ' ಎಂದು ಕೆಲವರು ದೇವರಿಗೆ ಆಸೆ ತೋರಿಸುತ್ತಾರೆ. ಕೆಲವರು ಮುಡಿ ಕೊಡುವೆ ಎಂದಿರುತ್ತಾರೆ. ಜೋಡಿಕಾಯಿ ಒಡೆದು ಮಂಗಳಾರತಿ ಮಾಡಿಸುವೆ ಎಂದು ಹಲವರು ಹರಕೆ ಹೊತ್ತಿರುತ್ತಾರೆ.

ಕಂಡಕ್ಟರ್ ಕರಿಯಪ್ಪ ಜೂನಿಯರ್ ಬೇರೆ ರೀತಿ ಹರಿಸಿಕೊಂಡಿದ್ದ. ಕೊಲ್ಲೂರಿಗೆ ಹೋಗಿ ಮೂಕಾಂಬಿಕೆಗೆ ಕೈ ಮುಗಿಯಬೇಕು. ದೇವಾಲಯದ ಆನೆಯ ಸೊಂಡಿಲಿಂದ ತನ್ನ ಕ್ಯಾಷ್ ಬ್ಯಾಗ್ ಮೇಲೆ ಹೊಡೆಸಿ ಆಶೀರ್ವಾದ ಪಡೆಯಬೇಕು ಎಂದು ಹರಕೆ ಹೊತ್ತಿದ್ದ.

ಕುಂದಾಪುರದಲ್ಲಿ ಮೊದಲು ಬಂದು ಇಳಿದ. ದಕ್ಷಿಣ ಕನ್ನಡ ಜಿಲ್ಲೆಯ ವಾತಾವರಣಕ್ಕೆ ಮನ ಸೋತ. ಎಲ್ಲೆಲ್ಲೂ ತೆಂಗಿನ ಮರಗಳು, ಹಸಿರು ಕಾಡುಗಳು, ನೀಲಿ ಸಮುದ್ರ, ನಗುತ್ತಾ ಮಾತಾಡುವ ಜನ.

ಇವೆಲ್ಲಕ್ಕಿಂತ ಮಿಗಿಲಾಗಿ ಕಂಡದ್ದು ಖಾಸಗಿ ಬಸ್ಸುಗಳ ಸೇವೆ. ಎಲ್ಲಿಂದ ಎಲ್ಲಿಗೆ ಹೋಗಬೇಕು ಎನ್ನಿಸಿದರೂ ಅರೆಘಳಿಗೆಯಲ್ಲಿ ಬಸ್ಸು ಹಾಜರ್. ಕುಂದಾಪುರದ ಶಾಸ್ತ್ರಿ ಸರ್ಕಲ್‌ನಲ್ಲಿ ನಿಂತಾಗ ಉಡುಪಿ–ಮಂಗಳೂರಿನ ಬಸ್ಸುಗಳು ಕಂಡು ಖುಶಿಯಾಯಿತು. ಕೊಲ್ಲೂರಿನಲ್ಲಿ ಮಂಗಳಾರತಿ ಎಂದರೆ ಮಧ್ಯಾಹ್ನದ ವೇಳೆಗೆ. ಅದಕ್ಕೆ ಮೊದಲು ಉಡುಪಿಗೆ ಹೋಗಿ ಬರಬಾರದೇಕೆ ಎನ್ನಿಸಿತು. ಇದಕ್ಕೆ ಸ್ಫೂರ್ತಿ ಖಾಲಿ ಬಸ್ಸುಗಳು!

ಖಾಸಗಿ ಎಕ್ಸ್‌ಪ್ರೆಸ್ ಬಸ್ ಬಂದು ಕರಿಯಪ್ಪನ ಮುಂದೆ ನಿಂತಿತು. ಬಸ್ ಏರುವ ಗಡಿಬಿಡಿಯಲ್ಲಿ ಕೈಲಿದ್ದ ಬುಟ್ಟಿ ಕೆಳಗೆ ಬಿತ್ತು. ಬುಟ್ಟಿಯನ್ನು ಸರಿಪಡಿಸಿ ತಲೆ ಎತ್ತಿದಾಗ ಏನು



ತಿಳಿಯೊಲ್ಲ' ಎಂದ ಕರಿಯಪ್ಪ. ಆ ತರುಣಿ ನಕ್ಕಳು.

'ಕೊಡಿ, ಬರ್‍ಕೊಡ್ತೀನಿ ಹೆಸರು' ಎಂದು ಡೈರಿ ಪಡೆದು 'ಲೈಲಾ' ಎಂದು ರುಜು ಹಾಕಿದಳು.

'ಚೆನ್ನಾಗಿದೆ ಹೆಸರು. ಲೈ... ಲಾ...' ಎಂದು ಕರಿಯಪ್ಪ ಚಪ್ಪರಿಸಿದ.

'ಅಕ್ಷರಗಳ್ನ ಒಟ್ಟಿಗೆ ಹೇಳಿ. ಇಲ್ಲಾಂದ್ರೆ ಇಂಗ್ಲಿಷು ಅಂತ ಜನ ತಿಳಿದಾರು' ಎಂದವಳು ಎಚ್ಚರಿಕೆ ನೀಡಿದಳು.

ಅಷ್ಟರಲ್ಲಿ ಜನರು ಬಸ್ಸೊಳಗೆ ಜಮಾಯಿಸ ತೊಡಗಿದರು. ಹೆಚ್ಚು ಮಾತಾಡುವುದು ಅಪಾಯ ಎಂದು ಕರಿಯಪ್ಪ ಸುಮ್ಮನಾದ.

ಇದಾದ ಮೂರು ನಾಲ್ಕು ದಿನ ಕರಿಯಪ್ಪನಿಗೆ ಅವಳದೇ ನೆನಪು. ಶಿಲ್ಲೆ ಹೊಡೆಯುವಾಗಲೆಲ್ಲ ಅವಳು ಕಣ್ಣಿನ ಮುಂದೆ ಕಾಣಿಸಿಕೊಳ್ಳುತ್ತಾಳೆ. ಅವಳೊಡನೆ ಪಾರ್ಕಲ್ಲಿ ಕುಳಿತು ಕಡಲೇಕಾಯಿ ತಿಂದ ಕನಸು. ಆಗ ಯಾರೋ ಬಂದು ನೋಡಿ, 'ಏನ್ಲೇ, ಡ್ಯೂಟಿ ಇಲ್ವಾ?' ಎಂದು ಕೇಳಿದಂತಹ ಭಯ.

ಐದನೆಯ ದಿನ ಅದೃಷ್ಟವೆಂಬಂತೆ ಲೈಲಾ ಕರಿಯಪ್ಪನ ಬಸ್ಸು ಏರಿದಳು. ಕರಿಯಪ್ಪನಿಗೆ ಆನಂದವಾಯಿತು.

'ಅಪರೂಪ ಆದ್ರಿ?' ಎಂದು ಕೇಳಿಯೇ ಬಿಟ್ಟ.

'ಹಾಂ, ಹೌದು.'

ಆಶ್ಚರ್ಯ! ತಾನು ಏರಬೇಕಾಗಿದ್ದ ಬಸ್ಸು ಆಗಲೇ ದೂರದಲ್ಲಿ ಹೋಗುತ್ತಿದೆ. ತನ್ನ ಮುಂದೆ ಮತ್ತೊಂದು ಖಾಸಗಿ ಬಸ್ಸು ಬಂದು ನಿಂತಿದೆ. ಬಸ್ಸಿಗೆಲ್ಲಾ 10 ಜನ ಮಾತ್ರ ಇದ್ದಾರೆ. ಬಸ್ಸಿನ ಬಾಡಿ ಲಕಲಕ ಹೊಳೆಯುತ್ತಿದೆ. ಒಂದರ ಹಿಂದೆ ಮತ್ತೊಂದು ಬಸ್ಸು. ಸಾಲುಸಾಲಾಗಿ ರೈಲಿನ ಮಾದರಿ. ದಕ್ಷಿಣ ಕನ್ನಡ ಜಿಲ್ಲೆಯ ಜನಕ್ಕೆ ಬೆಂಗಳೂರು ಬಿ.ಟಿ.ಎಸ್. ಹ್ಯಾಂಗಿಂಗ್ ಸೀಟುಗಳ ಕಲ್ಪನೆಯೂ ಇದ್ದಿರಲಿಕ್ಕಿಲ್ಲ ಮಾರಾಯರೆ!

ಬಸ್ ಏರಿ ಕುಳಿತ. 36 ಕಿಲೋಮೀಟರ್‌ಗೆ ಕೇವಲ 5 ರೂಪಾಯಿ ಛಾರ್ಜು. ತಾನು ಬೆಂಗಳೂರಿಂದ ಹೊಸಕೋಟೆಗೆ 24 ಕಿಲೋಮೀಟರ್‌ಗೆ 5 ರೂಪಾಯಿ ಕೊಟ್ಟು ಓಡಾಡಿದ ಹಳೆಯ ಘಟನೆ ನೆನಪಾಯಿತು. ಇಷ್ಟು ಸಲೀಸಾಗಿದೆಯಲ್ಲ ಇಲ್ಲಿನ ಸಾರಿಗೆ ದರ ಎಂದುಕೊಂಡ.

ಜನಕ್ಕೆ ಅನುಕೂಲ ಆಗುವ ಎಲ್ಲ ಸ್ಟಾಪ್‌ಗಳಲ್ಲಿ ನಿಲ್ಲಿಸಿಯೂ 45 ನಿಮಿಷಕ್ಕೆಲ್ಲಾ ಉಡುಪಿಗೆ ಬಂದಿತ್ತು ಬಸ್ಸು. 'ಇಲ್ಲಿ ಸ್ಟಾಪ್ ಇಲ್ರೀ' ಎಂದು ಕಾನೂನು ಮಾತಾಡಿ ಜನರನ್ನು ದೂರದ ಸ್ಟಾಪಲ್ಲಿ ಇಳಿಸುವ ಡ್ರೈವರ್‌ಗಳು ಖಾಸಗಿ ಬಸ್ಸುಗಳಲ್ಲಿ ದೊರೆಯುವುದಿಲ್ಲ ಎಂದು ಯಾರೋ ಹೇಳಿದ್ದ ಮಾತು ನೆನಪಾಯಿತು.

ಉಡುಪಿ ಕೃಷ್ಣನ ದರ್ಶನ ಪಡೆದು ಮತ್ತೆ ಕುಂದಾಪುರಕ್ಕೆ ಬಂದ. ಮರವಂತೆ ಬೀಚಿನಲ್ಲಿ ಸ್ವಲ್ಪ ಕಾಲ ಕಳೆಯೋಣವೆಂದು ಮತ್ತೊಂದು ಬಸ್ ಏರಿದ. ಮರವಂತೆಯ ಸುಂದರ ದೃಶ್ಯ ನೋಡಿದ ಮೇಲೆ ಕೊಲ್ಲೂರಿಗೆ ಅಲ್ಲಿಂದಲೇ ಹೊರಟ. ಘಳಿಗೆಗೆ ಒಂದು ಬಸ್ಸು. ಎಲ್ಲಿಂದ ಎಲ್ಲಿಗೆ ಹೋಗಲೂ ಕಾಯುವಪ್ಪಿಲ್ಲ. ಆರಾಮವಾಗಿವೆ ಸೀಟುಗಳು ಎಣಿಸಲಾರದಷ್ಟಿವೆ ಬಸ್ಸುಗಳು.

ಕೊಲ್ಲೂರಿನ ದೇವಾಲಯಕ್ಕೆ ಬಂದು ಪೂಜೆ ಮುಗಿಸಿದ. ಆನೆಯ ಆಶೀರ್ವಾದ ಪಡೆದ. ಬೆಂಗಳೂರಿನಲ್ಲಿ ಪ್ರಯಾಣಿಕರು ಇಲ್ಲಿನಷ್ಟೇ ಸಲೀಸಾಗಿ ಓಡಾಡುವಂತಹ ವಾತಾವರಣ ಮೂಡಲಿ, ಬಸ್ಸುಗಳ ಸಂಖ್ಯೆ ವೃದ್ಧಿಯಾಗಲಿ ಎಂದು ಆನೆಗೆ ಕೈ ಮುಗಿದ. ಆನೆ ಸೊಂಡಿಲೆತ್ತಿ ಘೀಂಕಾರ ಮಾಡಿ ಒಳಗೇ ನಕ್ಕಿತು.

(ಎಂಎಸ್‌ನ)



'ನಿತ್ಯ ಬರೋಂಗಿದ್ರೆ, 'ಪಾಸ್' ಮಾಡಿಸಿ ಕೊಂಡು ಬಿಡಿ. ಐದು ರೂಪಾಯಿಗೆ ಐವತ್ತು ಸಲ ಬನ್ನೇರುಘಟ್ಟವರೆಗೆ ಹೋಗಿ ಬರಬಹುದು' ಎಂದ.

'ಪಾಸ್ ನಮಗೆಲ್ಲಿ ಕೊಡ್ತಾರೆ?' ಲೈಲಾ ಕೇಳಿದಳು.

'ಫೈಲಾದ ಹುಡುಗರು ಕೂಡ 'ಪಾಸ್' ಇಟ್ಕೊಂಡ್ ಓಡಾಡ್ತಾರೆ. ನೀವಂತೂ ಕಾಲೇಜು ಹುಡುಗಿ ಥರಾ ಕಾಣ್ತೀರ. ನಿಮ್ಮ ಮುಖ ನೋಡಿದ್ರೆ 'ಪಾಸ್' ಅಂತಾನೇ ಅನ್ಸುತ್ತೆ. 'ಕಾಸ್' ಅಂದ್ರೆ ನಂಬೋಕಾಗೊಲ್ಲ' ಎಂದು ಹೊಗಳಿ ಬಿಟ್ಟ.

'ನಾನು ಮೇಡಂ ಆಗಿದ್ದೀನಿ, ಪುಟ್ಟ ಮಕ್ಕಳಿಗೆ.'

'ಸರಿ ಮತ್ತೆ, ಪಾಸು-ಫೈಲು ಎಲ್ಲಾ ನಿಮ್ಮ ಕೈನಲ್ಲೇ ಇರುತ್ತೆ' ಎಂದು ಕರಿಯಪ್ಪ ಮುಖವರ ಳಿಸಿದ.

ಲೈಲಾ ದರ್ಶನ ನೀಡಿದ ದಿನ ಕರಿಯಪ್ಪನಿಗೆ ಏನೋ ಸಂತೋಷ. ಎಲ್ಲಿಲ್ಲೋ ಸಂತೋಷ. ಯಾಕೆಂಬುದೇ ಅರ್ಥವಾಗಲಿಲ್ಲ.

ಕೆಲವು ಸಲ ಲೈಲಾ ತಡವಾಗಿ ಬಂದು ಬಸ್ ಏರುತ್ತಾಳೆ. ಅವಳಿಗೆ ಸ್ಟ್ಯಾಂಡಿಂಗ್ ಸೀಟ್ ದೊರೆತರೆ ಕರಿಯಪ್ಪನಿಗೆ ಕಸಿವಿಸಿ. ಐದು ಲಕ್ಷ ಬೆಲೆಬಾಳುವ ಈ ಬಸ್ಸಿನಲ್ಲಿ ಲೈಲಾಗೆ ಹತ್ತು ನಿಮಿಷ ಕೂರಲು ಅವಕಾಶ ಕಲ್ಪಿಸಿ ಕೊಡದೇ

ಹೋದೆನಲ್ಲಾ ಎಂದು ಚಡಪಡಿಸುತ್ತಾನೆ. ಲೇಡೀಸ್ ಸೀಟ್‌ಗಳಲ್ಲಿ ಗಂಡಸರು ಕೂರುವುದೇ ಹೆಚ್ಚು. ಬಸ್ಸಿಗೆ ಮೊದಲನೆಯವನಾಗಿ ಹತ್ತಿದವನು ಸಹ ಹುಡುಕಿಕೊಂಡು ಹೋಗಿ ಲೇಡೀಸ್ ಸೀಟಲ್ಲಿ ಕೂರುತ್ತಾನೆ. ಎಬ್ಬಿಸಲು ಪ್ರಯತ್ನಿಸಿದರೆ ಇಲ್ಲದ ಜಗಳ. ಲೈಲಾ ಕಾಸು ಕೊಟ್ಟು ಟಿಕೆಟ್ ಪಡೆದು ಅನ್ಯಾಯವಾಗಿ ನಿಂತುಕೊಂಡು ಪಯಣಿಸುತ್ತಾಳೆ. ಟಿಕೆಟ್ ಕೊಂಡವರಿಗೆ ಸೀಟ್ ಕೊಡಲಾಗದ ದಾರುಣ ಪರಿಸ್ಥಿತಿ ತನ್ನ ಸಂಸ್ಥೆಯದು ಎಂದು ಕರಿಯಪ್ಪನಿಗೆ ಅನ್ನಿಸುವುದು ಲೈಲಾ ನಿಂತಾಗ. ಸೊಂಟವನ್ನು ಸೀಟಿನ ಕಂಬಿಗೆ ಒರಗಿಸಿ, ಮೇಲಿನ ಬಾರನ್ನು ಹಿಡಿದು ನೇತಾಡಿದಾಗ.

ಅಪ್ಪನ ಬಳಿ ಈ ವಿಷಯ, ಅಂದರೆ, ಲೇಡೀಸ್ ಸೀಟ್ ಬಗ್ಗೆ ಕರಿಯಪ್ಪ ಪ್ರಸ್ತಾಪಿಸಿದ್ದ.

'ನಮ್ಮ ಜನ ಅದ್ಯಾಕೆ ಹೆಂಗಸರಿಗೆ ಸೀಟ್ ಕೊಡೊಲ್ಲ. ಮಕ್ಕಳ್ನ ಎತ್ಕೊಂಡು ನಿಂತಿದ್ರೂ ಸುಮ್ನೆ ಇರ್ತಾರಲ್ಲ?'

ಅಪ್ಪ ನಿರಾಶೆಯ ನಗು ನಕ್ಕಿದ್ದ.

'ನನ್ ಕಾಲ್ದಾಗೇ ಅದು ಆಗ್ಲಿಲ್ಲ ಬುಡು. ಕಡ್ಡಾಯವಾಗಿ ಲೇಡೀಸ್‌ಗೆ ಅಂತ ಬೋರ್ಡುಗಳು ಹಾಕಿದ್ವಿ. ಡಿಪೋ ಮ್ಯಾನೇಜರ್‌ಗಳು ನಮ್ಗೆ ಹೇಳಿದ್ರು, ಲೇಡೀಸ್ ಸೀಟ್‌ನಾಗ ಗಂಡಸರು ಕೂತ್ರೆ ಎಬ್ಸಿ. ಏಳೊಲ್ಲ ಅಂದ್ರೆ ಪೊಲೀಸ್ ನೋರ್‍ಗೆ ತಿಳ್ಸಿ. ಆದ್ರೆ ಅದ್ಯಾವ್ದೂ ನಡೀಲಿಲ್ಲ.'

'ಅದ್ಯಾಕಪ್ಪ ಹಾಗಾಯ್ತು?'

'ಬೆಂಗಳೂರ್‍ನಾಗ ಕನ್ನಡ ದೇಸದ ಸಂಸ್ಕೃತಿ ಎಲ್ಲೈತೆ? ಕನ್ನಡಿಗರು ಇರೋದೇ ಇಪ್ಪತ್ತೈದು ಪರ್ಸೆಂಟು ಅಂತ ಚಿದಾನಂದ ಮೂರ್ತಿಗಳು ಯೋಳ್ಳಿಲ್ವೆ? ಮೂವತ್ತೈದಕ್ಕಿಂತ ಕಡಿಮೆ ಮಾರ್ಕು ಬಂದ್ರೆ ಫೈಲು ತಾನೇ? ಕನ್ನಡತನ ಬೆಂಗಳೂರ್‍ನಾಗ ಫೈಲಾಗೈತೆ.'

'ಮತ್ತೆ ಮದರಾಸ್ ಸಿಟಿ ಸರ್ವಿಸ್‌ನಲ್ಲಿ ಒಂದು ಕಡೆ ಪೂರ್ತಿ ಹೆಂಗಸರಿಗೇ ಸೀಟುಗಳಂತೆ?'

'ಅಲ್ಲಿನ ಕಾನೂನು ಅಂಗೈತೆ ಕಣ್ಲಾ. ಬೆಂಗಳೂರ್‍ನಾಗ ಸೀಟ್ ಬಿಡ್ದೆ ಇರೋ ಈ ಜನ ಮದರಾಸ್‌ಗೆ ಒದಾಗ ಲೇಡೀಸ್ ಬಂದ್ರೆ ಮುಚ್ಕೊಂಡ್ ಸೀಟ್ ಕೊಡ್ತಾರೆ ಗೊತ್ತಾ? ಒಂದು ವೇಳೆ ಕುಂತಿದ್ರೂ, ಲೇಡೀಸ್ ಬಂದ ಕೂಡ್ಲೇ ಎರಡೂ ಡೋರು ಕ್ಲೋಸ್ ಮಾಡ್ಕೊಂಡ್ ಎದ್ದು ನಿಲ್ತಾರೆ.'

ಲೈಲಾ ಸ್ಟ್ಯಾಂಡಿಂಗ್ ನಿಂತಂತೆ ಅನ್ನಿಸಿ ಕರಿಯಪ್ಪನಿಗೆ ಕಸಿವಿಸಿಯಾಯಿತು. ಲೈಲಾ ತಡವಾಗಿ ಬಂದಾಗಲೆಲ್ಲಾ ಇದೇ ಪರಿಸ್ಥಿತಿಯಾ ಎಂದು ಬೇಸರಿಸಿದ.

'ನಮ್ಮಲ್ಲೂ ಕಾನೂನು ಬಿಗಿ ಮಾಡೋದು.'

'ಅವರವರ ಬೆಲ್ಟು ಅವರವರು ಬಿಗಿ ಮಾಡ್ಕೊಳ್ಳೋದರಲ್ಲೇ ಇರ್ತಾರೆ ಜನ. ಲೇಡೀಸ್ ಸೀಟ್ ಗಲಾಟೆ ಇದ್ದಾಗ ಪೊಲೀಸ್ ಸ್ಕ್ವಾಡ್ ಕೂಡಾ ಇತ್ತು. ಅವರು ದಿಢೀರ್ನೆ ಚೆಕ್‌ಮಾಡಿ ಲೇಡಿಸ್ ಸೀಟ್ನಾಗ ಕುಂತ್ಕೊಂಡೋನಿಗೆ ಫೈನ್ ಆಕ್ತಾ ಇದ್ರು. ಆ ಕಾಲಾನೂ ಮುಗಿತು.'

'ನಮ್ಮ ಕೈಲಿ ಈ ಕೆಲ್ಸ ಆಗೊಲ್ವಾಪ್ಪ?' ಎಂದು ಕೇಳಿದ ಮಗ ನಿರಾಶೆಯಿಂದ.

'ನಾನು ನಿಮ್ಮಪ್ಪ, ಯೋಳ್ತೀನಿ ಕೇಳು. ಪ್ಯಾಸೆಂಜರ್‌ಗೆ ಟಿಕೆಟ್ ಇಶ್ಯೂ ಮಾಡಬಹುದು ನಾವು. ಆದ್ರೆ ಬುದ್ಧಿ, ವಿವೇಕ, ಸದ್ಗುಣ ಇಶ್ಯೂ ಮಾಡೋಕಾಗೊಲ್ಲ.'

ಟಿಕೆಟ್ಟಿನ ಬೆಲೆ ಏರಿಸುವ ನಮಗೆ ಹೆಂಗಸರಿಗೆ ಮುದುಕರಿಗೆ ಸೀಟ್ ಕೊಡಿಸುವ ಯೋಗ್ಯತೆ ಇಲ್ಲವಲ್ಲ ಎಂದು ಕರಿಯಪ್ಪ ಮರುಗಿದ. ಲೈಲಾಳ ನೆನಪಾಯಿತು. ಜೇಬಿಂದ ಡೈರಿ ತೆಗೆದ. ಅವಳ ಸಹಿ ನೋಡುತ್ತಾ ಹಾಗೆಯೇ ನಿದ್ದೆ ಹೋದ. ●

## 'ಉರುಳು'



ಅತ್ತ ನೋಡದಿರು
ನಲ್ಲೆ;
ನಿನ್ನ ಕಣ್ಣಿಗೆ ಬಿದ್ದ
ಆ—
ವಜ್ರದ ನೆಕ್‌ಲೇಸ್
ನನಗಾಗಿ
ಕಾದಿರುವ 'ಉರುಳು'!

● ನಾ. ಅ. ಪ್ರಮೀಳ, ಮೈಸೂರು

# ಮೂರು ಮುಖಗಳು

● ಬಿ. ಆರ್. ಲಕ್ಷ್ಮಣ ರಾವ್

## ದುಃಸ್ವಪ್ನ

ರಾತ್ರಿ ಒಂದು ದುಃಸ್ವಪ್ನ; ನಾನು ನರಕದಲ್ಲಿ
ಬಿದ್ದಿದ್ದೇನೆ ದಿಮ್ಮಿಯಂತೆ ಅಂಗಾತ ಮೈಚೆಲ್ಲಿ.
ಯಮದೂತರು ಬಂದು
ಗರಗಸವನು ತಂದು
ಕುಯ್ದರಯ್ಯೋ ತಲೆಬುರುಡೆಯ
ಒತ್ತಿ ಒತ್ತಿ ಸೀಳಿ.
ಗಕ್ಕನೆದ್ದು ಕೂತೆ ಚೀರಿ ಆ ಗರಗರ ಸ್ವರಕೆ
ನೋಡಿದರೆ ಮಗ್ಗುಲಲ್ಲೆ ನನ್ನಾಕೆಯ ಗೊರಕೆ.

## ಪ್ರಾರ್ಥನೆ

ಸಲ್ಲಿಸುತ್ತಿದ್ದಾನೆ ಯುವಕ
ದೇಗುಲದಲ್ಲಿ
ಪ್ರಾರ್ಥನೆ:
'ದೇವರೇ, ನಾನು ಪ್ರೀತಿಸುತ್ತಿರುವ ಹುಡುಗಿ
ನನ್ನನ್ನು ಒಪ್ಪಲಿ;
ಇಂದು ಕನಸಲ್ಲಾದರೂ ಬಂದು
ನನ್ನನ್ನು ಅಪ್ಪಲಿ;
ನನ್ನಪ್ಪ ಅವಳಪ್ಪನಿಂದ ಬರಬಹುದಾದ
ವಿಘ್ನಗಳೆಲ್ಲ ತಪ್ಪಲಿ;
ಸದ್ಯಕ್ಕೆ ಸುರಕ್ಷಿತವಾಗಿರಲಿ ಹೊರಗೆ
ನನ್ನ ಹೊಸ ಚಪ್ಪಲಿ.

## ಇಂಧನ

'ಅನಸೂಯಮ್ಮ, ಅನಸೂಯಮ್ಮ,
ಅಡಿಗೆ ಮಾಡೋದಿಲ್ವೇನಮ್ಮ?
ಬೇಗ ಒಲೆ ಹಚ್ಚು.'

'ಒಲೆ ಯಾಕ್ರೀ ಹಚ್ಚಬೇಕು?
ಕಬ್ಬಿಣದ ಕಡಲೆ ಬೇಯಿಸಲಿಕ್ಕೂ
ಸಾಕು ಈಕೆಯ
ಹೊಟ್ಟೆಕಿಚ್ಚು.'



ಬಸ್ಸಿಳಿದು ಒಮ್ಮೆ ಸುತ್ತಲೂ ನೋಡಿದ. ಅವನ ಕೈಯಲ್ಲೊಂದು ಭಾರವಾದ ಸೂಟ್‌ಕೇಸ್ ಇತ್ತು. ತನಗೆ ಅಪರಿಚಿತವಾದ ಊರು. ಇದೇ ಮೊತ್ತ ಮೊದಲಾಗಿ ತಾನು ಈ ಊರನ್ನು ನೋಡುತ್ತಿದ್ದೇನೆ. ಈ ಊರಿಗೆ ಕಾಲಿಡುತ್ತಿದ್ದೇನೆ. ಆದರೆ ಇಲ್ಲಿ ತಾನಿರುವ ಈ ಎರಡು ತಿಂಗಳಲ್ಲಿ ಇಲ್ಲಿಯವನಂತೆ ವರ್ತಿಸಬೇಕು ಮತ್ತು ಬದುಕಬೇಕು. ಈ ಎರಡು ತಿಂಗಳ ಬದುಕು ಬಹುಶಃ ಇಲ್ಲಿನ ಶಾಶ್ವತ ಬದುಕಾಗಲೂಬಹುದು ಅಥವಾ ಅರ್ಧದಲ್ಲೇ ಮುಗಿದುಬಿಡಬಹುದು! ತಾನು ಈಗ ನೋಡಹೋಗುತ್ತಿರುವ ಆ ಅರವತ್ತರ ಪ್ರಾಯದ ಹೆಂಗಸಿಗೆ ತನ್ನ ಮೇಲೆ ನಂಬಿಕೆ ಬರಬೇಕು. ಮಗನೆಂಬ ನಂಬಿಕೆ! ತನ್ನ ಒಬ್ಬನೇ ಒಬ್ಬ ಮಗನೆಂಬ ನಂಬಿಕೆ. ಅದೂ ಸೈನ್ಯದಲ್ಲಿರುವ ಮಗನೆಂಬ ನಂಬಿಕೆ ಆ ಹೆಂಗಸಿಗೆ ಬರ

# ತಾಯಿ

● ಪಕ್ರುದ್ದೀನ್ ಇರುವೈಲ್

ಬೇಕು. ಇದು ಕುಹಕದಿಂದ ಆಕೆಯನ್ನು ವಂಚಿಸುವ ನಟನೆ ಅಲ್ಲ. ಸತ್ಯವಾಗಿ ಆಕೆಯನ್ನು ತಾಯಿಯಂತೆ ಒಪ್ಪಿ ಮಾಡಬೇಕಾದ ನಟನೆ ಅಥವಾ ಕರ್ತವ್ಯ!

ಆತ ಲಗ್ಗೇಜನ್ನು ಎತ್ತಿಕೊಂಡು ಸ್ವಲ್ಪ ದೂರದ ಆ ದುಖಾನಿನ ಬಳಿ ಬಂದ. ಯಾರೋ ಕೆಲವರು ಅಲ್ಲಿ ಕುಳಿತಿದ್ದರು. ಏನೋ ಲೋಕಾಭಿರಾಮದ ಮಾತುಗಳನ್ನು ಆಡುತ್ತಿದ್ದ ಆ ಜನ, 'ಟಕ್' ಎಂದು ಲಗ್ಗೇಜು ಇಟ್ಟ ಸದ್ದಿಗೆ ಎಚ್ಚತ್ತು ಈತನ ಗಂಭೀರ, ಗತ್ತಿನ ಸೈನಿಕನ ನಿಲುವಿಗೆ ಬೆಚ್ಚಿ ಮಾತು ನಿಲ್ಲಿಸಿ ತುಟಿ ಬಂದು ಮಾಡಿ ಕುಳಿತು ಬಿಟ್ಟರು. ಅಲ್ಲಿದ್ದ ನಾಲ್ವರನ್ನೂ ಈತ ಸೂಕ್ಷ್ಮವಾಗಿ ದಿಟ್ಟಿಸಿ, ನಂತರ ಒಬ್ಬನನ್ನು ಕರೆದು ಮಾತಿಗೆ ತೊಡಗಿದ.

"ನಾನು ಕಾಶ್ಮೀರದಲ್ಲಿ ಮಿಲಿಟ್ರಿಯಲ್ಲಿದ್ದವ. ಇದೇ ಊರಿನ ಫಾತುಮಾಬೀಬಿಯ ಒಬ್ಬನೇ ಮಗ ಜಾವೇದ. ಇಲ್ಲಿನ ಮಸೀದಿಯಲ್ಲಿ ಹೆಸರಾಂತ ಮೌಲ್ವಿಯಾಗಿದ್ದರಲ್ಲ ಅಹಮದ್ ಕಾಕ, ಅವರ ಮಗ!"

ಅವರು ನಾಲ್ವರೂ ಒಮ್ಮೆಲೆ ಗೆಲುವಾದರು. ಬಿಗಿದುಕೊಂಡ ತುಟಿಗಳು ಅರಳಿದುವು. ಒಬ್ಬರನ್ನೊಬ್ಬರು ನೋಡಿ ನಗುತ್ತಾ ಹತ್ತಿರ ಬಂದು, "ಓ... ನೀನಾ ಜಾವೇದ! ಆರು ವರ್ಷಗಳ ಹಿಂದೆ ಸೈನ್ಯ ಸೇರಲು ಹೋದವನು. ಇಷ್ಟು ವರುಷಗಳ ನಂತರ ತಾಯನ್ನು ನೋಡಲಿಕ್ಕೆ ಬಂದಿದ್ದೀ. ಒಳ್ಳೇದಪ್ಪಾ. ಆದರೆ ಎಷ್ಟೊಂದು ಬದಲಾಗಿದ್ದೀ. ಸರಿಯಾಗಿ ಗುರುತೇ ಹತ್ತುತ್ತಿಲ್ಲ" ಅವರಲ್ಲಿ ಒಬ್ಬಾತ ಹೇಳಿದ.

**ಫಾತುಮಾಬೀಬಿಯ ಒಬ್ಬನೇ ಮಗ ಜಾವೇದ ಊರಿಗೆ ವಾಪಸ್ಸು ಬಂದಾಗ ಇಡೀ ಊರು ಸಮಾಧಾನಗೊಂಡಿತು. ಫಾತುಮಾಬೀಬಿಗಂತೂ ಪ್ರಾಣ ಬಂದಂತಾಯಿತು. ಆದರೆ ಜಾವೇದ ಮಾತ್ರ ಚಡಪಡಿಸುತ್ತಿದ್ದ.**



"ಹಾಗೇ ಅಲ್ಲವೇ. ನಾನು ಊರುಬಿಟ್ಟು ಆರು ವರ್ಷವಾಯಿತು. ಅದೂ ಕಾಶ್ಮೀರದ ವಾತಾವರಣ. ಅಲ್ಲದೇ ಸೈನ್ಯದ ಕೆಲಸ. ನಾನು ಬದಲಾಗದೆ ಇರುತ್ತೇನೆಯೇ?" ಈತ ಮೆಲುವಾಗಿ ನಕ್ಕ.

"ಒಳ್ಳೆಯದಪ್ಪ ಒಳ್ಳೆಯದು. ನೀನಾದರೂ ಈ ಊರಿಗೆ ಹೆಸರು ತಂದಿ. ನಿನ್ನ ತಾಯಿಗಂತೂ ಒಳ್ಳೆಯ ಹೆಸರು. ನಿನ್ನಂತಹಾ ಮಗನನ್ನು ಪಡೆದ ಆ ತಾಯಿ ಪುಣ್ಯ ಮಾಡಿರಬೇಕು. ನೀನೊಬ್ಬ ಸೈನ್ಯದಲ್ಲಿದ್ದೀ ಎಂದು ಹೇಳಿಕೊಳ್ಳಲು ನಮಗೂ ಹೆಮ್ಮೆ" ಮತ್ತೊಬ್ಬ ಬಾಯ್ತುಂಬಾ ಹೊಗಳಿದ.

"ಧನ್ಯವಾದಗಳು ಮಹನೀಯರೇ, ಈಗ ಎಲ್ಲಕ್ಕಿಂತಲೂ ಮೊದಲು ನನಗೆ ಮನೆ ಸೇರಬೇಕು. ಮನೆ ಸೇರಿ ತಾಯನ್ನೊಮ್ಮೆ ನೋಡಬೇಕು. ನೋಡಿ ಆಶೀರ್ವಾದ ಪಡೆಯಬೇಕು" ಒಂದು ಕ್ಷಣ ಮಾತು ನಿಲ್ಲಿಸಿ ನಂತರ ಹೇಳಿದ, "ಯಾರಾದರೂ ಈ ಲಗ್ಗೇಜನ್ನು ಎತ್ತಿಕೊಳ್ಳ

ಬೇಕಲ್ಲ."

"ಅದಕ್ಕೇನು ನಾ ಎತ್ತಿಕೊಳ್ಳುತ್ತೇನೆ" ಎಂದೊಬ್ಬ ಸೂಟ್‌ಕೇಸನ್ನು ಎತ್ತಿ ತಲೆಯ ಮೇಲೆ ಇಟ್ಟುಕೊಂಡು, "ನೀ ಮುಂದೆ ನಡೆ ಜಾವೇದ" ಎಂದ.

ಈತನಿಗೆ ನಿಜಕ್ಕೂ ದಾರಿ ಗೊತ್ತಿರಲಿಲ್ಲ. ಆತ 'ಮುಂದೆ ನಡೆ ಜಾವೇದ' ಎಂದಾಗ ಈತನಿಗೆ ದಿಗಿಲೆನಿಸಿತು. ತಾನು ಯಾವ ದಾರೀಲಿ ನಡೆಯಲಿ, ಯಾವ ಮನೆಗೆಂದು ಹೋಗಲಿ ಎಂದುಕೊಂಡವ ತಿರುಗಿ ನಿಂತು ಹೇಳಿದ, "ನೀವು ಮುಂದೆ ನಡೀರಿ. ನಾ ನಿಮ್ಮ ಹಿಂದೆಯೇ ಹೆಜ್ಜೆ ಹಾಕುತ್ತೇನೆ."

"ಸರಿ" ಹಾಗೆಂದ ಆತ ಮುಂದಕ್ಕೆ ಹೆಜ್ಜೆ ಹಾಕಿದ. ಜಾವೇದನಿಗೆ ನಿರಾಳವೆನಿಸಿತು. ಅಲ್ಲಿ ಉಳಿದ ಮೂವರಿಗೆ ಕೈಯಾಡಿಸಿ, "ಇನ್ನು ಮುಂದೆ ಕಾಣುತ್ತಿರೋಣ" ಎಂದು ಆತನ ಹಿಂದೆ ನಡೆಯ ತೊಡಗಿದ.

ಈತ ಎಣಿಸಿದ್ದ, ಮನೆ ಹತ್ತಿರವೇ ಇರಬಹುದು! ಆದರೆ ಹಾಗೇನೂ ಆಗಿರಲಿಲ್ಲ. ಆತ ಬಿರುಸಾಗಿ ನಡೆಯುತ್ತಿದ್ದ. ಸುಮಾರು ಹದಿನೈದು ನಿಮಿಷಗಳಿಂದ ಅವರು ನಡೆಯುತ್ತಿದ್ದರು. ಗುಡ್ಡ–ಕಾಡು, ಕಣಿವೆ–ಕಂದರಗಳಲ್ಲಿ ಓಡಿಯಾಡಿದ ಈತನಿಗೆ ಈ ಕಾಲುದಾರಿಯಲ್ಲಿ ನಡೆಯುವುದು ಅಷ್ಟೇನೂ ತ್ರಾಸದಾಯಕವಾಗಿರಲಿಲ್ಲ. ಈತನೂ ಆತನ ಹಿಂದೆಯೇ ಉತ್ಸಾಹದ ಹೆಜ್ಜೆ ಹಾಕುತ್ತಿದ್ದ.

ದಾರಿ ನಡೆಯುತ್ತಿದ್ದಂತೆ ಲಗ್ಗೇಜು ಹೊತ್ತಿದ್ದ ಆತ ಕೇಳಿದ,

"ನೀವು ಸೈನಿಕರು; ಯುದ್ಧ ಹೇಗೆ ನಡೆಯುತ್ತಿದೆ? ನಿಮಗೆ ವೈರಿಗಳ ಭಯ ಕಾಡುವುದಿಲ್ಲವೇ?"

"ಯುದ್ಧ ಹೇಗೆ ನಡೆಯುವುದೆಂದು ನಾ ಸರಿಯಾಗಿ ನೋಡಿಲ್ಲ. ನಮಗೆ ಯುದ್ಧದ ಅನುಭವ ಬಂದೇ ಇಲ್ಲ. ಅಕಸ್ಮತ್ತಾಗಿ ವೈರಿ ಗಡಿ ರಕ್ಷಣಾ ದಳದವರು ನಮ್ಮ ಗಡಿ ರೇಖೆಯೊಳಗೆ ನುಗ್ಗಿದಾಗ ಸ್ವಲ್ಪ ಗಲಭೆ ಉಂಟಾಗುತ್ತದೆ. ಆದರೂ ಅದು ಭೀಕರವೇ!"

"ನಿಮಗೆ ಸಾವಿನ ಭಯ ಉಂಟಾಗುವು



ದಿಲ್ವೇ?"

"ಸಾವಿನ ಭಯ!?" ಜಾವೇದ ಜೋರಾಗಿ ನಕ್ಕು ಹೇಳತೊಡಗಿದ, "ಸೈನಿಕನಿಗೆ ಸಾವಿನ ಭಯ ಇರಬಾರದು. ಸಾವಿನ ಭಯ ಇದ್ದವ ಸೈನಿಕನಾಗಬಾರದು. ನಮಗೆ ಯುದ್ಧವೆಂದರೆ ಆಟ ಇದ್ದ ಹಾಗೆ. ಅದರಲ್ಲೂ ದೇಶಕ್ಕಾಗಿ ಹೋರಾಡುವುದೆಂದರೆ ಮನದಲ್ಲಿ ಕೆಚ್ಚು ಮೂಡುತ್ತೆ. ಎದೆಗುಂಡಿಗೆ ಗಟ್ಟಿಯಾಗಿದ್ದವನೇ ಸೈನಿಕನಾಗುತ್ತಾನೆ. ಯುದ್ಧದಲ್ಲಿ ಹೋರಾಡಿ ಜಯಶಾಲಿಯಾಗುವುದು ಅಥವಾ ವೀರಮರಣ ವನ್ನಪ್ಪುವುದು ಸೈನಿಕನಿಗೆ ಶ್ರೇಷ್ಠವಾದುದೇ" ಎಂದವ ಮತ್ತೆ ಗದ್ಗದಿತನಾಗಿ ಹೇಳಿದ.

"ವೀರಮರಣ? ನನ್ನ ಜೀವದ ಗೆಳೆಯ ನ್ನೊಬ್ಬ ವೀರಸ್ವರ್ಗವನ್ನಪ್ಪಿದ. ವೈರಿ ಗಡಿ ರಕ್ಷಣಾ ದಳದ ಗುಂಡಿಗೆ ಬಲಿಯಾಗಿ ವೀರಸ್ವರ್ಗವನ್ನಪ್ಪಿದ! ಆತ ನನ್ನ ಜೀವಕ್ಕೆ ಜೀವ ಕೊಡೋ ಗೆಳೆಯ ನಾಗಿದ್ದ. ಬಹುಶಃ ನನ್ನಂತೆಯೇ ಇದ್ದ..."

"ಓ್ಹ!" ಎದುರು ನಡೆಯುತ್ತಿದ್ದವ ಒಂದು ಕ್ಷಣ ನಿಂತು ಮರುಕ ವ್ಯಕ್ತಪಡಿಸಿ, "ಛೇ... ಹಾಗಾಗಬಾರದಿತ್ತಲ್ವೇ. ಆತ್ಮೀಯ ಮಿತ್ರನ ಸಾವು ಎಂತಹವರನ್ನೂ ಘಾಸಿಗೊಳಿಸುತ್ತದೆ ಅಲ್ಲವೇ?"

ಸ್ವಲ್ಪ ಹೊತ್ತಿನ ಮೌನದ ನಡಿಗೆಯ ನಂತರ ಈತ ಕೇಳಿದ.

"ಉಮ್ಮಾ ಹೇಗಿದ್ದಾರೆ? ಈ ಆರು ವರುಷ ದಲ್ಲಿ ಎಷ್ಟು ಬದಲಾಗಿದ್ದಾರೋ ಏನೋ!"

"ಹುಂ.... ಆರಂಭದ ವರುಷಗಳಲ್ಲಿ ನಿನ್ನ ಬಗ್ಗೆ ಹೆಚ್ಚು ಚಿಂತಿತರಾಗಿದ್ದರು. ಆದರೆ ಕ್ರಮೇಣ ನಿನ್ನ ಕಾಗದಗಳಿಂದ ಅವರು ಸಾದಾ ಸ್ಥಿತಿಗೆ ಬರತೊಡಗಿದರು. ಆದರೆ ಈ ಎರಡು ವರ್ಷಗಳಿಂದ ಅವರಿಗೆ ದೃಷ್ಟಿಗೋಚರವಾಗುವು ದಿಲ್ಲ!"

"ಏನು? ದೃಷ್ಟಿಹೀನತೆಯೇ... ಓ್ಹ... ಅವ ರಿಗೆ ನನ್ನನ್ನು ನೋಡುವ ಶಕ್ತಿಯೇ ಹೊರಟು ಹೋಗಿದೆಯೇ?" ಈತ ಚಿಂತಿತನಾದವನಂತೆ ಕಂಡ.

"ಹೌದು!" ಎಂದು ಆತ ಮತ್ತೆ ಕೇಳಿದ. "ಈ ಆರು ವರ್ಷಗಳಲ್ಲಿ ನಿನಗೆ ಒಮ್ಮೆಯಾದರೂ ಊರಿಗೆ ಬರಬೇಕೆಂದು ಅನಿಸಲಿಲ್ವೇ?"

"ಊರಿನ ನೆನಪು ಕಾಡುತ್ತಿತ್ತು. ರಜೆಯೂ ಸಿಗುತ್ತಿತ್ತು. ಆದರೆ ಏನೋ ಒಂದು ಕಾರಣದಿಂದ ನನಗೆ ಬರಲಾಗುತ್ತಿರಲಿಲ್ಲ."

ಈಗ ಅವರಿಬ್ಬರೂ ಒಂದು ಮನೆಯ ಮುಂದೆ ನಿಂತಿದ್ದರು. ಆತ ಲಗ್ಗೇಜನ್ನು ಕೆಳಗಿರಿಸಿ, "ಫಾತುಮಾ ಬೀಬೀ" ಎಂದು ಕರೆದ. ಒಳಗಿಂದ "ಯಾರೂ?" ಎನ್ನುವ ಪ್ರಾಯದ ಹೆಂಗಸಿನ ಸ್ವರ ಕೇಳಿಸಿತು. ಆ "ಯಾರೂ?" ಎನ್ನುವ ಮಾತು ಕೇಳಿಸಿದಾಗ ಈತ ರೋಮಾಂಚಿತನಾದ. ತನಗೆ ಏನೂ ಅಲ್ಲದ ಹೆಂಗಸು ಬಾಗಿಲಿಗೆ ಬಂದೊಡನೆ ತನ್ನ ಹೆತ್ತ ತಾಯಿಯಂತೆ ಭಾವಿಸಿ, ಮಗನಂತೆ 'ಅಮ್ಮಾ' ಎಂದು ಕರೆದು ಆಕೆಯ ಕಾಲಿಗೆ ಬೀಳ ಬೇಕೆಂಬುದನ್ನು ಯೋಚಿಸಿಕೊಂಡು ರೋಮಾಂಚಿತ ನಾದ.

ಜಾವೇದ ಮೆಟ್ಟಿಲು ಹತ್ತಿ ಒಳಬರುವುದಕ್ಕೆ ಸರಿಯಾಗಿ ಒಳಗಿಂದ ಆ ಹೆಂಗಸು ಹೊರಗೆ ಹೆಜ್ಜೆ ಇರಿಸಿದರು. ಈತ ಒಮ್ಮೆಲೆ ಕಾಲಿಗೆ ಬಿದ್ದು, "ಅಮ್ಮಾ" ಎಂದ. ಆಕೆ ಕಾಲಿಗೆ ಬಿದ್ದವನನ್ನು ಹಿಡಿದೆತ್ತಿ, "ಯಾರು? ನೀನ್ಯಾರಪ್ಪಾ?" ಎಂದು ಪ್ರಶ್ನಿಸಿದಳು.

"ನಾನಮ್ಮಾ ನಿನ್ನ ಮಗ ಜಾವೇದ. ಈಗ ಬರ್ತಾ ಇದ್ದೇನೆ?"

ಆಕೆಯ ದೃಷ್ಟಿಹೀನ ಕಂಗಳಲ್ಲಿ ಒಮ್ಮೆಲೆ ಕಂಬನಿ ಸುರಿಯಲಾರಂಭಿಸಿತು. ಅದು ಆನಂದದ ಕಣ್ಣೀರು. ಅನೇಕ ವರ್ಷಗಳ ಬಳಿಕ ಮಗ ತಾಯಿಯ ಬಳಿ ಬಂದನೆಂಬ ಸಂಭ್ರಮದಿಂದ ಆಕೆ ಅವನನ್ನು ತಬ್ಬಿಕೊಂಡು ಆತನ ಹಣೆಯನ್ನು ಮುದ್ದಿಸಿ ಆತನ ಮೈ-ಕೈಗಳನ್ನೆಲ್ಲಾ ತಡವತೊಡಗಿ ದಳು. ಜಾವೇದ ಆಕೆಯ ಸ್ಪರ್ಶದಿಂದ ಪುಳಕಿತ ನಾದ. ಎಂದೂ ಕಾಣದ ತಾಯ ಪ್ರೀತಿ ವಾತ್ಸಲ್ಯದ ಅಪ್ಪುಗೆಯಲ್ಲಿ ಈತನ ಕಣ್‌ತುಂಬಿ ಬಂತು.

"ಮಗೂ ಜಾವೇದ, ಎಷ್ಟು ಬೆಳೆದುಬಿಟ್ಟಿ ದ್ದೀಯೇ ನೀನು" ಆಕೆ ಮಗನನ್ನು ಅಭಿಮಾನ ದಿಂದ ಕೊಂಡಾಡಿದಳು.

"ನಾವು ಗಡಿರಕ್ಷಣಾದಳದಲ್ಲಿರುವವರು ಉಮ್ಮಾ. ಒಳ್ಳೇ ನರಪೇತಲನಂತಿದ್ದರೆ ಆಗು ತ್ತದೆಯೇ? ಜವಾನ ಅಂದರೆ ಬೇಕಾದಷ್ಟು ತಿಂದು ಒಳ್ಳೇ ಗಟ್ಟಿಮುಟ್ಟಾಗಿರಬೇಕು."

"ಮಗೂ.... ನಿನ್ನ ಸ್ವರವೇ ತುಂಬಾ ಬದ ಲಾಯಿಸಿಬಿಟ್ಟಿದೆಯಲ್ಲೊ!?"

ಈತ ಒಮ್ಮೆಲೆ ಬೆವರಿದ. ಆದರೂ ಸಾವರಿಸಿಕೊಂಡು ಹೇಳಿದ, "ಇಲ್ಲಮ್ಮಾ... ಐದಾರು ವರ್ಷಗಳ ನಂತರ ನೀನು ನೋಡುತ್ತಿದ್ದಿ. ನಿನಗೆ ಹಳೆಯ ನನ್ನ ಸ್ವರ ನೆನಪಿನಲ್ಲಿ ಉಳಿಯುತ್ತದೆಯೇ?"

"ಹುಂ... ಮರೆವು ಇರಬಹುದು. ಅಂತೂ ನೀ ಬಂದಿಯಲ್ಲ. ಅದೇ ನನಗೆ ಸಂತೋಷ. ಒಳಗೆ ಬಾ."

ಲಗ್ಗೇಜು ಹೊತ್ತು ತಂದ ವ್ಯಕ್ತಿ ಇನ್ನೂ ಅಲ್ಲೇ ಇದ್ದ. ತಾಯಿ–ಮಗನ ಪ್ರೀತಿ ವಾತ್ಸಲ್ಯಕ್ಕೆ ಮೂಕ ವಿಸ್ಮಿತನಾಗಿದ್ದ.

ಜಾವೇದ ಆತನನ್ನು ಕರೆದ, "ಬಾ ಸ್ವಲ್ಪ ಹೊತ್ತು ಇದ್ದು ಚಹಾ ಕುಡಿದು ಹೋಗುವಿಯಂತೆ."

"ಬೇಡ ಜಾವೇದ... ನಾನಿಂದು ತಾಯಿಯ ನಿಜವಾದ ಪ್ರೀತಿಯನ್ನು ಕಂಡೆ. ನಿನ್ನ ತಾಯಿಯ ಕಂಗಳಲ್ಲಿ ಒಸರಿದ ಆನಂದಾಶ್ರು ನೋಡಿದೆಯಾ, ಎಂತಹ ಮಧುರ ಮಿಲನವಾಗಿತ್ತದು."

ಆತ ಹೊರಟು ನಿಂತಾಗ ಜಾವೇದ ಹತ್ತು ರೂಪಾಯಿಯ ನೋಟೊಂದನ್ನು ತುರುಕಿದ. ಆತ ಅದನ್ನು ಹಿಂದಿರುಗಿಸುತ್ತಾ ಹೇಳಿದ, "ಮನುಷ್ಯನಿಗೆ ಯಾವತ್ತೂ ಹಣ ಮುಖ್ಯವಲ್ಲ. ಸ್ನೇಹ ವಿಶ್ವಾಸ ಮುಖ್ಯ!"

ಆತ ಹೊರಟು ಹೋದ ಮೇಲೆ ಜಾವೇದ ಒಳಬಂದ. ಆಕೆ ಅಡಿಗೆ ಮನೆಯಲ್ಲಿದ್ದರು. ಈತ ಪ್ಯಾಂಟು, ಶರ್ಟ್ ಬಿಚ್ಚಿ ಲುಂಗಿ ಸುತ್ತುವ ವೇಳೆ ಆಕೆ ಕಾಯಿಸಿ, ಸಕ್ಕರೆ, ಏಲಕ್ಕಿ ಹಾಕಿದ ದನದ ಹಾಲನ್ನು ತಂದು ಆತನಿಗೆ ಕೊಟ್ಟು, 'ಕುಡಿ' ಅಂದರು. ಈತ ಕುಡಿದಾದ ಮೇಲೆ ಗದ್ಗದಿತಳಾಗಿ ಹೇಳಿದಳು. "ಮಗೂ ಜಾವೇದ, ಈ ಆರು ವರ್ಷಗಳ ಮೇಲೆ ತಾಯಿಯನ್ನು ನೋಡಬೇಕೆಂಬ ಮನಸ್ಸಾಯಿತೇ ನಿನಗೆ!"

"ಮಾಪು ಕೊಡು ಉಮ್ಮಾ! ನಾನಿರುವುದು ಗಡಿ ರಕ್ಷಣಾ ದಳದಲ್ಲಿ. ಎಷ್ಟೋ ಸಾರಿ ಬರಬೇಕೆಂದಿದ್ದೆ, ಆದರೆ ಬರಲಾಗುತ್ತಿರಲಿಲ್ಲ. ಒಟ್ಟಿನಲ್ಲಿ ಈಗ ಬಂದಿದ್ದೆನಲ್ಲ. ನೀ ಸಂತೋಷಪಡಬೇಕು."

"ಸಂತೋಷಪಡುತ್ತಿದ್ದೇನೆ ಮಗೂ. ಆದರೆ ನಿನ್ನನ್ನು ಕಣ್ತುಂಬಾ ನೋಡಬೇಕೆನಿಸುತ್ತೆ. ಆದರೆ ಈ ಹಾಳಾದ ದೃಷ್ಟಿ ಎಂದೋ ಸತ್ತುಹೋಗಿದೆ!" ಆಕೆ ಬಿಕ್ಕಿಬಿಕ್ಕಿ ಅಳತೊಡಗಿದರು.

"ದೃಷ್ಟಿಯ ಬಗ್ಗೆ ಯೋಚಿಸಬೇಡ ಉಮ್ಮಾ. ಯಾರಾದರೂ ಒಳ್ಳೆಯ ವೈದ್ಯರಿಗೆ ತೋರಿಸಿ ದೃಷ್ಟಿ ಕಾಣಿಸೋ ಹಾಗೇ ಮಾಡೋಣ."

"ಮಗೂ, ನಿನ್ನ ಗೆಳೆಯ ರವಿಯ ಬಗ್ಗೆ ಕಾಗದ ಬರೆಯುತ್ತಿದ್ದೀಯಲ್ಲಾ. ಆತ ಈಗ ಹೇಗಿದ್ದಾನೆ? ಆತ ನನ್ನನ್ನು ತುಂಬಾ ಕೇಳ್ತಾ ಇರಬೇಕಲ್ಲ?"

ಈತ ಒಮ್ಮೆಲೆ ಗದ್ಗದಿತನಾದ. ಕಣ್ಣಲ್ಲಿ ನೀರು ತುಂಬಿತು. ಕಷ್ಟಪಟ್ಟುಕೊಂಡು ದುಃಖವನ್ನು ತಡೆಹಿಡಿದುಕೊಂಡು ಹೇಳಿದ, "ಚೆನ್ನಾಗಿದ್ದಾನೆ ಉಮ್ಮಾ. ಆತನೂ ಆರೋಗ್ಯವಾಗಿದ್ದಾನೆ."

"ದೇವರು ಅವನನ್ನು ಆರೋಗ್ಯವಾಗಿಟ್ಟಿರಲಿ."

ಹತ್ತಿರದ ಮಸೀದಿಯಿಂದ ನಮಾಜಿನ ಅಝ್ಹಾನ್ ಕೇಳಿ ಬಂತು. ಆಕೆ ಆತನ ಬಳಿಯಿಂದ ಗಡಬಡಿಸಿ ಎದ್ದರು. "ಮಗೂ, ನಾನು ನಮಾಜಿಗೆ ಹೋಗುತ್ತಿದ್ದೇನೆ. ಆ ಅಲ್ಲಾಹನ ಧ್ಯಾನ ನನಗೆ ಕರಾರುವಾಕ್ಕಾಗಿ ಪಾಲಿಸಿಕೊಂಡು ಬರಲೇಬೇಕು." ಆತ ಸುಮ್ಮನೆ ಕುಳಿತಿದ್ದ. ಆಕೆ ಮತ್ತೂ ಹೇಳಿದರು, "ನೋಡು, ಒಳಗೆ ಬಿಸಿ ನೀರು ಕಾಯಿಸಿ ಇಟ್ಟಿದ್ದೇನೆ. ಕೊಳೆಹೋಗುವಂತೆ ಸ್ನಾನ ಮಾಡಿ ಬಾ."

ಆತ ಟವಲ್ ತೆಗೆದುಕೊಂಡು ಬಾತ್ ರೂಮಿಗೆ ಹೋದ. ಸ್ನಾನ ಮಾಡಿ ಬಂದಾಗ ಆಕೆ ನಮಾಜಿನ ಕ್ರಿಯೆಯಲ್ಲಿ ತೊಡಗಿದ್ದರು. ಬಿಳಿ ವಸ್ತ್ರಧರಿಸಿ ದೇವರ ಧ್ಯಾನದಲ್ಲಿ ಮಗ್ನವಾಗಿದ್ದ ಅವರನ್ನು ನೋಡುತ್ತಾ ನಿಂತ ಅವನಿಗನ್ನಿಸಿತು. 'ಈ ಧ್ಯಾನಮೂರ್ತಿಗೆ ನಾನು ಸುಳ್ಳು ಹೇಳುತ್ತಿದ್ದೇನೆಯೇ. ನಾನು ಆಕೆಯ ಮಗನಂತೆ ನಟಿಸುತ್ತಿದ್ದೇನೆ. ಆಕೆ ನನ್ನನ್ನು ಮಗನೆಂದೇ ತಿಳಿದಿರಬಹುದು. ಆಕೆಯ ಹೃದಯದಲ್ಲಿ ಎಷ್ಟು ಕನಸುಗಳಿವೆಯೋ ಬಲ್ಲವರಾರು? ಆ ಕನಸುಗಳನ್ನೆಲ್ಲ ನಾನು ಹುಸಿಗೊಳಿಸುತ್ತಿದ್ದೇನೆಯೇ?"

ಆಕೆ ನಮಾಜಿನ ಕ್ರಿಯೆಯಿಂದ ಎಚ್ಚೆತ್ತರು. ಈತ ಹೊರ ಬಂದು ಹಜಾರದಲ್ಲಿ ಕುಳಿತು ಹೊರಗೆ ಅಪರಿಚಿತವಾದ ಊರನ್ನು ದಿಟ್ಟಿಸ ತೊಡಗಿದ. ಅಲ್ಲಲ್ಲಿ ಕಾಣುತ್ತಿರುವ ಹಂಚಿನ ಮನೆಗಳು. ತೆಂಗು-ಕಂಗಿನ ತೋಟಗಳು. ಎಷ್ಟು ಸಮೃದ್ಧವಾಗಿದೆ ಆ ಹಳ್ಳಿ. ಎಷ್ಟು ಹಿತವಾಗಿದೆ

ಈ ಹಳ್ಳಿಯ ವಾತಾವರಣ. ಇಲ್ಲೇ ಇದ್ದು ಬಿಡೋಣ ಅನಿಸುತ್ತದೆ. ಈಕೆಯಲ್ಲಿ ತಾಯಿಯ ಪ್ರೀತಿಯನ್ನು ಕಂಡು, ಈ ತಾಯಿಗೆ ತಾನೇ ಆಕೆಯ ಮಗ ಎಂದು ಶಾಶ್ವತವಾಗಿ ನಂಬುವಂತೆ ಇಲ್ಲೇ ಯಾಕೆ ಉಳಿದುಬಿಡಬಾರದು.

ಆತ ನಿಂತಿದ್ದಲ್ಲಿಗೆ ಆಕೆ ಬಂದರು.

"ಜಾವೇದ್, ನೀ ಮೊದಲಿನದ್ದೆಲ್ಲಾ ಮರೆತು ಬಿಟ್ಟಿದ್ದೆಯೇ?"

"ಏನಮ್ಮಾ ಅದು?" ಆತ ಕಂಗಾಲಾಗಿ ಕೇಳಿದ.

"ನೀ ನಮಾಜನ್ನೇ ಮಾಡಿಲ್ಲ. ದೇವರ ಧ್ಯಾನವನ್ನೇ ಮರೆತುಬಿಟ್ಟಿದ್ದೀ."

"ಓ!" ಆತ ಮರುಗಿ ತತ್‌ಕ್ಷಣ ಹೇಳಿದ. "ಅದ್ಹೇಗೆ ಮರೆಯುತ್ತೇನೆ ನಾನು. ನಾ ಅದನ್ನು ಮರೆಯುವುದು ಸಾಧ್ಯವೇ ಇಲ್ಲ!"

"ನೀ ಒಬ್ಬ ಸೈನಿಕ. ದೇಶದ ಗಡಿಯ ಕಾವಲು ಗಾರ. ದೇಶಭಕ್ತಿ ನಿನ್ನಲ್ಲಿರುವಷ್ಟೇ ನಿನಗೆ ದೇವರ ಭಕ್ತಿಯೂ ಇರಬೇಕು."

ಆತ ಹಾಗೆ ಹೇಳಿದ್ದೇನೋ ನಿಜ. ಆದರೆ ಆತನಿಗೆ ನಮಾಜಿನ ಕ್ರಿಯೆಯೆಂದೂ ಗೊತ್ತಿರಲಿಲ್ಲ. ಆತ ದೇವರ ಬಗ್ಗೆ ನಂಬಿಕೆ ಇರಿಸಿಕೊಂಡಿರಲಿಲ್ಲ. ಹಾಗೆಂದು ನಾಸ್ತಿಕನಾಗಿರಲಿಲ್ಲ. ಗಡಿ ರಕ್ಷಣಾ ದಳದಲ್ಲಿದ್ದುಕೊಂಡು ದೇಶಕ್ಕಾಗಿ ಹೋರಾಡುತ್ತಿದ್ದ. ತನ್ನ ಬಗ್ಗೆ ಅವನಿಗೆ ಉಜ್ವಲವಾದ ನಂಬಿಕೆ ಇತ್ತು. ಸ್ವಾಭಿಮಾನ ಆತನಲ್ಲಿ ತುಂಬಿ ತುಳುಕುತ್ತಿತ್ತು.

ಆಕೆ ಒಳಗೆ ಹೊರಟುಹೋದರು. ಈತ ಕೈಕಾಲು ಶುದ್ಧಿಯಾಗಿಸಿಕೊಂಡು ಬಂದು ಕೋಣೆಯೊಳಗೆ ಹೋಗಿ ಬಾಗಿಲು ಮುಚ್ಚಿಕೊಂಡ. ಆಕೆಗೆ ಅನಿಸಿತು, "ಮಗ ಇನ್ನೂ ದೇವರ ಪ್ರೀತಿಯನ್ನು ಕಳಕೊಂಡಿಲ್ಲ!"

ಆದರೆ ಆತ ಯೋಚಿಸಿದ, "ತಾಯಿಗೆ ದೃಷ್ಟಿ ಗೋಚರವಾಗುವುದಿಲ್ಲ. ಆದರೆ ನಾನು ನಮಾಜು ಮಾಡದಿರುವುದು ಆಕೆಗೆ ಹೇಗೆ ಗೊತ್ತಾಯ್ತು!"

ರಾತ್ರಿ, ಪ್ರಯಾಣದ ಆಯಾಸದಿಂದ ಆತ ಬಳಲಿ ಮಲಗಿ ನಿದ್ರಿಸಲೆತ್ನಿಸಿದ. ಆದರೆ ಅವನ ಮನ ಇಲ್ಲಿಗೆ ಬಂದ ಬಗೆಯನ್ನು ಯೋಚಿಸುತ್ತಿತ್ತು. ಆತನ ನೆನಪಿನಾಳದಲ್ಲಿ ಜಾವೇದನ ಮಾತುಗಳು, ನೆನಪುಗಳು ಮೂಡಿ ಬರತೊಡಗಿದವು.

* * *

## ಯೌವನ

ಹೆಡೆಬಿಚ್ಚಿ ಬೋರ್ಗರೆದು  
ಹಮ್ಮು-  
ಹೊಮ್ಮಿ, ರಂಗಾಗಿ  
ಭಾವನೆಗಳ ಕಟ್ಟೊಡೆದು  
ಲಯ-ಬದ್ಧತೆಯಿಲ್ಲದ  
ಭ್ರಮೆ-ಕನಸುಗಳು  
ಅವಿವೇಕ ತಪ್ಪುಹೆಜ್ಜೆಗಳಲ್ಲಿ  
ಕುಣಿದು, ಕುಪ್ಪಳಿಸಲು  
ಬದುಕು ಸೃಷ್ಟಿಸಿದ  
ಮಹಾನ್ ರಂಗಸ್ಥಳ!

● ಸುಜಾತಾ ಲಕ್ಮನೆ, ಸಾಗರ

ಈತ ರವಿ. ತಂದೆ–ತಾಯಿ ಯಾರೆಂದು ಗೊತ್ತಿಲ್ಲದೆ ಅನಾಥಾಶ್ರಮದಲ್ಲಿ ಬೆಳೆದ. ಅನಾಥಾಶ್ರಮದಲ್ಲಿ ಬೆಳೆಯುತ್ತಾ ಓದುವ ವೇಳೆಗೆ ಈತನಿಗೆ ದೇಶದ ಬಗ್ಗೆ ವಿಚಿತ್ರ ಹಂಬಲ ಕಾಡತೊಡಗಿತು. ದೇಶದ ಗಡಿರಕ್ಷಣಾ ಇಲಾಖೆಯಲ್ಲಿ ಸೇರಿಕೊಳ್ಳುವ ಆಸಕ್ತಿ ಹೆಚ್ಚಾದಂತೆ ಆತ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹಲವಾರು ವೀರರ ದಿನಚರಿಯನ್ನು ಓದಿ ಮನನ ಮಾಡಿಕೊಂಡ. ಅವನಲ್ಲಿ ಕೆಚ್ಚು ತನ್ನಿಂತಾನೇ ತುಂಬಿಕೊಳ್ಳತೊಡಗಿತು. ಎದೆಯಲ್ಲಿ ಹೋರಾಟದ ನಗಾರಿ ಬಾರಿಸತೊಡಗಿತು. ಓದು ಮುಗಿಸಿದ ಕೂಡಲೇ ಆತ ಬೋರ್ಡರ್ ಸೆಕ್ಯೂರಿಟಿ ಫೋರ್ಸ್ (ಬಿ.ಎಸ್.ಎಫ್.)ನಲ್ಲಿ ಸೇರಿಕೊಂಡ.

ಬಿ.ಎಸ್.ಎಫ್. ಇಲಾಖೆಯಲ್ಲಿ ಆತ ನಗುಮುಖದ ಯುವಕನೋರ್ವನನ್ನು ಭೇಟಿಯಾದ. ಸದಾ ಹುರುಪು–ಹುಮ್ಮಸ್ಸಿನಿಂದ ತುಂಬಿ ತುಳುಕುತ್ತಿದ್ದ ಯುವಕ. ಈತನಷ್ಟೇ ಎತ್ತರ. ಸಾಧಾರಣ ಈತನದೇ ವಯಸ್ಸು. ಇನ್ನೂ ಅಚ್ಚರಿಯೆಂದರೆ ಈತನದೇ ಚಹರೆ. ಮೊದಲ ದಿನವೇ ಆತ ಇವನನ್ನು ಭೇಟಿಯಾಗಿ ತನ್ನನ್ನು 'ಜಾವೇದ' ಎಂದು ಪರಿಚಯಿಸಿಕೊಂಡ. ರವಿಗೊಬ್ಬ ಸ್ನೇಹಿತನ ಅಗತ್ಯವಿತ್ತು. ಅಂತಹ ಒಳ್ಳೆಯ ಮಿತ್ರನೇ ಸಿಕ್ಕಿದ.



ಎಂಪಿಗಳ ಜೊತೆ ಪತ್ನಿಯಂದಿರು ಸಂಸತ್ ಪ್ರವೇಶಿಸುವ ಸಂಪ್ರದಾಯವೇ ಇಲ್ಲ ಅಂದ್ರೆ ಕೇಳೋಲ್ವಲ್ಲಾ ನೀನು...

ಜಾವೇದ ಒಂದು ವರ್ಷದಷ್ಟು ಬೋರ್ಡ್ ಸೆಕ್ಯೂರಿಟೀ ಇಲಾಖೆಯ ಅನುಭವಿ. ಆತ ರವಿಯಲ್ಲಿ ಧೈರ್ಯ ತುಂಬಿದ. ವೈರಿ ಪಡೆಯವರು ಹೇಗೆ ಗಡಿ ದಾಟಿ ಒಳ ನುಸುಳುತ್ತಾರೆ ಮತ್ತು ಅವರನ್ನು ಹೇಗೆ ಹಿಮ್ಮೆಟ್ಟಿಸುವುದು ಇವನ್ನೆಲ್ಲಾ ವರ್ಣಿಸಿದ. ಆತನ ವರ್ಣನೆಯನ್ನು ಕೇಳುತ್ತಾ, ಆತ ಇಲಾಖೆಯಲ್ಲಿ ದಿಟ್ಟ ಸೈನಿಕನೆಂಬುದನ್ನು ಪ್ರತ್ಯಕ್ಷವಾಗಿ ಕಂಡ ಮೇಲೆ ಅವನ ಬಗ್ಗೆ ವಿಶೇಷ ಅಭಿಮಾನ ಉಂಟಾಯಿತು.

ಅಂದಿನಿಂದ ಅನಂತರದ ಐದು ವರುಷಗಳಲ್ಲಿ ರವಿ–ಜಾವೇದ ಒಬ್ಬರನ್ನೊಬ್ಬರು ಅಗಲಲಾರದಷ್ಟು ಆತ್ಮೀಯರಾಗಿ ಬಿಟ್ಟಿದ್ದರು. ಜಾವೇದ ಉಮ್ಮಳಿಗೆ ಕಾಗದ ಬರೆಯುತ್ತಿದ್ದ. "ಉಮ್ಮಾ... ಇಲ್ಲಿ ರವಿಯೆಂಬ ಆತ್ಮೀಯ ಸೋದರ ಸಿಕ್ಕಿದ್ದಾನೆ..." ಹೀಗೆ ಇನ್ನೂ ರವಿಯ ಬಗ್ಗೆ ಹೊಗಳಿ ಬರೆಯುತ್ತಿದ್ದ.

ಒಂದು ದಿನ ಸೇನೆಯ ಮುಖ್ಯಸ್ಥ ಅವರಿಬ್ಬರ ಅನ್ಯೋನ್ಯತೆಯನ್ನು, ಅವರ ಹೊಂದಿಕೊಳ್ಳುವ ಚಹರೆಯನ್ನು ನೋಡುತ್ತಾ ಹೇಳಿದ್ದ, "ನೀವಿಬ್ಬರೂ ಒಂದೇ ತಾಯಿ ಹೆತ್ತ ಮಕ್ಕಳಂತೆ ಇದ್ದೀರಿ. ಅಷ್ಟು ಸಾಮ್ಯವಿದೆ ನಿಮ್ಮಲ್ಲಿ!"

ದಿನಗಳು ಕಳೆಯುತ್ತಿದ್ದವು. ಆದರೆ ಇವರಿಗೆ ಗಡಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯಬೇಕಿತ್ತು. ವಿರೋಧಿ ಪಡೆಗಳು ಆಗಾಗ ಗಡಿಯ ಒಳ ನುಗ್ಗಲು ಹವಣಿಸುತ್ತಿದ್ದುವು. ಗಡಿಯೊಳಗೆ ನುಗ್ಗದಂತೆ ಅವರನ್ನು ತಡೆಯಬೇಕಿತ್ತು. ಹಾಗೆ ಒಳ ನುಗ್ಗಿದವರನ್ನು ಸೆರೆಹಿಡಿಯಬೇಕಿತ್ತು. ಹಿಮ್ಮೆಟ್ಟಿಸಬೇಕಿತ್ತು.

ಆ ಒಂದು ರಾತ್ರಿ, ವಿರೋಧಿಗಳಿಂದ ಅಕಸ್ಮತ್ತಾಗಿ ಗುಂಡಿನ ಮಳೆ ಸುರಿಯಲಾರಂಭಿಸಿತು. ಅವರು ಬೇಲಿ ದಾಟುವ ಹವಣಿಕೆಯಲ್ಲಿದ್ದರು. ಇತ್ತ ಕಡೆ ದೇಶೀಯ ಪಡೆಗಳು ಪ್ರಬಲ ಹೋರಾಟವನ್ನೆ ನಡೆಸಿದ್ದುವು. ಎರಡೂ ಕಡೆಯಿಂದಲೂ ಎಡೆಬಿಡದೆ ಗುಂಡಿನ ಹೋರಾಟವೇ ನಡೆಯತೊಡಗಿತ್ತು.

ಕೊನೆಗೂ ಹೋರಾಟ ನಿಂತಿತು. ವೈರಿ ಪಡೆ ಹಿಮ್ಮೆಟ್ಟಿತು. ಕೆಲವರು ಬಂಧಿಗಳಾದರು. ಹಲವರು ಸತ್ತು ಬಿದ್ದಿದ್ದರು. ರವಿ ಉತ್ಸಾಹದಿಂದ ಸುತ್ತಲೂ ನೋಡಿದ. ಅವನ ಎದುರಲ್ಲಿ ಬಂಧಿಗಳಾದ ವಿರೋಧಿ ಸೈನಿಕರಿದ್ದರು. ಆ ಉತ್ಸಾಹವನ್ನು ಜಾವೇದನಲ್ಲಿ ಹಂಚಿಕೊಳ್ಳಬೇಕಿತ್ತು. ಆತ ತನ್ನ ಸಂಗಾತಿಗಳನ್ನು ನೋಡಿದ. ಎಲ್ಲೂ ಜಾವೇದ ಕಾಣಿಸಲಿಲ್ಲ. ಈಗ ಆತ ಗಾಬರಿಗೊಂಡ. "ಜಾವೇದ.... ಜಾವೇದ" ಎನ್ನುತ್ತಾ ಸುತ್ತಲೂ ಓಡಿದ. ಅಲ್ಲೊಂದು ಕಡೆ ಜಾವೇದ ಬಿದ್ದಿರುವುದು ಕಾಣಿಸಿತು. ಆತನ ದೇಹದಲ್ಲಿ ಅನೇಕ ಗುಂಡಿನ ಗುರುತುಗಳು ಇದ್ದುವು. ಆತ ಇನ್ನೂ ಉಸಿರಾಡುತ್ತಿದ್ದ.

"ಜಾವೇದ... ಜಾವೇದ್...." ಈತ ಅವನನ್ನು ಕರೆದ. ಆತ ನಿಧಾನ ಕಣ್ತೆರೆದ. ಆತನನ್ನು ಹೊತ್ತು ತಂದು ಚಿಕಿತ್ಸೆಗೆ ತೊಡಗಿದರು. ಆದರೆ ಅವನಿಗೆ ದೇಹಕ್ಕಾದ ಘಾಸಿ ಭಯಾನಕವಾಗಿತ್ತು. ಒಂದು ಗುಂಡು ಅವನ ಎದೆಯ ಬಳಿಯೇ ಹೊಕ್ಕಿತ್ತು.

ಆತ ನಿಧಾನವಾಗಿ ಮಾತನಾಡತೊಡಗಿದ. ಮಾತುಗಳು ತಡೆ-ತಡೆದು ಬರುತ್ತಿದ್ದುವು. "ರವೀ, ನಾನು ಬದುಕುವೆನೆಂಬ ಭರವಸೆ ನನಗಿಲ್ಲ. ಆದರೆ ನಾನು ಬದುಕಬೇಕಿತ್ತು. ಇಷ್ಟು ಬೇಗ ನಾನು ಸಾಯಬಾರದು. ನನಗಾಗಿ ನನ್ನ ತಾಯಿ ಈ ಆರು ವರ್ಷಗಳಿಂದ ಕಾಯುತ್ತಿದ್ದಾರೆ. ನಾನು ಬರುವೆನೆಂಬ ನಿರೀಕ್ಷೆಯಲ್ಲಿ ಅವರಿರಬಹುದು. ನನ್ನ ಬಗ್ಗೆ ಅದೆಷ್ಟು ಆಸೆಯಿಂದ ಅವರಿದ್ದಿರಬಹುದು. ಈಗ ನಾನಿಲ್ಲ ಎಂದು

ತಿಳಿದರೆ ಅವರ ಸ್ಥಿತಿ ಏನಾಗಬಹುದು?" ಆತ ಈ ನೋವಿನಲ್ಲೂ ಅಳತೊಡಗಿದ.

"ಏನೂ ಆಗೊಲ್ಲ ಜಾವೇದ ನಿನಗೆ... ನೀ ಬದುಕಿ ಉಳಿಯುತ್ತೀಯೇ."

"ನನಗೆ ನಂಬಿಕೆ ಇಲ್ಲ ರವೀ. ನಾನು ಹೇಗೂ ಸಾಯುತ್ತಿದ್ದೇನೆ. ನಿನಗೆ ನನ್ನದೇ ಚಹರೆ ಇದೆ. ನೀನು ನನ್ನ ತಾಯಿಯ ಬಳಿ ಆಕೆಯ ಮಗನಾಗಿ ಹೋಗು. ಜಾವೇದನಾಗಿ ಹೋಗು. ಆಕೆಗೆ ಮಗನಿಲ್ಲ ಎನ್ನುವ ಸಂಶಯ ಸ್ವಲ್ಪವೂ ಬರಬಾರದು. ಹಾಗೇ ಮಾತುಕೊಡುತ್ತೀಯಾ?"

ರವಿ, ಜಾವೇದನ ಕೈಯ ಮೇಲೆ ಕೈ ಇರಿಸಿ ಪ್ರಮಾಣ ಮಾಡಿದ. ಆ ರಾತ್ರಿ ಜಾವೇದ ತುಂಬಾ ನರಳಿದ. ಸಂಗಾತಿಗಳೆಲ್ಲ ಅವನ ಪಕ್ಕವೇ ನಿಂತಿದ್ದರು.

ಮುಂಜಾನೆ ಐದರ ವೇಳೆಗೆ ಹತ್ತಿರದ ಮಸೀದಿಯಿಂದ ನಮಾಜಿನ ಅಝಾನ್ ಕೇಳಿ ಬರತೊಡಗಿತು. ಆ ಕಂಚಿನ ಕಂಠದ ಅಝಾನನ್ನು ಕೇಳುತ್ತಾ, ಕೇಳುತ್ತಾ ಜಾವೇದನ ಪ್ರಾಣ ಆ ಶಬ್ದದೊಂದಿಗೆ ಲೀನವಾಗಿ ಹೋಯಿತು. ಈಗ ಅಲ್ಲಿ ಜಾವೇದನ ಜಡ ದೇಹ ಮಾತ್ರ ಉಳಿಯಿತು.

ರವಿ ಕೆಲವೇ ದಿನಗಳಲ್ಲಿ ಈ ತಾಯಿಯ ಮಗನಾಗಲು ಇಲ್ಲಿಗೆ ಹೊರಟು ಬಂದ.

* * *

ರಾತ್ರಿಯ ನೆನಪು ಅಳಿದು, ನಿದ್ದೆ ಆವರಿಸಿ ಮುಂಜಾನೆ ಎದ್ದಾಗ ತುಂಬಾ ಹೊತ್ತಾಗಿತ್ತು. ತಾಯಿ ಈತನ ಕೋಣೆಯ ಬಳಿ ಬಂದು ಬಾಗಿಲನ್ನು ತಟ್ಟಿ, "ಜಾವೇದ" ಎಂದು ಕರೆದರು. ಈತ ನಿದ್ದೆಯಲ್ಲಿ ಜಾರಿ ಹೋಗಿದ್ದವ ಬಾಗಿಲು ತಟ್ಟುವಿಕೆಯ ಶಬ್ದಕ್ಕೆ ಎಚ್ಚೆತ್ತು ಕಣ್ಣು ತೆರೆದು ನೋಡಿದ. ಬೆಳ್ಳಂಬೆಳಕಾಗಿತ್ತು. ಅಪರಿಚಿತ ಮನೆಯಲ್ಲಿ, ಇನ್ನು ತನ್ನದಾಗುವ ಮನೆಯಲ್ಲಿ ಪ್ರಥಮ ರಾತ್ರಿ ಅಪ್ಪಿಕೊಂಡ ಗಾಢ ನಿದ್ರೆಗೆ ಶಪಿಸುತ್ತಾ ಎದ್ದು ಹೊರಬಂದಾಗ ತಾಯಿ ಬಿಸಿಯಾದ ಚಹಾ ಹಿಡಿದು ನಿಂತಿರುವುದು ಕಾಣಿಸಿತು.

ಚಹಾ ಕಸಿದುಕೊಂಡು ಕುಡಿದಾದ ಮೇಲೆ ಆತ ಅಮ್ಮನನ್ನು ಕೇಳಿದ,

"ಉಮ್ಮಾ ಸ್ನಾನಕ್ಕೆ ನೀರಿದೆಯೇ?"

"ನೀರಿದೆ. ಆದರೆ ನಾನೇ ನಿನ್ನ ಮೈಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತೇನೆ."

"ಬೇಡ ಉಮ್ಮಾ. ನಾನೀಗ ದೊಡ್ಡವನಾಗಿದ್ದೇನೆ. ಬಹುದೊಡ್ಡವನಾಗಿದ್ದೇನೆ. ನನಗೊಬ್ಬನಿಗೆ ಸ್ನಾನ ಮಾಡೋದೆಂದರೆ ಬಹು ಚೆನ್ನ."

"ಇಲ್ಲ ಮಗೂ, ಮೊದಲಿನದನ್ನು ಮರೆತುಬಿಟ್ಟೇಯ. ನಿನಗೆ ನಾನೇ ಸ್ನಾನ ಮಾಡಿಸುತ್ತಿದ್ದೆ. ಈಗ ನೀನು ಜಪ್ಪೆನ್ನದೆ ಒಪ್ಪಿಕೋ."

ಆತ ಒಪ್ಪಿಕೊಳ್ಳದೇ ವಿಧಿಯಿರಲಿಲ್ಲ. ಆತ ಹೊರಗೆ ಬಂದ. ಆಗ ಮನೆಯ ಅಡಿಗೆ ಕೋಣೆಯಿಂದ ಹುಡುಗಿಯೊಬ್ಬಳು ಇಣಿಕಿ ನೋಡುವುದು ಕಾಣಿಸಿತು. ಮೆಲ್ಲನೆ ಇಣುಕುತ್ತಾ ನೋಡುತ್ತಿದ್ದ ಕಂಗಳು. ಅವನಿಗೆ ಅಚ್ಚರಿಯೆನಿಸಿತು. ಏನಾದರಾಗಲೀ ಎಂದವ ನೇರವಾಗಿ ಅಡುಗೆ ಕೋಣೆಗೆ ನುಗ್ಗಿದ. ಅವಳದನ್ನು ನಿರೀಕ್ಷಿಸಿರಲಿಲ್ಲ. ಒಮ್ಮೆಲೇ ಬೆದರಿದ ಹುಲ್ಲೆಯಂತಾದಳು. ಆತ ಅವಳ ಎದುರು ಬಂದು ನಿಂತ. ಸುಮಾರು ಹದಿನೆಂಟು ವರ್ಷದ ನವ ತರುಣಿ. ಮುದ್ದು ಮುಖ, ಜ್ವಾಜಲ್ಯಪೂರ್ಣವಾದ ಕಂಗಳು. ಉದ್ದವಾದ ಕೇಶರಾಶಿ. ಲಂಗ ಧಾವಣಿಯಲ್ಲಿದ್ದಳು. ಅಪೂರ್ವ ಸುಂದರಿ.

"ಯಾರು ಹುಡುಗಿ ನೀನು?" ಈತ ಪ್ರೀತಿಯಿಂದ ಕೇಳಿದ.

ಆಕೆ ಮಾತಾಡಲಿಲ್ಲ. ಹುಡುಗಿ ನಾಚುತ್ತಿದ್ದಳು, ಮುಖವನ್ನು ಕೆಳಗೆ ಹಾಕಿ.

ಅವಳನ್ನು ಹೆಚ್ಚು ತೊಂದರೆಗೆ ಈಡು ಮಾಡುವುದು ಸಭ್ಯತೆ ಅಲ್ಲವೆಂದು ಈತ ಹೊರಗೆ ಬಂದ. ತಾಯಿ ಎಣ್ಣೆ ಹಚ್ಚಲು ಕಾಯುತ್ತಿದ್ದರು. ಅವನ ದೇಹಕ್ಕೆ ತಾಯಿ ಎಣ್ಣೆ ಹಚ್ಚುತ್ತಿದ್ದಂತೆಯೇ ಕೇಳಿದ,

"ಉಮ್ಮಾ... ಆ ಹುಡುಗಿ ಯಾರು?"

"ಆ ಹುಡುಗೀನೇ... ಅದೇ ಅಖ್ತರ್‌ಕಾಕನ ಮಗಳು ಅಸ್ಮಾ..."

"ಯಾವ ಅಖ್ತರ್‌ಕಾಕನ ಮಗಳು?"

"ಆಗಲೇ ಮರೆತುಬಿಟ್ಟಿದ್ದಿಯೇನೋ. ನಿನ್ನ ಮಾವ ಅಖ್ತರ್‌ಕಾಕ. ನೀನು ಇಲ್ಲಿದ್ದಾಗ ನಿನ್ನೊಡನೆ ಆಟ ಆಡಲು ಬರುತ್ತಿದ್ದಳಲ್ಲ ಅದೇ ಹುಡುಗಿ. ಆಗ ಅವಳಿನ್ನೂ ಹತ್ತು–ಹನ್ನೆರಡರ ಹುಡುಗಿ. ಎಷ್ಟು ಗೋಳುಹೊಯ್ದುಕೊಳ್ಳುತ್ತಿದ್ದೆ ನೀನು ಅವಳನ್ನು. ಆದರೆ ಅದೇನು ಅನ್ಯೋನ್ಯತೆ

ಇತ್ತು ನಿಮ್ಮಲ್ಲಿ. ನೀವಿಬ್ಬರೂ ಒಂದೇ ತಟ್ಟೇಲಿ ಊಟ ಮಾಡುತ್ತಿದ್ದಿರಿ. ಅದನ್ನೆಲ್ಲಾ ಅಷ್ಟು ಬೇಗ ಮರೆತುಬಿಟ್ಟೆಯಾ!

ಆತನಿಗೆ ದಿಗಿಲೆನಿಸಿತು.

"ಇಲ್ಲ ಉಮ್ಮ... ಆದರೆ ಇವಳನ್ನು ಅವಳೇ ಎನ್ನುವ ನಂಬಿಕೆ ಬರ್ತಿಲ್ಲ. ಎಷ್ಟು ಬೆಳೆದುಬಿಟ್ಟಿದ್ದಾಳೆ. ದುಂಡಗೆ, ಒಳ್ಳೆ ಮೈ ತುಂಬಿಕೊಂಡು."

"ಹಾಗೇ ಅಲ್ಲವೇ, ಹೆಣ್ಮಕ್ಕಳು ಬೆಳೆಯುವುದು ಬೇಗ ಅಲ್ಲವೇ. ಈ ಹುಡುಗಿ ಇರುವುದರಿಂದ ನನಗೆ ಅದೆಷ್ಟು ಸಹಾಯವಾಗುತ್ತೆ ಗೊತ್ತಾ."

ಆಕೆ ಎಣ್ಣೆ ಸವರುತ್ತಿದ್ದಂತೆ ಈತ ಅಡಿಗೆ ಕೋಣೆಯೆಡೆ ನೋಡಿದ. ಅಸ್ಮಾ ಮತ್ತೆ ಇಣುಕುತ್ತಿದ್ದಳು. ಈತ ಹಾಗೇ ಯೋಚಿಸತೊಡಗಿದ,

'ನಾನು ಇಲ್ಲೇ ಜಾವೇದನಾಗಿ ಇರುವುದರಿಂದ ಈ ಹುಡುಗಿಯನ್ನು ನಾನು ಮದುವೆಯಾಗಬೇಕಾಗಬಹುದು. ಆದರೆ ನಾನು ಜಾವೇದ ಅಲ್ಲ, ರವಿ. ನನಗೊಬ್ಬಳು ಪ್ರೇಯಸಿ ಇದ್ದಾಳೆ, ರೇಣುಕ. ಕಾಶ್ಮೀರದಲ್ಲಿ ಮೆಡಿಕಲ್ ಸ್ಟೂಡೆಂಟ್. ನಾನವಳನ್ನು ಮನಸಾರೆ ಪ್ರೀತಿಸುತ್ತಿದ್ದೇನೆ. ಒಂದು ರೀತಿಯಲ್ಲಿ ನಾನವಳನ್ನು ಗಾಂಧರ್ವ ವಿವಾಹವಾದೆ. ಅವಳು ನನ್ನಲ್ಲಿ ತುಂಬ ಪ್ರೀತಿ ಇಟ್ಟಿದ್ದಾಳೆ. ತಾನೊಂದು ದಿನ ಈ ತಾಯಿಗೆ ನಿಜ ಹೇಳಬೇಕಾಗಿ ಬರಬಹುದು. ನಾನು ಆಕೆಯ ಮಗ ಜಾವೇದ ಅಲ್ಲ, ರವಿ ಎಂಬುದು. ಆದರೆ ಆ ನಿಜ ಹೇಳುವ ಶಕ್ತಿ ನನಗಿದೆಯೇ. ನಾನು ಜಾವೇದ ಅಲ್ಲ. ಆತ ವೀರ ಮರಣವನ್ನಪ್ಪಿದ್ದಾನೆ ಎಂಬ ಸತ್ಯವನ್ನರುಹಿದರೆ ಆಕೆಯ ಮತ್ತು ಆ ಹುಡುಗಿಯ ಮನಃಸ್ಥಿತಿ ಏನಾಗಬಹುದು?

ಆತ ಸ್ನಾನಕ್ಕೆ ಹೋದ.

* * *

ಕಾಲದ ಪರಿಭ್ರಮಣೆ ಆಗತೊಡಗಿತು. ಹಗಲು ರಾತ್ರಿ ಒಂದರ ಹಿಂದೆ ಒಂದರಂತೆ ಸಾಗುತ್ತಿದ್ದುವು. ಆತ ಅಲ್ಲಿಗೆ ಬಂದು ಮೂವತ್ತು ದಿನಗಳಾಯಿತು. ಈ ಸಮಯದಲ್ಲಿ ಆತ ಅನೇಕರನ್ನು ಭೇಟಿಯಾದ. ಅಸ್ಮಾಳ ತಂದೆ ಅಖ್ತರ್‌ಕಾಕ ಅವನನ್ನು ಹಲವಷ್ಟು ಸಲ ಭೇಟಿಯಾಗಿದ್ದರು. ಅವರ ಭೇಟಿಯಿಂದ ಅವನಿಗೆ ಒಂದು ವಿಷಯವಂತೂ ಗೊತ್ತಾಯಿತು. ಜಾವೇದನಂತೆ ನಟಿಸುವ ತಾನು ಅಸ್ಮಾಳನ್ನು ಮದುವೆಯಾಗಬೇಕು. ಜಾವೇದ, ಅಸ್ಮಾಳನ್ನೇ ಮದುವೆಯಾಗುವುದೆಂಬ ನಿರ್ಧಾರ ಬಾಲ್ಯದಲ್ಲೇ ಆಗಿಬಿಟ್ಟಿತ್ತು. ಅಖ್ತರ್ ಕಾಕ ದಿನವೂ ಬಂದು ಪೀಡಿಸುತ್ತಿದ್ದಂತೆ ಈತ ಸದ್ಯಕ್ಕೆ ತನಗೆ ಮದುವೆ ಬೇಡ ಅನ್ನುತ್ತಿದ್ದ.

ಆದರೆ ಆ ಒಂದು ದಿನವಂತೂ ಅಮ್ಮ,

"ಮಗೂ ಜಾವೇದ, ಇನ್ನು ಎಷ್ಟು ದಿನಾಂತ ಆ ಹುಡುಗಿ ಕಾಯೋದು. ಅವಳಿಗಾಗಲೇ ಹದಿನೆಂಟಾಯಿತು. ಇದು ಹೆಂಮಕ್ಕಳಿಗೆ ಮದುವೆಯಾಗಲು ಒಪ್ಪವಾದ ಪ್ರಾಯ. ಹೆಂಮಕ್ಕಳ ಮದುವೆಯ ಪ್ರಾಯ ದಾಟಿದ ಮೇಲೂ ಮನೆಯಲ್ಲಿ ಕುಳ್ಳಿರಿಸುವುದು ಉಚಿತವಲ್ಲ. ಅವಳ ತಂದೆಗಂತೂ ಪ್ರಾಯ ಮೀರುತ್ತಾ ಇದೆ. ಈ ವರುಷವೇ ಅವರಿಗೆ ಅಸ್ಮಾಳ ಮದುವೆಯನ್ನು ನೋಡುವ ಆಸೆ. ಈ ಸಮಯದಲ್ಲಿ ನೀನು ಈ ವಿವಾಹಬಂಧವನ್ನು ನಿರಾಕರಿಸುವುದು ಸರಿಯೇನು?" ಹೀಗೆ ಅಲವತ್ತುಕೊಂಡಾಗ ಆತ ಇಷ್ಟು ದಿನ ತನ್ನಲ್ಲಿ ಬಚ್ಚಿಟ್ಟುಕೊಂಡಿದ್ದ ಸತ್ಯವನ್ನು ಹೊರಗೆ ಚೆಲ್ಲಿದ.

"ಉಮ್ಮಾ, ನನಗೆ ಮಾಪು ಕೊಡು ಉಮ್ಮಾ. ಈ ಒಂದು ತಿಂಗಳಲ್ಲಿ ನಾನು ನನ್ನ ಒಡಲಲ್ಲಿ ಯಾವ ಸತ್ಯ ಬಚ್ಚಿಟ್ಟಿದ್ದೇನೋ ಅದನ್ನು ಈಗ ನಿಮ್ಮ ಮುಂದೆ ಬಿಚ್ಚಿಡುತ್ತೇನೆ. ನಾನು ನಿಜಕ್ಕೂ ನಿಮ್ಮ ಮಗ ಜಾವೇದ ಅಲ್ಲ. ನಾನು ಆತನ ಪ್ರಾಣ ಮಿತ್ರ ರವಿ!"

ಆಕೆಗೆ ಒಮ್ಮೆಲೆ ಸಿಡಿಲು ಅಪ್ಪಳಿಸಿದಂತಾಯ್ತು. ಮೈಯೆಲ್ಲಾ ಮಿಂಚು ಹರಿದ ಅನುಭವವಾಯ್ತು. "ಓ... ದೇವರೇ" ಎಂದು ಕ್ಷೀಣ ಉದ್ಗಾರ ತೆಗೆದ ಅವರು ಒಂದು ಕ್ಷಣ ಮೂಕರಾಗಿ ಕುಳಿತುಬಿಟ್ಟರು. ಅವರ ಕಣ್ಣಿಂದ ಒಂದೇ ಸವನೆ ಕಂಬನಿ ಸುರಿಯಲಾರಂಭಿಸಿತು. ಆಕೆಯ ಕಣ್ಣಿನ ಕಂಬನಿಯನ್ನು ನೋಡುತ್ತಾ ಆತ ಮತ್ತೆ ಹೇಳಿದ,

"ನಾನಿದುತನಕ ಸುಳ್ಳು ಹೇಳಿ ನಿಮ್ಮ ಮಗನಂತೆ ನಟಿಸಿದೆ. ನನಗದು ಅನಿವಾರ್ಯವಾಗಿತ್ತು. ಜಾವೇದನ ಕೊನೆಯ ಇಚ್ಛೆ ಅದೇ ಆಗಿತ್ತು. ಆತನ ಸ್ಥಾನದಲ್ಲಿ ನಾನಿಂತು ನಿಮ್ಮ ಮಗನಾಗಬೇಕಿತ್ತು. ಇದು ಕೇವಲ ನಟನೆ ಅಲ್ಲ. ನಾನು ಈ ಎರಡು ತಿಂಗಳೇ ಅಲ್ಲ, ಇಡೀ ಜೀವಮಾನ ನಿಮ್ಮ ಮಗನಾಗಿಯೇ ಉಳಿಯುತ್ತೇನೆ ಎಂದೆಂದಿಗೂ. ನಿಮ್ಮ ಮಗ ಜಾವೇದ ಇಲ್ಲ ಎಂಬ ಕೊರತೆಯನ್ನು ನಾ ತುಂಬುತ್ತೇನೆ. ಹಾಗೇ ಅಮ್ಮಾ ನಾನು ಕಾಶ್ಮೀರದಲ್ಲಿ 'ರೇಣುಕ' ಎಂಬ ಹುಡುಗಿ

ಯನ್ನು ಪ್ರೀತಿಸುತ್ತಿದ್ದೆ. ಅದು ನಮ್ಮಿಬ್ಬರ ಶಾಶ್ವತ ಪ್ರೀತಿ. ಎಂದೆಂದೂ ಮುರಿಯಲಾರದ ಪ್ರೀತಿ. ನಾವಿಬ್ಬರೂ ಮದುವೆಯಾಗೋ ನಿರ್ಧಾರಕ್ಕೆ ಬಂದಿದ್ದೇವೆ. ನಾನಿಂದು ಅಸ್ಮಾಳಿಗೆ ಅಣ್ಣನಾಗಿ ಅವಳ ಮದುವೆಯನ್ನು ಯೋಗ್ಯನಾದ ಗಂಡನ್ನು ನೋಡಿ ಅವನೊಂದಿಗೆ ಮಾಡಿಸುತ್ತೇನೆ. ಇದು ಸತ್ಯ. ಅಸ್ಮಾಳಿಗೆ ಯೋಗ್ಯ ನೆಲೆ ದೊರಕುವವರೆಗೆ ನಾನು ರೇಣುವನ್ನು ಮದುವೆಯಾಗೋದಿಲ್ಲ. ಅಸ್ಮಾ ಒಂದು ನೆಲೆಗೆ ಬಂದ ಮೇಲೆಯೇ ನಮ್ಮ ಮದುವೆ. ಆದರೆ ಅಮ್ಮ ನನಗೆ ನಿಮ್ಮ ಮಗನಾಗಿಯೇ ಉಳಿಯುವ ಅವಕಾಶ ಕೊಡಿ."

ಅವರು, ಅವನ ಹತ್ತಿರಕ್ಕೆ ಬಂದು ಅವನ ಕಪಾಳಕ್ಕೆ ಬಾರಿಸಿದರು. ಅವನು ಅದನ್ನು ನಿರೀಕ್ಷಿಸಿ ಇರಲಿಲ್ಲ ಮತ್ತು ಆಕೆ ನೇರವಾಗಿ ಒಳಗೆ ಹೊರಟುಹೋದರು. ಆ ಹುಡುಗಿ ಅಸ್ಮಾ ಆಕೆಯೊಂದಿಗೆ ಬಿಕ್ಕಿಬಿಕ್ಕಿ ಅಳುವುದು ಈತನಿಗೆ ಕೇಳಿಸಿತು. ಬಿಕ್ಕಿಬಿಕ್ಕಿ ಅಳುತ್ತಿರುವ ಅವರಿಬ್ಬರೂ ಯಾರೊಬ್ಬರನ್ನೂ ಸಾಂತ್ವನಗೊಳಿಸಲಾರದೆ ಮೂಕರಾಗಿ ಅಳುತ್ತಿರುವುದನ್ನು ಕೇಳಿ ಈತನಿಗೆ ಕಸಿವಿಸಿಯೆನಿಸಿತು.

ರವಿ ಒಂದು ನಿರ್ಧಾರಕ್ಕೆ ಬಂದಿದ್ದ. ಅಮ್ಮ ಖಂಡಿತ ನನ್ನನ್ನು ಕ್ಷಮಿಸಲಾರರು. ನಾನು 'ರವಿ' ಎಂಬ ಸತ್ಯ ಗೊತ್ತಾದಾಗ ಅವರು ಅದೆಷ್ಟು ರೊಚ್ಚಿಗೆದ್ದರು. ಅವರ ಮನಃಸ್ಥಿತಿ ನನಗೆ ಅರಿವಾಗುತ್ತದೆ. ಒಂದು ಕಡೆ ಮಗನನ್ನು ಕಳಕೊಂಡ ದುಃಖ, ಇನ್ನೊಂದು ಕಡೆ ಅಸ್ಮಾಳಿಗೆ ಒಂದು ನೆಲೆಸಿಗದ ದುಃಖ. ಈ ಮನೆಯಲ್ಲಿ ನನ್ನನ್ನು ಮಗನೆಂದು ಒಪ್ಪಿಕೊಳ್ಳುವುದು ಅಸಾಧ್ಯ. ನಾಳೆ ಮುಂಜಾನೆಯೇ ಇಲ್ಲಿಂದ ಮರಳಿ ಕಾಶ್ಮೀರಕ್ಕೆ ಹೋಗಬೇಕು ಎಂದುಕೊಂಡವ ಲಗ್ಗೇಜನ್ನು ಪ್ಯಾಕ್ ಮಾಡಿ ಇರಿಸಿದ.

ಮುಂಜಾನೆ ಹತ್ತಿರದ ಮಸೀದಿಯಿಂದ ಅಝೊನ್‌ನ ಧ್ವನಿ ಕೇಳಿಸಿದಾಗ ಆತ ಎಚ್ಚತ್ತು ಹೊರಬಂದ. ತಾಯಿ ಎದ್ದು ವಝೂ ಮಾಡುವುದಕ್ಕೆ ಹೊರಟಿದ್ದರು. ವಝೂ ಮುಗಿಸಿ ಅವರು ನಮಾಜು ಮಾಡುತ್ತಿದ್ದಾಗ ಆತ ಲಗ್ಗೇಜು ಹೊತ್ತು ಹೊರಬಂದು ಆಕೆ ನಮಾಜು ಮುಗಿಸುವುದನ್ನೇ ಕಾಯತೊಡಗಿದ.

ಆಕೆ ನಮಾಜು ಮುಗಿಸಿ ಹೊರಬಂದಾಗ, "ಉಮ್ಮಾ, ನನ್ನನ್ನು ಕ್ಷಮಿಸು. ನಾನು ಹೊರಡುತ್ತಿದ್ದೇನೆ. ತಾಯಿ ಇಲ್ಲದೆ ಅನಾಥನಾಗಿ ಬೆಳೆದ. ತಾಯಿಯ ಪ್ರೀತಿ ಏನೆಂದು ಗೊತ್ತಿರದ ನನಗೆ ಈ ಒಂದು ತಿಂಗಳಲ್ಲಿ ತಾಯ ನಿಜವಾದ ಪ್ರೀತಿ—ಮಮತೆಯನ್ನು ನೀಡಿದಿರಿ. ನಿನ್ನೆ ರಾತ್ರಿ ನೀವು ನೀಡಿದ ಒಂದು ಹೊಡೆತದಲ್ಲಿ ಅಮ್ಮನ ಕೈಯ ಏಟು ಎಷ್ಟು ಅರ್ಥವತ್ತಾಗಿದೆ ಎಂದು ನನಗೆ ತಿಳಿಯಿತು. ನನಗೆ ನಿಮ್ಮ ಮಮತೆಯಿಂದ ದೂರ ಹೋಗಲು ಸಾಧ್ಯವಾಗುತ್ತಿಲ್ಲ ಉಮ್ಮ. ನೀವು ಇಷ್ಟು ದಿನ ಮಗನೆಂಬ ಪ್ರೀತಿಯಿಂದ ನೋಡಿಕೊಂಡುದಕ್ಕೆ ಕೃತಜ್ಞತೆಗಳು. ನಾ ಬರುತ್ತೇನೆ ಉಮ್ಮಾ... ನನ್ನನ್ನು ಆಶೀರ್ವದಿಸಿ" ಎಂದು ಹೆಜ್ಜೆ ಎತ್ತಿದವನನ್ನು ತಡೆಹಿಡಿದು ಹೇಳಿದರು.

"ಮಗೂ, ನಾನು ನಿನ್ನನ್ನು ಜಾವೇದ ಎಂದೇ ಕರೆಯುತ್ತೇನೆ. ನನ್ನ ದೃಷ್ಟೀಲಿ ನನ್ನ ಮಗ ಜಾವೇದ ತೀರಿಕೊಂಡಿಲ್ಲ. ಆತನ ಆತ್ಮ ನಿನ್ನಲ್ಲೇ ಐಕ್ಯವಾಗಿದೆ. ನೀನೂ ಇಂದು ಹೊರಟು ಹೋದರೆ ನನಗಾರಪ್ಪಾ ದಿಕ್ಕು. ಇನ್ನು ನೀನೇ ನನ್ನ ಮಗನಾಗಿ ಉಳಿಯುತ್ತಿ. ಇನ್ನೂ ಒಂದು ತಿಂಗಳ ರಜೆ ಮಿಕ್ಕಿ ಇದೆ. ಇಂದೇ ರೇಣುಕಾಗೆ ಕಾಗದ ಬರೆ. ನಾನವಳನ್ನು ನನ್ನ ಸೊಸೆ ಎಂದು ಪ್ರೀತಿಸುತ್ತೇನೆ..."

ಆತ ತುಂಬು ಹೃದಯದಿಂದ ಆಕೆಯ ಕಾಲಿಗೆ ನಮಿಸಿದ. "ಅಮ್ಮಾ, ನೀನು ನಿಜಕ್ಕೂ ಅಪೂರ್ವವಾದ ತಾಯಿ. ನಿಮ್ಮ ಮಗನಾಗಿ ಉಳಿಯುವುದು ನನಗೆ ಹೆಮ್ಮೆ ಎನಿಸುತ್ತದೆ."

ಆಕೆ ಮಗನನ್ನು ಹಿಡಿದೆತ್ತಿ ತನ್ನ ತೋಳುಗಳಲ್ಲಿ ತಬ್ಬಿಕೊಂಡರು. ●

**ಆವೃತ್ತಿ**

ಮಕ್ಕಳೆಷ್ಟೆಂದು
ಕೇಳಿದರೆ:
'ಎರಡನೇ ಆವೃತ್ತಿ
ಇದೀಗ ಹೊರಬಂದಿದೆ'
ಎನ್ನಬೇಕೆ? ಯುವ—
ಕವಿ ಕಾವ್ಯ ಭಾಷೆಯಲ್ಲಿ!

● ಡಿ. ವಿ. ಬಡಿಗೇರ

# ಹಿರಿಯರ ಆಯ್ಕೆ

ಆಯ್ಕೆ: ಬನ್ನಂಜೆ ಗೋವಿಂದಾಚಾರ್ಯ

## ಧೋರಣೆ

ಬದುಕು ತನ್ನ ಅಕ್ಷದ ಸುತ್ತ
ಬೆನ್ನು ಹತ್ತಿದ ಮಾಯಾಮೃಗ
ಜನಾರಣ್ಯದ ಜೀವ ಸ್ಪರ್ಧೆ
ಅಪಹರಿಸಿದರೆ ಜಂಬೂ ಸವಾರಿ
ಹಿಮ್ಮೆಟ್ಟಿದರೆ ಉಲ್ಕಾಪಾತ
ಮರುಕಕ್ಕಿಲ್ಲ ವೇಳೆ
ಗೆಜ್ಜೆಗೆ ತಕ್ಕ ಹೆಜ್ಜೆ ವ್ಯವ
ಹಾರಕ್ಕೆ ತಕ್ಕ(ಷ್ಟು) ಮಾತು ಕತೆ
ಬೈಟು ಕಾಫಿ ಜೇಬಿಗೆ ಚೆಕ್ಕು
ಸ್ಕೂಟರಿಗೆ ಕಿಕ್ಕು
ಅಗಣಿತ ಸೂತ್ರಕ್ಕೆ ಬೆರಳ ಚಮತ್ಕಾರ
ಮೂಳೆಗಿಷ್ಟು ಮಾಂಸ ಉಪ್ಪುಖಾರ
ಪುಪ್ಪಸ ತುಂಬ ಗಾಳಿ
ಒಂದು ಡ್ರಿಂಕು –
ಕ್ಷಿಪಣಿ ದಾಳಿಗೆ ಸಿದ್ಧ.

ಉಪಗ್ರಹದ ಮೇಲೆ ಲೋಕ ಸವಾರಿ
ಒಂದು ಚದುರಂಗು
ಲದ ಮೇಲೆ ಅಸಂಖ್ಯ ಪೋಸು
ಢೋಲು ಢಮರು ಧ್ವಜಾರೋಹಣ
ಗಲ್ಲಕ್ಕೆ ತುಟಿಗೆ ಮುತ್ತು.
ಹೃದಯಕ್ಕೆ ಮೇಕಪ್ಪು ಕಣ್ಕಟ್ಟು
ವ. ಕುಸುರಿ ಕೆಲಸ
ಮುಖಾಮುಖಿ ಸಂಧಾನ ಇಲ್ಲ
ವೇ ರಥ ಹೂತಾಗಲೇ ಝೇಂಕಾರ
ಎದುರಾಳಿಯ ಎದೆಗೆ ಗುರಿ
ಗಾಜಿನ ಉಪಹಾರ ಗೃಹದಲ್ಲಿ
ಒಪ್ಪಂದಗಳ ವಿನಿಮಯ.

ಜೇಬಲ್ಲಿ ಸಿಡಿಮದ್ದು
ಕೈಯಲ್ಲಿ ಹೂವಿನ ಗುಚ್ಛ
ತುಟಿಯ ಮೇಲೆ ಕಟೆದ ನಗೆ
ಬದುಕನ್ನು ಸ್ವಾಗತಿಸುವ ಬಗೆ.

● ಟಿ. ಅರುಂಧತಿ ಸಜ್ಜನ್, ದಾವಣಗೆರೆ

ಕವನದ ಗಟ್ಟಿತನಕ್ಕೆ ಮೂರು ಕಾರಣಗಳು: ಭಾಷಾಶುದ್ಧಿ, ಬಂಧದ ಲಯ ಮತ್ತು ವ್ಯಂಜಕತೆ. ಹೊಸದಾಗಿ ಬರೆಯ ಹೊರಟ ಬಹಳ ಮಂದಿಯಲ್ಲಿ ಈ ಮೂರರ ಕೊರತೆಯನ್ನು ಸಾಕಷ್ಟು ಕಾಣಬಹುದು. ಇಲ್ಲಿ ಬಂದ ಕವನಗಳಲ್ಲು ಬಹಳಷ್ಟು ಈ ಕೊರತೆಗಳಿಂದ ಸೊರಗಿವೆ.

ಆಯ್ಕೆಗೊಂಡ ಆರು ಕವನಗಳಲ್ಲಿ ಈ ಎಚ್ಚರವನ್ನು ಕಾಣುತ್ತೇವೆ. ಇವು ಕೊರತೆಗಳಿಂದ ಪೂರ್ತಿ ಪಾರಾಗಿವೆ ಎಂದಲ್ಲ. ಆದರೂ ಅಭಿವ್ಯಕ್ತಿಯ ಸೊಬಗಿನಿಂದಾಗಿ ಉಳಿದವುಗಳಿಗಿಂತ ಇವು ಎತ್ತರದಲ್ಲಿ ನಿಲ್ಲುತ್ತವೆ. ಅದರಲ್ಲು 'ಧೋರಣೆ', 'ಸ್ವಾರ್ಥಿಯಲ್ಲ' ಮತ್ತು 'ಹೊತ್ತು ಸಾಯುತ್ತಿದೆ ಗೆಳೆಯಾ' ಈ ಮೂರು ಕವನಗಳು ಅಭಿವ್ಯಕ್ತಿಯ ತಂತ್ರದಿಂದ ಹೆಚ್ಚು ಹೃದಯಸ್ಪರ್ಶಿಯಾಗಿವೆ. ಹೇಳಬೇಕಾದ್ದನ್ನು ಚೊಕ್ಕವಾಗಿ, ಪರಿಣಾಮಕಾರಿಯಾಗಿ ಹೇಳುವ ಕಲೆಗಾರಿಕೆಯನ್ನು ಇಲ್ಲಿ ಗುರುತಿಸಬಹುದು.

● ಬನ್ನಂಜೆ ಗೋವಿಂದಾಚಾರ್ಯ

## ಸ್ವಾರ್ಥಿಯಲ್ಲ!

ಮುಂಜಾನೆ ಸೂರ್ಯ
ಕಿರಣಗಳು
ಮುತ್ತಿಡುವಾಗ ಪಾರ್ಕಿನ
ಗಿಡಗಳಿಗೆ, ಅರಳಿದ ಹೂವಿನ
ದಳಗಳಿಗೆ,
ರೋಮಾಂಚನ
ಆಗುವುದಿಲ್ಲ;
ಕಲ್ಲುಬೆಂಚುಗಳು
ನಾಚಿಕೊಳ್ಳುವುದಿಲ್ಲ.
ಮಧ್ಯಾಹ್ನದ ಉರಿಬಿಸಿಲಿಗೆ
ಇವುಗಳ ಹೃದಯ
ಭಗ್ನಗೊಳ್ಳುವುದಿಲ್ಲ
ವಿರಹಿಗಳು
ಹೇಳಿಕೊಳ್ಳುವ ಹಾಗೆ.
ಮುಸ್ಸಂಜೆ ಹೊತ್ತು
ಬಂದರೆ ಸಾಕು
ಹರೆಯದ ಜೋಡಿಗಳು
ಸೆಟೆದು ನಿಲ್ಲುತ್ತವೆ
ಸಿಪಾಯಿಯಂತೆ
ಗಿಡಗಳು
ಮುಗುಳು ನಗುತ್ತವೆ
ಮದುಮಗಳಂತೆ
ಹೂವುಗಳು.
ಪಾರ್ಕಿನಲ್ಲಿ ಹೇಳಿಕೊಳ್ಳ
ಬಹುದು ಗುಟ್ಟನ್ನು
ಬಿಚ್ಚಬಹುದು ಬಚ್ಚಿಟ್ಟ
ಪ್ರೀತಿಯ ಕಟ್ಟುಗಳನ್ನು.
ಗಿಡಗಳಾಗಲೀ, ಹೂವಿನ
ದಳಗಳಾಗಲೀ
ಹೇಳುವುದಿಲ್ಲ ಯಾರಿಗೂ
ನಿಮ್ಮ ಗುಟ್ಟನ್ನು
ಹಂಚಿಕೊಳ್ಳುವ
ಪ್ರೀತಿಯನ್ನು.
ಯಾಕೆಂದರೆ
ಪಾರ್ಕಿನ ಗಿಡ, ಹೂವು, ಹುಲ್ಲು
ಸ್ವಾರ್ಥಿಯಲ್ಲ
ನನ್ನ-ನಿಮ್ಮ ಹಾಗೆ.

● "ಶ್ರೀಮುಖ", ಮೀನಾಕಳಿಯಾ

## ಹೊತ್ತು ಸಾಯುತ್ತಿದೆ... ಗೆಳೆಯಾ

ಕನವರಿಸುತ್ತಾಳೆ
ಕನಸುಗಳ ಬೆಚ್ಚನೆ ಮಡಿಲಲ್ಲಿ
ಮಲಗಿರುವ ಹುಡುಗಿ –

ಬಾಳ ಬಯಲಲ್ಲಿ ಹೊಸ ಹಾದಿ ತೆರೆಯಬೇಕೆಂದಿದ್ದೆ
ಇನ್ನು ನೀ ಮೂಡಿಸಿದ ಹೆಜ್ಜೆ ಗುರುತಿಸಲೆ
ನಾ... ಹೆಜ್ಜೆಗಳ ಕೂಡಿಸಲೆ?

ಬಾಳ ನಂದನದಲ್ಲಿ ನೀ ನೆಡುವ ಗಿಡವಾಗ ಬಯಸಿದ್ದೆ
ಇನ್ನು ಆ ಗಿಡದೆ ಹೂವಾಗಿ ಅರಳಲೆ
ನಾ... ಸೂಸುವ ಕಂಪಾಗಲೆ?

ಬಾಳ ಬೆಳಗುವ ದೀವಿಗೆಯಾಗುವಾಸೆಯಲ್ಲಿದ್ದೆ
ಇನ್ನು ನೀ ಹಚ್ಚಿದ ದೀಪದ ಕುಡಿಯಾಗಲೆ
ನಾ... ಬೀರುವ ಬೆಳಕಾಗಲೆ?

ನನಸುಗಳ ಬೆಳ್ಳನೆ ಬೆಳಗಲ್ಲಿ
ಎಚ್ಚೆತ್ತ ಹುಡುಗಿ –

ಮುಗಿದುಹೋದ ಹಾದಿಯ
ಹುಲ್ಲ ಹಾಸಿನಲ್ಲಿ ಅರಸುತ್ತಾಳೆ
– ದಾರಿಯೆಲ್ಲಿ?

ಬಿಸಿಲ ಬೇಗೆಗೆ ಬಾಡಿರುವ
ಗಿಡದ ಹೂವುಗಳ ಅರಿಸುತ್ತಾಳೆ
– ದಳಗಳೆಲ್ಲಿ?

ದೀಪವಾರಿದ ರಾತ್ರಿಯ
ಆವರಿಸಿದ ಕತ್ತಲಲ್ಲಿ ತಡವುತ್ತಾಳೆ
– ನೆರಳೆಲ್ಲಿ?

ನಿರೀಕ್ಷೆಯಲ್ಲಿ
ಸುಂದರ ಕ್ಷಣಗಳು ಜಾರುತ್ತಿವೆ
ಚೀರುತ್ತಾಳೆ ಹುಡುಗಿ... ಆತಂಕ
ಹೊತ್ತು ಸಾಯುತ್ತಿದೆ ಗೆಳೆಯಾ,
ಇನ್ನು ತಡಮಾಡಬೇಡ
ನನ್ನ ಕಾಡಬೇಡ.

● ಮಾಲತಿ ಪೈ, ಮಂಡ್ಯ

### ಮೆಚ್ಚುಗೆ ಪಡೆದ ಕವನಗಳು

ಸ್ವರ್ಗ ● ಸರೋಜ ಕೃಷ್ಣಮೂರ್ತಿ, ಬೆಂಗಳೂರು
ಮಾಗಿಯ ಮುಂಜಾವು ● ವಿ. ರಮಾ ಕಾರಂತ, ಮಂಗಳೂರು
ಸಂವಾದ ● ಎಂ. ಬಿ. ಅಡ್ನೂರ, ಹುಬ್ಬಳ್ಳಿ

## ಉಪನಾಮಾವಳಿ

ಉತ್ತರ ಕರ್ನಾಟಕಕ್ಕ ತೆರಳಿದರ ಅಲ್ಲಿಯ ಜನರ ಉಪನಾಮ (Sirname) ಟೆಂಗಿನಕಾಯಿ, ಬೇವಿನಮರದ, ಅಕ್ಕಿ, ಮೆಣಸಿನಕಾಯಿ, ಗೋಧಿ, ವಸ್ತ್ರದ, ರಾಗಿ, ಬೆಲ್ಲದ... ಮುಂತಾಗಿ ಇರುವುದು ಕರ್ನಾಟಕದ ಆದ್ಯಂತ ಎಲ್ಲರಿಗೂ ಪರಿಚಿತ. ಆದರೆ ಕರಾವಳಿ ಕರ್ನಾಟಕದ ಅದರಲ್ಲೂ ದಕ್ಷಿಣ ಕನ್ನಡದ ಬ್ರಾಹ್ಮಣರಲ್ಲಿ ಒಂದು ಗುಂಪಾದ ಶಿವಳ್ಳಿ ಬ್ರಾಹ್ಮಣರ ಹೆಸರಿನ ಜೊತೆ ಸೇರಿರುವ ಉಪನಾಮಗಳನ್ನು ಸಂಕಲಿಸಿದರೆ ಅದುವೇ ಒಂದು ಶಬ್ದಕೋಶವಾದೀತೇನೋ! ಈ ಉಪನಾಮಗಳು ಆಯಾ ವ್ಯಕ್ತಿಯ ಕುಟುಂಬ ಸೂಚಕ, ವಂಶಸೂಚಕ, ಗೋತ್ರಸೂಚಕ ಎನ್ನುತ್ತಾರೆ. ನನಗೆ ನನ್ನ ನೆನಪಿನ ಭಂಡಾರ ದಲ್ಲಿರುವ ಇಂತಹ ಉಪನಾಮಗಳ ಪಟ್ಟಿಯನ್ನು ಇಲ್ಲಿ ಕಾಣಿಸಿದ್ದೇನೆ. ಇದರೊಂದಿಗೆ ನಿಮಗೆ (ಓದುಗರಿಗೆ) ತಿಳಿದಿರುವ ಇತರ ಉಪನಾಮ ಗಳನ್ನೂ ಸೇರಿಸಿಕೊಳ್ಳಿ.

ಶಬರಾಯ, ಶರಳಾಯ, ತೋಡ್ತಿಲ್ಲಾಯ, ಮನೆ~ಿತ್ತಾಯ, ಕುದ್ರೆತ್ತಾಯ, ಕೇಕುಣ್ಣಾಯ, ಓಕುಣ್ಣಾಯ, ಶಗ್ರಿತ್ತಾಯ, ಉಂಗ್ರುಪುಳಿತ್ತಾಯ, ಮುಚ್ಚಿಂತಾಯ, ಕಕ್ಕಿಲ್ಲಾಯ, ಉಪಾಧ್ಯಾಯ, ಬಾರಿತ್ತಾಯ, ಪಾಂಗಣ್ಣಾಯ, ಪರ್ಲತ್ತಾಯ, ಮುಡಂಬಡಿತ್ತಾಯ, ಪೆಜತ್ತಾಯ, ಕುದ್ದಣ್ಣಾಯ, ಪಡುವೆಟ್ನಾಯ, ಮುರುಡಿತ್ತಾಯ, ಸಂಪಿಗೆತ್ತಾಯ, ಒಡಂಬಡಿತ್ತಾಯ, ಯಡಪಡಿತ್ತಾಯ, ಬಾಳ್ತಿಲ್ಲಾಯ, ನೂರಿತ್ತಾಯ, ಉಳಿತ್ತಾಯ, ಕಡಂಬಡಿತ್ತಾಯ, ತೋಲ್ಪಡಿತ್ತಾಯ, ಕೋಲ್ಪಡಿತ್ತಾಯ, ಅರಬಿತ್ತಾಯ, ಶಿಂತ್ರಿತ್ತಾಯ.

ಇವರೆಲ್ಲ ಉಡುಪಿ ಕಡೆಯಿಂದ ಬಂದ ತುಳು ಮಾತೃಭಾಷೆಯ ಬ್ರಾಹ್ಮಣರು. ಈ ಪಟ್ಟಿ ನೆನಪಿಸುತ್ತಾ ಹೋದರೆ 150ಕ್ಕೂ ಮಿಕ್ಕಬಹು ದೆಂದು ನನ್ನ ಅನ್ನಿಸಿಕೆ. ಆದರೆ ನನಗೆ ಸದ್ಯಕ್ಕೆ ನೆನಪಿಗೆ ಬರುತ್ತಿಲ್ಲ. ಹೀಗೆಯೇ ಚಿತ್ಪಾವನ ಬ್ರಾಹ್ಮಣರ ಉಪನಾಮಗಳದ್ದೂ ಉದ್ದನೆಯ ಪಟ್ಟಿಯನ್ನು ಹೇಳಬಹುದು. ಇವರು ಮರಾಠ ಹಿನ್ನೆಲೆಯಿಂದ ಬಂದ ಬ್ರಾಹ್ಮಣರು.

**● ಕೊಕ್ಕಡ ವೆಂಕಟ್ರಮಣ ಭಟ್ಟ, ಮಂಡ್ಯ**

# ಪರಿಸರದ ಕವಿತೆ

ಸುಂದರವಾದ ಹೂವುಗಳು, ನಳನಳಿಸುವ ಬಳ್ಳಿಗಳು
ಮೋಹಕವಾದ ಹಸಿರು ಉದ್ಯಾನಗಳು
ಎಲ್ಲವೂ ಕೃತಕ ಪ್ಲಾಸ್ಟಿಕ್ ನಿರ್ಮಿತ.
ಆನೆ ಕುದುರೆ ಕರಡಿ ಜಿಂಕೆ ಘೇಂಡಾಮೃಗ—
ಗಳೆಲ್ಲವೂ ಇವೆ, ಯಾವುದಕ್ಕೂ ಉಸಿರಿಲ್ಲ.
ಚಿಕ್ಕ, ಬಣ್ಣದ ಹಕ್ಕಿ, ದೊಡ್ಡ ಹಕ್ಕಿಗಳಿವೆ
ಆದರೆ ಅವು ಚಿಲಿಪಿಲಿಗುಟ್ಟುವುದಿಲ್ಲ
ಥಟ್ಟನೆ ಹಾರಿ ನೀರ ತಾಣಕ್ಕೆ ಬಂದೆರಗುವುದಿಲ್ಲ.
ಚಿಣ್ಣರು ನಲಿವ ಮೈದಾನ, ವಿಶಾಲ ಸ್ವಚ್ಛ ಸುಂದರ
ಆದರೆ ಅಲ್ಲಿ ಕಲ್ಲಿಲ್ಲ ಮುಳ್ಳಿಲ್ಲ.
ಧುತ್ತನೆ ಮೊಳೆತೆದ್ದ ಭೀಮಗಾತ್ರದ ಗಗನಚುಂಬಿಗಳು ಎಲ್ಲೆಲ್ಲು.
ಕತ್ತೆತ್ತಿ ನಿಮಿರಿ ನೋಡಿದರೂ ದಕ್ಕುವುದಿಲ್ಲ
ಒಂದಿಂಚು ನೀಲಿ ಆಕಾಶ ಪುಟ್ಟ ಮಕ್ಕಳಿಗೆ.

ಚಿಕ್ಕ ಚಂದಾಮಾಮರೆಲ್ಲಿ, ಕಿನ್ನರ ಕಥೆಯ ಸುಂದರಿಯರೆಲ್ಲಿ,
ಎಲ್ಲಿ ರಾಜಕುಮಾರ, ಸಪ್ತ ಸಾಗರದಾಚೆ ಎಲ್ಲಿ ರಾಜಕುಮಾರಿ
ಎಲ್ಲಿ ಮಾಂತ್ರಿಕ ದಂಡ, ಎಲ್ಲಿ ಜೀವಮಣಿ?
ಬೆಳೆಯುತ್ತಿವೆ ಎಲ್ಲ ತಾರಸಿಗಳ ಮೇಲೆ
ಅಲ್ಯೂಮಿನಿಯಂ ಕೊಂಬೆ ರೆಂಬೆಗಳಲ್ಲಿ ಸಂಸ್ಕೃತಿ
ನುಗ್ಗುತ್ತಿದೆ ಕಿಟಕಿಗಳಲ್ಲಿ ಹೊಲಸು ಬೀದಿಯ ಧೂಳು
ಕೇಳಿಸುತ್ತದೆ ದಿನಾ ಬೆಳಗ್ಗೆ ಡೀಸೆಲ್ ರೈಲು
ಬೊಬ್ಬಿಡುವ ಕರ್ಕಶ ಶಬ್ದ, ದೂರದಲ್ಲಿ.

● ವೇಣುಗೋಪಾಲ ಕಾಸರಗೋಡು

ವರ್ಣಚಿತ್ರ: ಗುರುದತ್ ಕಾಮತ್

ಹಾದಿಕೆರೆಯಿಂದ ಶಿವಮೊಗ್ಗಕ್ಕೆ ಎರಡು ಗಂಟೆಯ ಪ್ರಯಾಣ. ಬೆಳಗ್ಗೆ ಏಳಕ್ಕೆ ಬೆಂಕಿಕೆರೆ ಬಸ್ ನಿಲ್ದಾಣಕ್ಕೆ ತಮ್ಮಂದಿರೊಡನೆ ಬಂದ ರಾಮಚಂದ್ರ ಭಟ್ಟರು ಜಯಪದ್ಮ ಹಿಡಿದು ಶಿವಮೊಗ್ಗಕ್ಕೆ ಮೂರು ಟಿಕೆಟ್ ಮಾಡಿಸಿದರು. ಬಸ್ಸು ಬೆಂಕಿಕೆರೆಯ ಕೆರೆಯ ಏರಿಯ ಮೇಲೆ ಹಾದು ಕಂತರಂಗಪ್ಪನ ಮಟ್ಟಿಯ ಕಣಿವೆಯ ಅಂಕು-ಡೊಂಕಿನ ರಸ್ತೆಯಲ್ಲಿ ಹೊರಳುತ್ತಾ ಮೇಲೇರುವಾಗ, ಅನಿರೀಕ್ಷಿತವಾಗಿ ಅಳಿದ ತಂದೆಯ ಸಾವೇ ಅವರ ಮನಸ್ಸನ್ನು ತುಂಬಿತ್ತು. ತಂದೆಯ ಭಾವಮೈದುನ ಶೀನಪ್ಪ ಉಬ್ರಾಣಿಯಲ್ಲಿ ನಡೆದ ಜಮಾಬಂದಿಗೆ ಹೋದವರು ಹಿಂದಿರುವಾಗ ಹಿರೇಹಳ್ಳದ ನೀರು ಕುಡಿದು ಮನೆಗೆ ಬಂದು ಚಳಿ-ಜ್ವರ ಹಿಡಿದು ಮಲಗಿದವರು ಮೇಲೇಳಲಿಲ್ಲ. ಅವರಿಬ್ಬರೂ ಪ್ರಾಣಕ್ಕೆ ಪ್ರಾಣವಾಗಿದ್ದರು. ಶೀನಪ್ಪನನ್ನು ಸುಟ್ಟು ಬಂದು ನೆಲ ಹಿಡಿದ ತಂದೆ ಮತ್ತೆ ಏಳನೆಯ ದಿನ ಪ್ರಾಣ ಬಿಟ್ಟು ತಮ್ಮ ಭಾವಮೈದುನನೊಡನೆ ಸೇರಿಕೊಂಡರು.

● ಈಶ್ವರಚಂದ್ರ

ವಾರದ ಅವಧಿಯಲ್ಲಿ ಇಬ್ಬರು ಹಿರಿಯರನ್ನು ಕಳೆದುಕೊಂಡ ಮನೆ ಅನಾಥವಾಗಿತ್ತು. ಶೀನಪ್ಪನ ಮಕ್ಕಳು ಚಿಕ್ಕವರು. ಅವರನ್ನೂ ನೋಡಿಕೊಂಡು ಮನೆ ನಡೆಸುವ ಜವಾಬ್ದಾರಿ ರಾಮಚಂದ್ರ ಭಟ್ಟರ ಮೇಲೆ ಬಿತ್ತು. ಅನನುಭವ, ಜೊತೆಗೆ ವಿಯೋಗದ ದುಃಖದ ಜೊತೆಗೆ ಕವಿದುಬಿದ್ದ ಜವಾಬ್ದಾರಿ. ಕಂಗಾಲಾದ ರಾಮಚಂದ್ರ ಭಟ್ಟರು, ಶಿವಮೊಗ್ಗದ ರಂಗಾವಧಾನಿಗಳಿಗೆ ಪತ್ರ ಬರೆದು ಕರ್ಮಾಂತರಗಳನ್ನು ತುಂಗಾ ತೀರದಲ್ಲೇ ಮಾಡಲು ವ್ಯವಸ್ಥೆ ಮಾಡಬೇಕೆಂದು



ಕೋರಿದರು. ಅವರಿಂದ ಅನುಕೂಲ ಪ್ರತಿಕ್ರಿಯೆ ಬಂದಮೇಲೆ ಹಣ ಹೊಂದಿಸಿಕೊಂಡು, ಇಬ್ಬರು ತಮ್ಮಂದಿರನ್ನೂ ಕರೆದುಕೊಂಡು ಶಿವಮೊಗ್ಗಕ್ಕೆ ಹೊರಟರು. ಏಳನೆಯ ದಿನದಿಂದ ಕರ್ಮ ಹಿಡಿಯುವಂತೆ ರಂಗಾವಧಾನಿಗಳು ಬರೆದಿದ್ದರು. ವೈಕುಂಠ ಸಮಾರಾಧನೆಯನ್ನು ಊರಿನಲ್ಲಿಯೇ ಮಾಡುವುದೆಂದು ತೀರ್ಮಾನಿಸಿ ಉಳಿದ ದಿನ ಕರ್ಮಗಳನ್ನು ತುಂಗಾತೀರದಲ್ಲಿ ಮಾಡಲು ಏರ್ಪಾಡು ಮಾಡಿಕೊಂಡು ಹೊರಟ ರಾಮಚಂದ್ರ ಭಟ್ಟರಿಗೆ ತಂದೆಯ ಮುಖವೇ ಮತ್ತೆ ಮತ್ತೆ ತೇಲಿ ಬರುತ್ತಿರುವಂತೆ ಕಾಣುತ್ತಿತ್ತು. ಬಸ್ಸು ಚನ್ನಗಿರಿ ದಾಟಿ ಭದ್ರಾವತಿಯ ಕಡೆಗೆ ತಿರುಗಿತು. ಸ್ವಲ್ಪ ದೂರ ದಾಟಿದ ಮೇಲೆ ಜೋಳದಾಳು ಕಾಡು ಪ್ರಾರಂಭವಾಯಿತು. ರಸ್ತೆಯ ಮೇಲೆ ತಂಪು ನೆರಳು. ತಣ್ಣನೆಯ ಗಾಳಿ ರಾಚುತ್ತಾ ಬೋಡು ಹೊಡೆಸಿದ್ದ ತಲೆಯನ್ನು ಕೊರೆಯುತ್ತಿತ್ತು. ಶಲ್ಯವನ್ನು ತಲೆಗೆ ಸುತ್ತಿಕೊಂಡು ಚಂದ್ರ, ಸುಬ್ಬರ ಕಡೆಗೆ ನೋಡಿದರು. ಅವರೂ ತಲೆಗೆ ಶಲ್ಯ

> ರಾಮಚಂದ್ರ ಭಟ್ಟರು ತಂದೆಯ ಅಂತ್ಯಕ್ರಿಯೆಗಾಗಿ ಹೊಳೆಯ ಘಟ್ಟದ ಮೇಲೆ ನಿಂತು ನೋಡಿದಾಗ– ಉತ್ತರ ಭಾರತದ ಒಂದು ಕುಟುಂಬ ಇದೇ ಶಾಸ್ತ್ರ ಮಾಡುತ್ತಿತ್ತು: ಅವರ ಹೆಸರು, ಗೋತ್ರ–ಪ್ರವರ ಕಿವಿಗೆ ಬಿದ್ದಾಗ ರಾಮಚಂದ್ರ ಭಟ್ಟರು ಅಚ್ಚರಿಯಿಂದ ನಿಂತರು.

ಸುತ್ತಿಕೊಳ್ಳುತ್ತಿದ್ದರು. ಇನ್ನೂ ಐದಾರು ದಿನ ಹೊಳೆಯಲ್ಲಿ ಮುಳುಗೇಳುವುದು, ದಿನಕ್ಕೆ ಎಷ್ಟು ಬಾರಿ ಸ್ನಾನವೋ ಏನು ಕಥೆಯೋ ಎಂದು ಯೋಚಿಸುತ್ತಾ ಹಮ್ಮಿಣಿಯಲ್ಲಿ ಕಟ್ಟಿಕೊಂಡಿದ್ದ



ನೋಟಿನ ಸುರುಳಿಯನ್ನು ಮುಟ್ಟಿ ನೋಡಿಕೊಂಡರು.

ದೂರದಿಂದಲೇ ಭದ್ರಾವತಿ ಕಾಣುತ್ತಿತ್ತು. ಹೊಸದಾಗಿ ಆದ ಕಬ್ಬಿಣದ ಕಾರ್ಖಾನೆಯ ಹೊಗೆ-ಕೊಳವೆ ಆಕಾಶಕ್ಕೆ ಕರೀ ಹೊಗೆಯನ್ನು ಉಗುಳುತ್ತಿತ್ತು. ಭದ್ರಾ ಸೇತುವೆಯನ್ನು ಬಸ್ಸು ದಾಟುವಾಗ ಹೊಳೆಯಲ್ಲಿ ತುಂಬಿಹರಿಯುತ್ತಿದ್ದ ನೀರು ನೋಡಿದರು. ತುಂಗಾ ನದಿಯಲ್ಲೂ ನೀರು ಹೆಚ್ಚಾಗಿಯೇ ಇರಬೇಕು ಎಂದುಕೊಂಡರು.

ಭದ್ರಾವತಿ ದಾಟಿ ಶಿವಮೊಗ್ಗದ ಕಡೆಗೆ ಬಸ್ಸು ಹೊರಟಿತು. ಹತ್ತುವವರು ಹತ್ತುತ್ತಿದ್ದರು, ಇಳಿಯುವವರು ಇಳಿಯುತ್ತಿದ್ದರು. ಈ ಬಸ್ಸೇ ಒಂದು ಬದುಕಿನ ಹಾಗೆ ಅನ್ನಿಸಿತು ರಾಮಚಂದ್ರ ಭಟ್ಟರಿಗೆ. ಅವರವರ ಊರು ಬಂದ ಕೂಡಲೇ ಹೇಳದೆ ಕೇಳದೆ ಇಳಿದು ಹೋಗುವುದೇ. ಉಳಿದವರು ತಮ್ಮ ಸರದಿಗೆ ಕಾಯಬೇಕು. ಸಾವಿನ ಸೆಳಕಿನಲ್ಲಿ ಭಟ್ಟರ ಮನಸ್ಸು ಆಧ್ಯಾತ್ಮದತ್ತ ತಿರುಗಿತ್ತು. ಇನ್ನೇನು ಶಿವಮೊಗ್ಗ ಬಂತು ಎಂದು ಗಂಟು-ಮೂಟೆ ಸಿದ್ಧಮಾಡಿಕೊಂಡು ತಮ್ಮಂದಿರಿಗೂ ಹೇಳಿದರು. ತುಂಗಾನದಿಯ ಸೇತುವೆ ದಾಟಿದ ಕೂಡಲೇ ಬಸ್ಸು ನಿಲ್ಲಿಸಿ ಕೆಳಗಿಳಿದರು. ಎಡಗಡೆ ಸಾಗಿದರೆ ದೊಡ್ಡ ಬ್ರಾಹ್ಮಣರ ಬೀದಿ. ಸ್ವಲ್ಪ ದೂರದಲ್ಲೇ ರಂಗಾವಧಾನಿಗಳ ಹಳೇ ನಾಡಹೆಂಚಿನ ಮನೆ. ಜಗಲಿಯ ಮೇಲೆ ದರ್ಭೆ ಜೋಡಿಸುತ್ತಿದ್ದ ರಂಗಾವಧಾನಿಗಳು,

"ಓ... ಬನ್ನಿ ಬನ್ನಿ. ನಿಮಗೋಸ್ಕರಾನೇ ಕಾಯ್ತಿದ್ದೆ. ಜಯಪದ್ಮ ಬಸ್‌ಗೆ ಬಂದ್ರಾ? ಇವತ್ತು ಮೊದಲನೇ ದಿನ ನೋಡಿ, ಬಹಳ ಕೆಲಸ ಇರುತ್ತೆ. ಶಿಲೆ ತಂದಿದೀರ ತಾನೆ? ಈ ಕಡೆ ಬನ್ನಿ. ಈ ಕೋಣೆಯಲ್ಲಿ ನಿಮ್ಮ ಸಾಮಾನೆಲ್ಲ ಇಡಿ. ಸ್ವಲ್ಪ ಕಾಫಿ ತಗೋತೀರೋ...?" ಎಂದು ಪಟಪಟ ಮಾತು ಆರಂಭಿಸಿದರು.

ರಾಮಚಂದ್ರ ಭಟ್ಟರು ಹಮ್ಮಿಣೆಯಿಂದ ದುಡ್ಡು ತೆಗೆದು ಅವರಿಗೆ ಕೊಡುತ್ತಾ,

"ಅವಧಾನಿಗಳೇ, ನಮಗೇನೂ ತಿಳೀದು. ಎಲ್ಲಾ ನೀವೇ ಸಾಂಗವಾಗಿ ನಡೆಸಿಕೊಡಬೇಕು" ಎಂದು ಅವರ ಕಾಲಿಗೆ ಬಿದ್ದರು.

"ನೀವೇನು ಯೋಚ್ನೆ ಮಾಡಬೇಡಿ. ನಂಗೆ ಭಾರ ವಹಿಸಿ ಕೊಟ್ಟಿದೀರೋ ಇಲ್ವೋ. ಇನ್ನೆಲ್ಲ ಮರೆತುಬಿಡಿ. ಇಗೋ ನಿಮಗೆ ಉಡೋದಕ್ಕೆ ಹೊದಿಯೋದಕ್ಕೆ ಬಿಳೀ ಬಟ್ಟೆಗಳು ಜೋಡಿಸಿಟ್ಟಿದೀನಿ. ಮೂರು ಜನ ತಾನೆ? ಇನ್ನು ಐದು ದಿನ ಇದೇ ನಿಮ್ಮ ಡ್ರೆಸ್ಸು. ಬಟ್ಟೆ ಬದಲಾಯಿಸ್ಕೊಂಡು ಬನ್ನಿ. ಹೊತ್ತಾಗುತ್ತೆ" ಎಂದು ಅವಧಾನಿಗಳು ಅವಸರ ಮಾಡಿದರು.

ಮನೆಯ ಹಿಂದೆಯೇ ಹೊಳೆ, ರೈಲಿನಂತೆ ಉದ್ದವಾದ ಮನೆ, ಪಡಸಾಲೆ, ನಡುಮನೆ, ತೊಟ್ಟಿ, ಅಡಿಗೆಮನೆ, ಹಿತ್ತಲ ಪಡಸಾಲೆ ಹೀಗೆ ಮೆಟ್ಟಿಲು ಇಳಿಯುತ್ತಾ ತಗ್ಗಿಗೆ ಹೋಗಿ ಹಿತ್ತಲ ಕಡೆಯ ಬಾಗಿಲು ತೆರೆದರೆ ಹೊಳೆ ಕಾಣುತ್ತದೆ. ಅಲ್ಲಲ್ಲಿ ಮಂಟಪಗಳು. ಒಂದು ಮಂಟಪದಲ್ಲಿ ಏನೋ ಧಾರ್ಮಿಕ ವಿಧಿ ನಡೆಯುತ್ತಿತ್ತು. ಬೋಡಾದ ತಲೆ, ಉಟ್ಟ ಬಿಳೀ ಬಟ್ಟೆಗಳನ್ನು ನೋಡಿದರೆ ಇಂಥದೇ ಇರಬೇಕು ಎಂದುಕೊಂಡರು ಭಟ್ಟರು.

"ಅದೂ ನನ್ನ ತಮ್ಮ ಕೃಷ್ಣಾವಧಾನಿಯೇ ಮಾಡಿಸ್ತಿರೋದು. ಕಿಶನ್‌ಚಂದ್ ಅಂತ ಗುಜರಾತೀ ಬ್ರಾಹ್ಮಣರದ್ದು. ಸೂರಜ್ ಸ್ಟೋರ್ಸ್ ಗೊತ್ತಲ್ಲ ಅದರ ಓನರ್ರು. ಅವರದ್ದು ಇವತ್ತು ಒಂಬತ್ತನೇ ದಿನ" ಎಂದು ರಂಗಾವಧಾನಿಗಳು ಮಾಹಿತಿ ಕೊಟ್ಟು, ಅದರ ಪಕ್ಕದ ಮಂಟಪಕ್ಕೆ ಕರೆದುಕೊಂಡು ಹೋದರು.

"ಹ್ಞೂಂ ಬೇಗ ಬೇಗ ಸ್ನಾನ ಮಾಡಿ ಬನ್ನಿ. ಸಂಕಲ್ಪ ಮಾಡಿ ಕೆಲಸ ಶುರು ಮಾಡೋಣ" ಎಂದು ಬುಟ್ಟಿಯಲ್ಲಿ ತಂದಿದ್ದ ವಸ್ತುಗಳನ್ನು ಮಂಟಪದಲ್ಲಿ ಜೋಡಿಸಲು ಪ್ರಾರಂಭಿಸಿದರು.

ಚಂದ್ರ, ಸುಬ್ಬ ನೀರಿಗಿಳಿದರು. ರಾಮಚಂದ್ರ ಭಟ್ಟರು ಪಕ್ಕದ ಮಂಟಪದ ಕಡೆಗೆ ನೋಡಿದರು. ಅಲ್ಲೂ ಮೂರು ಜನ ಕರ್ತೃಗಳೇ. ತಾಯಿದೋ, ತಂದೇದೋ? ಸನಿಹದಲ್ಲಿ ಒಬ್ಬರು ಮುದುಕರು ಕೂತಿದ್ದರು. ಹುಡುಗರ ಸೋದರ ಮಾವ ಇರಬೇಕು. ಬಿಳೀಮಲ್ ಅಂಗಿ, ಮಲ್‌ಪಂಚೆ. ಚಿನ್ನದ ಗುಂಡಿಗಳು. ಗೋಧಿ ಬಣ್ಣದ ಜನ. ಕೃಷ್ಣಾವಧಾನಿಗಳು ಸರಸರ ಮಂತ್ರ ಹೇಳುತ್ತಾ ಯಾಂತ್ರಿಕವಾಗಿ ಶಾಸ್ತ್ರ ವಿಧಿಗಳನ್ನು ಮಾಡಿಸುತ್ತಿದ್ದರು. ಕರ್ತೃಗಳು ಕೂತು, ಎದ್ದು, ಜನಿವಾರವನ್ನು ಪ್ರಾಚೀನಾವೀತಿ, ಸವ್ಯ ಮಾಡಿಕೊಳ್ಳುತ್ತಾ ಪುರೋಹಿತರು ಹೇಳಿದಂತೆ ಮಾಡುತ್ತಿದ್ದರು. ಈ ಡ್ರಿಲ್ಲಿನಲ್ಲಿ ಸತ್ತವರ ನೆನಪಾದರೂ ಬರುತ್ತದೋ ಇಲ್ಲವೋ ಎಂದುಕೊಳ್ಳುತ್ತಾ ಭಟ್ಟರು ಸೋಪಾನ ಇಳಿದು ಕೊರೆಯುವ ಹೊಳೆಯ ನೀರಿನಲ್ಲಿ

ಮುಳುಗುಹಾಕಿದರು.

ಮುಂದೆ ನಾಲ್ಕು ಗಂಟೆಗಳ ಕಾಲ ಬಿಡುವಿಲ್ಲದ ಶಾಸ್ತ್ರ ವಿಧಿಗಳು. ನಡುನಡುವೆ ಹೊಳೆಗಿಳಿದು ಮುಳುಗುವುದು. ಬಿಸಿಲೇರಿದಂತೆ ಚಳಿಮುರಿದು ಮೈಮೇಲೆಯೇ ನೀರು ಒಣಗುವುದು. ಒದ್ದೆ ಬಟ್ಟೆ ಆರುವಷ್ಟರಲ್ಲಿ ಮತ್ತೆ ಸ್ನಾನ.

ಪಿತೃ, ಪಿತಾಮಹ, ಪ್ರಪಿತಾಮಹರ ಹೆಸರು ಹೇಳುತ್ತಾ ಕೃಷ್ಣಚಂದ್ರ ಭಟ್ಟ, ರಾಮಚಂದ್ರ ಭಟ್ಟ, ಕೃಷ್ಣಚಂದ್ರ ಭಟ್ಟ ಎಂದು ಹೆಸರುಗಳು ಪುನರಾವರ್ತನೆ ಆಗುವುದನ್ನು ಗಮನಿಸುತ್ತಾ ರಾಮಚಂದ್ರ ಭಟ್ಟರು ಗೋತ್ರ ಪ್ರವರ ಹೇಳಿಕೊಂಡು ವಸಿಷ್ಠ ಉಪಮನ್ಯು ಇಂದ್ರ ಪ್ರಮದ ತ್ರಯಾ ಋಷೇಯ ಪ್ರವರಾನ್ವಿತ ಆಶ್ವಲಾಯನ



ಸೂತ್ರ ಋಕ್ ಶಾಖಾಧ್ಯಾಯೀ ರಾಮಚಂದ್ರ ಶರ್ಮಣಃ ಅಹಂಭೋ ಅಭಿವಾದಯೇತ್ ಅಭಿವಾದಯಾಮಿ ಎಂದು ಪಿತೃಗಳಿಗೆ ನಮಿಸುವಾಗ ಕಿವಿ ಚುರುಕಾಯಿತು. ಪಕ್ಕದ ಮಂಟಪದಲ್ಲೂ ಅದೇ ಕ್ರಿಯೆ ನಡೆಯುತ್ತಿತ್ತು. ಅಲ್ಲೂ ಪಿತೃ, ಪಿತಾಮಹ, ಪ್ರಪಿತಾಮಹರ ಹೆಸರು ಹೇಳುತ್ತಿದ್ದರು: ಕಿಶನ್‌ಚಂದ್, ರಾಮಚಂದ್, ಕಿಶನ್‌ಚಂದ್. ಅವರದ್ದೂ ವಸಿಷ್ಠ ಗೋತ್ರ. ಆಶ್ವಲಾಯನ ಸೂತ್ರ. ಋಕ್‌ಶಾಖಾಧ್ಯಾಯಿಗಳು. ತ್ರಯಾ ಋಷಿಗಳೂ ಅವರೇ. ಎಲಾ! ಎಂದು ಒಂದು ಕ್ಷಣ ನಿಬ್ಬೆರಗಾದರು ರಾಮಚಂದ್ರ ಭಟ್ಟರು. ಹಾಗಾದರೆ ಇವರು ಯಾವುದೋ ಕಾಲದಲ್ಲಿ ನಮ್ಮ ವಂಶದವರೇ ಆಗಿರಬಹುದೇನೋ ಎನ್ನಿಸಿ ಮೈ ಜುಂ ಎನ್ನಿಸಿತು. ಅವರನ್ನೂ ತನ್ನ ತಮ್ಮಂದಿರನ್ನೂ ನೋಡಿದರು. ಅವರು ಗೋಧಿ ಬಣ್ಣ, ಇವರು ಎಣ್ಣೆಗೆಂಪು. ತಲೆ ಬೋಡುಗುಂಡು ಹೊಡೆಸಿರುವುದರಿಂದ ಗುಂಡಾಗಿ ಕಾಣುತ್ತಿದೆ. ಆ ಮೂಗು! ನೀಳವಾಗಿ ಎಲ್ಲಾ ಒಂದೇ ಸಮ ಕಾಣಿಸುತ್ತಿವೆ. ಹುಬ್ಬಿನ ಆಕಾರದಲ್ಲೂ ಒಂದು ಏಕರೂಪತೆ ಕಾಣುತ್ತಿದೆ. ಅಗಲವಾದ ಕಣ್ಣುಗಳು ಅವೇ. ತನ್ನ ಅಪ್ಪನದೂ ಹೀಗೇ ಇತ್ತಲ್ಲವೇ? ಮುಂದಿನ ಕ್ರಿಯೆಗಳನ್ನು ಏನೋ ಒಂದು ಸಂಭ್ರಮ, ಬೆರಗಿನಲ್ಲಿ ಮುಗಿಸಿದ ರಾಮಚಂದ್ರ ಭಟ್ಟರು ಮಧ್ಯಾಹ್ನ ಊಟವಾದ ಮೇಲೆ ರಂಗಾವಧಾನಿಗಳ ಹತ್ತಿರ ಆ ಮಾತು ಎತ್ತಿದರು.

"ಅವರು ಗುಜರಾತಿಗಳು, ನೀವು ಸ್ಥಳವಂದಿಗರು. ಎಲ್ಲಿಂದೆಲ್ಲಿಗೆ ಸಂಬಂಧ? ಎಲ್ಲೋ ಸಾವಿರಾರು ವರ್ಷದ ಹಿಂದೆ ಗೋತ್ರ ಕವಲಾಗಿರಬಹುದೇನೋ" ಎಂದು ಮಾತು ಮುಗಿಸಿದರು ಅವಧಾನಿಗಳು. ರಾಮಚಂದ್ರ ಭಟ್ಟರಿಗೆ ಸಮಾಧಾನವಾಗಲಿಲ್ಲ. ಮುಂದಿನ ಮೂರು ದಿನಗಳಲ್ಲಿ ಅವೇ ಮಾತುಗಳು ಮತ್ತೆ ಮತ್ತೆ ಕಿವಿಯ ಮೇಲೆ ಬೀಳುತ್ತಿವೆ. ರಾಮಚಂದ್–ರಾಮಚಂದ್ರ ಭಟ್ಟ, ಕಿಶನ್‌ಚಂದ್–ಕೃಷ್ಣಚಂದ್ರ ಭಟ್ಟ. ಅಜ್ಜನ ಹೆಸರನ್ನು ಮೊಮ್ಮಗನಿಗೆ ಇಡುವ ಅದೇ ಸಂಪ್ರದಾಯ. ಅದೇ ವಸಿಷ್ಠ ಗೋತ್ರ. ಕಣ್ಣು, ಮೂಗು, ಏಕಾಗಿರಬಾರದು?

ಮೂರನೆಯ ದಿನ ಸಂಜೆ ಪೇಟೆಯಲ್ಲಿ ಅಡ್ಡಾಡಿ ಬರುವುದಾಗಿ ಹೇಳಿದ ರಾಮಚಂದ್ರ

ಭಟ್ಟರು ನೇರ ಸೂರಜ್ ಸ್ಟೋರ್ಸ್‌ಗೆ ಹೋದರು. ಅದು ಬಾಗಿಲು ಹಾಕಿತ್ತು. ಅಲ್ಲಿ ಇಲ್ಲಿ ವಿಚಾರಿಸಿ ಕಿಶನ್‌ಚಂದ್ ಅವರ ಮನೆಯನ್ನು ಪತ್ತೆ ಹಚ್ಚಿದರು. ಎಚ್‌ಪಿಸಿ ಚಿತ್ರಮಂದಿರದ ಹಿಂದಿನ ರಸ್ತೆಯಲ್ಲೊಂದು ಭವ್ಯ ಬಂಗಲೆ. ಮುಂದುಗಡೆಯ ಲಾನಿನಲ್ಲಿ ಕೊಳಲು ಹಿಡಿದ ಕೃಷ್ಣನ ಪ್ರತಿಮೆ. ಒಂದು ಸಣ್ಣ ಕಾರಂಜಿ. ಭಟ್ಟರು ಒಳಗೆ ಹೋದಾಗ ಕಾವಲು ಸಿಪಾಯಿ ವಿಚಾರಿಸಿ ಒಳಗೆ ಬಿಟ್ಟ. ದೊಡ್ಡ ಹಾಲ್ ಪ್ರವೇಶಿಸುತ್ತಿದ್ದಂತೆಯೇ ಶ್ರೀಮಂತಿಕೆಯ ಪರಿಚಯವಾಗುವಂತಿತ್ತು. ಅಲ್ಲಿ ಒಂದು ದೊಡ್ಡ ಫೋಟೋವನ್ನು ಗೋಡೆಗೆ ಏರಿಸುವ ಸನ್ನಾಹ ನಡೆದಿತ್ತು, ಭಟ್ಟರು ತನ್ಮಯರಾಗಿ ನೋಡುತ್ತಾ ನಿಂತರು. ಸಾಲುಸಾಲು ಫೋಟೋಗಳು. ತೀಡಿತೀಡಿ ಸುತ್ತಿದ ಗುಜರಾತಿ ಪೇಟ, ಭಾರಿಮೀಸೆ ಹೊತ್ತ ಮುಖಗಳು. ಮನೆತನದ ಹಿಂದಿನ ಹಿರಿಯರ ಹಳೆಯ ಚಿತ್ರಗಳು. ಆ ಸಾಲಿನಲ್ಲಿ ಕಿಶನ್‌ಚಂದ್ ಅವರ ಫೋಟೋವೂ ಸೇರುತ್ತಿತ್ತು.

ರಾಮಚಂದ್ರ ಭಟ್ಟರಿಗೆ ತಮ್ಮ ನುನೆಯ ಪಡಸಾಲೆಯಲ್ಲಿ ಹಾಕಿರುವ ಅಜ್ಜ ಮುತ್ತಜ್ಜರ ಭಾವಚಿತ್ರಗಳು ಕಣ್ಣಿಗೆ ಕಟ್ಟಿದವು. ಪೇಟಕಟ್ಟುವ ಶೈಲಿಯಲ್ಲಿ ಸ್ವಲ್ಪ ಬದಲಾವಣೆ ಕಂಡರೂ ಒಟ್ಟು ಭಾಮ ಹೀಗೇ ಇದೆಯಲ್ಲವೇ? ಮಾಗಿರುವ ಆ ಮೀಸೆಗಳು, ಬಾಗಿರುವ ಹುಬ್ಬುಗಳು!

ಮನೆಯವರು ಬಂದು ಭಟ್ಟರನ್ನು ಮಾತನಾಡಿಸಿ ಕೂಡಿಸಿದರು. ಆ ಮುದುಕ ಬಂದು ಸನಿಹ ಕೂತರು. ಮೃತ ಕಿಶನ್‌ಚಂದ್ ಅವರ ತಾಯಿ ಕೂಡ ಕುತೂಹಲದಿಂದ ಬಂದು ಕೂತರು. ಸ್ವಲ್ಪಹೊತ್ತಿಗೆ ಮನೆಮಂದಿಯೆಲ್ಲಾ ಅಲ್ಲಿ ಸೇರಿದರು. ರಾಮಚಂದ್ರ ಭಟ್ಟರು ಮೂರು ದಿನಗಳಿಂದ ತಮ್ಮನ್ನು ಕಾಡುತ್ತಿದ್ದ ಸಂಗತಿಗಳನ್ನು ಬಿಚ್ಚಿಡುತ್ತಾ ಅರಳುವ ಕಣ್ಣುಗಳನ್ನು ಗಮನಿಸುತ್ತಿದ್ದರು. ಗೋಜಲುಗಳನ್ನು ಬಿಡಿಸುತ್ತಾ ಒಂದೊಂದೇ ಎಳೆಯನ್ನು ವಿಂಗಡಿಸತೊಡಗಿದರು.

ತಮ್ಮನ್ನು ಬಡಗನಾಡು ಬ್ರಾಹ್ಮಣರು ಎನ್ನುತ್ತಾರೆ ಎಂದರೆ ಉತ್ತರದ ಕಡೆಯಿಂದ ಈಕಡೆಗೆ ವಲಸೆ ಬಂದವರು. ಸುಮಾರು ನಾನೂರು ವರ್ಷಗಳ ಹಿಂದೆ ವಿಜಯನಗರ ಸಂಸ್ಥಾನ ಪತನ ಹೊಂದಿದಾಗ ಇಬ್ಬರು ಸೋದರರು ಈ ಕಡೆಗೆ ವಲಸೆ ಬಂದರಂತೆ. ನಾವು ಅವರ ಸಂತಾನ. ನಮ್ಮ ಮನೆಯಲ್ಲಿ ವಂಶವೃಕ್ಷ ಇದೆ. ರಾಮಚಂದ್ರ, ಕೃಷ್ಣಚಂದ್ರ ಎಂಬ ಹೆಸರುಗಳು ವಂಶದಲ್ಲಿ ಪುನರಾವರ್ತನೆ ಆಗುತ್ತವೆ.

ರಾಮಚಂದ್ರ ಭಟ್ಟರು ಮಾತನಾಡುತ್ತಾ ಅಜ್ಜಿಯ ಕಣ್ಣುಗಳು ಕೋರೈಸಿದವು. ಮೆಲ್ಲನೆ ಒಳಗೆ ಹೋಗಿ ಹಳೆಯ ಪೆಠಾರಿಯಿಂದ ಒಂದು ಕಾಗದದ ಸುರುಳಿಯನ್ನು ತಂದು ಮೇಜಿನಮೇಲೆ ಬಿಡಿಸಿದರು. ಅದು ಅವರ ವಂಶವೃಕ್ಷ. ಗುಜರಾತಿ ಭಾಷೆಯಲ್ಲಿ ಬರೆದದ್ದು, ಸುಮಾರು ಐನೂರು ವರ್ಷಗಳ ವಂಶದ ಇತಿಹಾಸ ಅಲ್ಲಿ ಘನೀಭೂತವಾಗಿತ್ತು. ಬೇರೆ ಬೇರೆ ಕಾಲಗಳಲ್ಲಿ ಬೇರೆಬೇರೆ ಶಾಖೆಗಳಲ್ಲಿ ಸೇರ್ಪಡೆಗಳಾಗಿದ್ದವು. ಅಜ್ಜಿ ಒಂದು ಶಾಖೆಯನ್ನು ತೋರಿಸುತ್ತಾ ಒಂದು ಬರಗಾಲದಲ್ಲಿ ದಕ್ಷಿಣದ ಕಡೆ ವಲಸೆಹೋದವರು ಅವರೆಂದು ಹೇಳಿ ಅವರೇ ನಿಮ್ಮ ಪೂರ್ವಜರು ಏಕಿರಬಾರದು ಎಂದರು. ಅಲ್ಲಿ ನಿಂತುಹೋದ ಶಾಖೆಗೆ ತಮ್ಮ ವಂಶವೃಕ್ಷವನ್ನು ಜೋಡಿಸಿದರೆ ಬೃಹತ್ ವೃಕ್ಷವೊಂದು ಆವಿರ್ಭವಿಸುತ್ತದೆ ಎನ್ನಿಸಿತು ಭಟ್ಟರಿಗೆ.

ಅಜ್ಜಿ, ಭಟ್ಟರನ್ನು ದೇವರ ಮನೆಗೆ ಕರೆದುಕೊಂಡು ಹೋದರು. ಅಲ್ಲಿನ ಮಂದಾಸನದಲ್ಲಿ ನಸುನಗುತ್ತಾ ನಿಂತ ಕೃಷ್ಣನ ಮೂರ್ತಿಯನ್ನು ಕಂಡಾಗ ತಮ್ಮ ಮನೆಯ ದೇವರ ಮಂಟಪ ದೆದುರೇ ನಿಂತಹಾಗೆ ಅನ್ನಿಸಿ ರಾಮಚಂದ್ರ ಭಟ್ಟರು, ಕಣ್ಣುತುಂಬಿ ಕಂಠ ಗದ್ಗದಿತವಾಗಿ ದೀರ್ಘದಂಡ ನಮಸ್ಕಾರ ಮಾಡಿದರು. ●



ನನ್ನೂರು ನನ್ನ ಜನ



# ಊರು ನನ್ನದಲ್ಲ, ಜನರು ನನ್ನವರಲ್ಲ

● ಡಾ। ಶಿವರಾಮ ಕಾರಂತ

'ನನ್ನ ಊರು, ನನ್ನ ಜನ' ಎಂದು ಹೇಳುವುದು ಸುಲಭ; ಆ ರೀತಿ ತಿಳಿಯುವುದು ಸುಲಭವಲ್ಲ!

ನಾನು ಹುಟ್ಟಿದ ಊರು ಕೋಟ: ಓದಿದ ಊರು ಕುಂದಾಪುರ. ಮುಂದೆ ಅಲೆದಾಡಿದ ನಾಡು ಬಹುಮಟ್ಟಿಗೆ ಕರ್ನಾಟಕ. ಅಂಚೆಯ ವಿಳಾಸಕ್ಕೆ ಇಷ್ಟು ಸಾಕು.

ಆ ನನ್ನ ಹುಟ್ಟಿದ ಊರು ಕೋಟದ ನಿಕಟ ಪರಿಚಯ 1902ರಿಂದ 1920ರ ತನಕ ಇದ್ದೀತು. ಆಗ ಊರನ್ನು ತಿಳಿಯುವ ಯೋಗ್ಯತೆ ಆ ಬಾಲ್ಯದಲ್ಲಿ ಇತ್ತೇ? ಆ ಊರು, ಊರಿನ ಹಬ್ಬಗಳು, ಹಸುರು ಹಚ್ಚೆ, ಹಬ್ಬ ಹುಣ್ಣಿಮೆ ನನಗೆ ಸಂತೋಷ ಕೊಟ್ಟಿವೆ. ಆದರೆ ಜನ ನನ್ನವರು ಅನ್ನಲು—ನಾನು ನೋಡಬಹುದಾಗಿದ್ದ ಜನರು ಸಾವಿರಾರು! ಹತ್ತು ಹದಿನೈದು ಗ್ರಾಮದ ನಿವಾಸಿಗಳನ್ನು—ಜಾತ್ರೆಗಳಲ್ಲಿ, ಸಂತೆಗಳಲ್ಲಿ ಕಂಡಿರುತ್ತೇನೆ! ಆದರೆ, ಶಾಲೆಯಲ್ಲಿ ಆರೆಂಟು ಸಹಪಾಠಿಗಳ ಸ್ನೇಹ, ಊರಲ್ಲಿ ಹತ್ತಾರು ಬಂಧು-ಬಾಂಧವರ ಪರಿಚಯವಿದ್ದಿರಬಹುದು.

ಅದರಿಂದ ಹೇಳುವಲ್ಲಿ-ಬಹುಮಂದಿ ಬಡವರು. ಹೊಟ್ಟೆಯ ನಿರ್ವಹಣೆಯಲ್ಲಿ ಸಮಯ ಕಳೆದವರು. ಅವರ ಜೀವನ ಬಲುಬಲು ಸರಳ; ಅವರ ಉಡುಗೆ ಬಲುಬಲು ವಿರಳ. ಸಾಕಷ್ಟು ಮಂದಿ ವಿರಕ್ತರಲ್ಲದ ಕೌಪೀನಧಾರಿಗಳು! ಗಾದೆಯ ಮಾತಿನಂತೆ 'ಕೌಪೀನವಂತ: ಬಲು ಭಾಗ್ಯವಂತ!'ರು ಅವರ ಪಾಲಿಗೆ ಅರೆಹೊಟ್ಟೆಯಿಂದ ತೃಪ್ತಿ. ಅವರು ಸಾಮೂಹಿಕ ಜಾತ್ರೆ, ಸಂತೆ, ಬಯಲಾಟಗಳಿಂದ ತೃಪ್ತಿಪಟ್ಟಿರಬೇಕು! ಆ ವೇಳೆಯಲ್ಲಿ ಒಂದಿಷ್ಟು ಓಗ್ಗು, ನಗು ಅವರ ಮುಖದಲ್ಲಿ ಕಾಣಿಸುತ್ತಿತ್ತು.

(ವರ್ಣಪಾರದರ್ಶಿಕೆಗಳು: ಎಚ್. ಎಸ್. ಅಲ್ಲಮಪ್ರಭು)



**1902ರಿಂದ ತಮ್ಮೂರಿನ ಜನರನ್ನು ನೋಡುತ್ತಿರುವ 'ಕಡಲ ತೀರದ ಭಾರ್ಗವ' ಡಾ। ಶಿವರಾಮ ಕಾರಂತ, ಏಳೆಂಟು ದಶಕಗಳಲ್ಲಿ ಏನೇನಾಗಿ ಹೋಯಿತು ಎಂದು ನೋಡಿದ್ದಾರೆ. 'ಆಗ ಅರೆಹೊಟ್ಟೆ ಇದ್ದರೂ ತೃಪ್ತಿ ಇತ್ತು. ಈಗ ಅಗತ್ಯಗಳು ಹೆಚ್ಚಾಗಿ ತೃಪ್ತಿ ಎನ್ನುವುದು ಕೈಗೆಟುಕದ ಚಂದ್ರನಂತಾಗಿದೆ' ಎನ್ನುತ್ತಾರೆ ಕಳಕಳಿ ತುಂಬಿ.**

**ಆತ್ಮಕಥಾ ರೂಪವೂ ಆಗಿರುವ ಈ ಅನಿಸಿಕೆಗಳು ಡಾ। ಶಿವರಾಮ ಕಾರಂತರ ಬದುಕಿನ ವಿಶೇಷ ದಾಖಲೆಯೂ ಹೌದು.**

ಆ ಕಾಲಕ್ಕೆ ಆಚೀಚೆ ಹೋಗಿ ಬರುವವರು ತಮ್ಮ ಕಾಲನ್ನೇ ನಂಬಿದವರು. ಗಾಡಿಗಳಲ್ಲಿ ಹೋದವರು ಕಡಿಮೆ, ಜಟಕಾ ಬಂಡಿ ಏರಿದವರು ಇನ್ನೂ ಕಡಿಮೆ. ಪರ ಊರುಗಳಿಗೆ—ಬಸ್ಸಿನಲ್ಲಿ, ರೈಲಿನಲ್ಲಿ, ಉಗಿ ಹಡಗಿನಲ್ಲಿ ಹೋದವರು ಇನ್ನೂ ಕಡಿಮೆ. ನಾನು ಪಟ್ಟ ಸಂತೋಷ—ಸಮ ವಯಸ್ಸಿನ ಅರೆಬತ್ತಲೆ ಬಾಲಕರೊಡನೆ ಆಟವಾಡಿ! ಹಾಯ್‌ಸ್ಕೂಲಿನಲ್ಲಿರುವಾಗ ಪೂರ್ಣವಸನಧಾರಿಗಳಾದ ವಿದ್ಯಾರ್ಥಿಗಳೊಡನೆ ಸ್ನೇಹ ಲಭಿಸಿ-ಅವರ ಮತ್ತು ನನ್ನ ಅಭಿರುಚಿಗಳಿಗೆ ವಿಶೇಷ ವ್ಯತ್ಯಾಸವಿರಲಿಲ್ಲ.

ಈ ಮೊದಲ ಅಂಕ ಮುಗಿದದ್ದು—1920ರ ವೇಳೆ ಕಾಲೇಜನ್ನು ಸೇರಿದಾಗ; ಗಾಂಧೀಜಿಯ ಹೆಸರಲ್ಲಿ ಕಾಲೇಜು ಬಿಟ್ಟಾಗ. ಅನಂತರ ನಾಟಕ, ವರ್ತಮಾನ ಪತ್ರಿಕೆ, ಸಂಚಾರಗಳು ನನ್ನ ಸಮಯವನ್ನು ಕಬಳಿಸಿದುವು. ಭಾವ ಜೀವನ, ಬೌದ್ಧಿಕ ಜೀವನ ನನ್ನನ್ನು ರೂಪಿಸತೊಡಗಿದುವು. ಈ ನಡುವೆ ಎರಡು ಮಹಾಯುದ್ಧಗಳು ನಡೆದು ಹೋದುವು! 1942ರಲ್ಲಿ ಎರಡನೆಯ ಮಹಾಯುದ್ಧ ಮುಗಿಯಿತು. 1947ರಲ್ಲಿ ಬ್ರಿಟಿಷರ ಆಳ್ವಿಕೆ ಮುಗಿಯಿತು. ಆಗಾಗಲೇ ನಾನು ಕೈಯಲ್ಲಿ ಕಾಸಿಲ್ಲದ, ಹಲವಾರು ಅಭಿರುಚಿಗಳನ್ನು ಬೆಳೆಯಿಸಿಕೊಂಡ ಒಬ್ಬ ಬರಹಗಾರನಾದೆ, ರಸಿಕನಾದೆ; ಭಾವಜೀವನ, ಬೌದ್ಧಿಕ ಜೀವನಗಳಲ್ಲಿ ಆಸಕ್ತರಾದ ಹುಟ್ಟಿ ಬೆಳೆದ ಊರ ಹೊರಗಿನ ಜನರ ಸಂಪರ್ಕ ಪಡೆದೆ. ಭಾರತ ದೇಶದ ವಿಸ್ತಾರದಲ್ಲಿ ಅಲೆದಾಡಿ ಅಲ್ಲಿನ ಶಿಲ್ಪವಾಸ್ತುಗಳ ಅವಶೇಷಗಳಿಂದಾಗಿ, ದೇಶದ ಗತ ವೈಭವ, ಗತ ಕಲಾ ಸಂಪತ್ತುಗಳ ಪರಿಚಯ ಮಾಡಿಕೊಂಡೆ. ಆಗ ನನ್ನ ಬದುಕಿಗೆ ಬಹುಮುಖದ ಚಟುವಟಿಕೆ ಸೇರಿಕೊಂಡಿತು.

ಬಡತನ ಇದ್ದರೂ ಅದು ದೊಡ್ಡ ಪ್ರಶ್ನೆ ಆಗಿರಲಿಲ್ಲ—ನನಗೆ. ಆದರೆ, ನನ್ನ ಸುತ್ತ ಹರಡಿದ ಭಾವನಾ ಸಂಪತ್ತಿನ ದಾರಿದ್ರ್ಯ ಅತಿಯಾಗಿ ಕಂಡಿತ್ತು! ವಿದ್ಯಾವಂತರಲ್ಲಿ ಅದು ಕಾಣಿಸಿತು. ಅವರ ಬೌದ್ಧಿಕ ಜೀವನ ಓದಿ, ಪಾಸಾಗಿ, ಹೊಟ್ಟೆ ತುಂಬಿಸಿಕೊಂಬ ನೌಕರಿಯಲ್ಲಿ ಮುಗಿಯುತ್ತಿರುವುದನ್ನು ಕಂಡೆ.

ಆ ವೇಳೆ—ನಾಡಿಗಾಗಿ ಶ್ರಮಿಸಿದ ಕೆಲಕೆಲವು ಹಿರಿಯರ ಪರಿಚಯವಾಗಿತ್ತು. ದೂರದಿಂದ ಹಲವರು; ಹತ್ತಿರದಿಂದ ಕೆಲವರು! ಒಂದಿಷ್ಟು ಹೆಮ್ಮೆಯೇ ಉಂಟಾಗಿತ್ತು ಅವರ ತ್ಯಾಗಶೀಲತೆ, ನಡತೆಗಳ ಬಗ್ಗೆ.

ಮಧ್ಯ ವಯಸ್ಸನ್ನು ದಾಟಿದ ಬಳಿಕ-ಓದಿನಿಂದ, ಸಂಚಾರದಿಂದ ಭಾರತದ ಹೊರಗಣ ದೇಶಗಳ ಪರಿಚಯ ಸಿಕ್ಕಿತು. ನೋಡಿ, ಓದಿ, ಆ ಜಗತ್ತಿನ ಎಡೆಯಲ್ಲಿ ಸ್ವತಂತ್ರ ಭಾರತದ ಹಿರಿಯರು ಬೆಳೆದ ರೀತಿಯನ್ನು ಕಂಡೆ! ಅವರ ಜೀವನ ಬಹುಮುಖಿಯಾದ ರೂಪ ಪಡೆದಿತ್ತು! ವ್ಯಾಪಾರ ವ್ಯವಹಾರಗಳಲ್ಲಿ ಅದು ವಿಸ್ತರಿಸಿತ್ತು! ವಿದ್ಯಾಭ್ಯಾಸದಿಂದ ಬೆಳೆದಿತ್ತು! ರಾಜಕೀಯ ಕ್ಷೇತ್ರದಲ್ಲಿ 'ಅದೊಂದೇ ಬದುಕಿನ ದಾರಿ' ಎಂಬ ತೃಷೆಯನ್ನು ಅನೇಕ ಹಿರಿಯರಲ್ಲಿ ಬೆಳೆಯಿಸಿತ್ತು!

ಆದರೆ, ಈ ದೆಸೆಗೆ ಕಾರಣ—1950ರ ತರುವಾಯ ನಾನು ಅಲೆದಾಡಿದ ದೇಶಗಳು; ಓದಿ

ತಿಳಿದ ಸಂಗತಿಗಳು; ವಿವಿಧ ವಿಜ್ಞಾನ ಕ್ಷೇತ್ರಗಳಲ್ಲಿ, ತಾಂತ್ರಿಕ ಸಾಧನೆಗಳಲ್ಲಿ ಜಗತ್ತಿನಲ್ಲಿ ಉಂಟಾದ ಕ್ರಾಂತಿ! ಆಗ ಅನೇಕ ದೇಶಗಳ, ಅಲ್ಲಿನ ಪ್ರಬುದ್ಧರ ಪರಾಕ್ರಮ ಮತ್ತು ಸಾಧನೆಗಳು ನನಗೆ ಕಾಣಿಸಿದುವು, ಕಂಡೆ.

ಮುಂದಣ ದಶಕಗಳು ಸರಿದಂತೆ, 1950ರ ತರುವಾಯ, ನಮ್ಮ ಊರಿನ ಹಾದಿ ಬೀದಿಗಳು ವಿಸ್ತರಿಸಿದುವು; ಉದ್ಯಮ, ಕೃಷಿಗಳ ಚಟುವಟಿಕೆ ಹೆಚ್ಚಿತು; ವ್ಯಾಪಾರ ವ್ಯವಹಾರ ಹೆಚ್ಚಿತು. ಆದರೆ ಅವನ್ನು ಹೆಚ್ಚಿಸಿದ ರೀತಿ ಸಂತೋಷ ಕೊಡದಾಯಿತು. ಅದು ಜಗತ್ತಿನೊಡನೆ ಬೆಳೆಯಿಸಿಕೊಂಡ ಸ್ಪರ್ಧಾ ಶಕ್ತಿಯಿಂದಲ್ಲ, ಔದ್ಯೋಗಿಕ ಕ್ರಾಂತಿಯಿಂದಲ್ಲ.

ನಮ್ಮ ದೇಶದ ಜನರ ಸಂಖ್ಯೆ ಅನಂತರ (1950) ಇಮ್ಮಡಿಸಿತ್ತು. ಸ್ವತಂತ್ರ ಭಾರತದ ಕೇಂದ್ರ ಮತ್ತು ರಾಜ್ಯ ಸರಕಾರಗಳ ಒಟ್ಟು ಆಯ-ವ್ಯಯ ವರ್ಷಕ್ಕೆ 2,500 ಕೋಟಿ ಇದ್ದುದು ಹಲವು ಪಾಲು ಹೆಚ್ಚಿತು. ಸಾರ್ವಜನಿಕ ಸೇವೆಗಳ ವೆಚ್ಚ ವಿಪರೀತ ಬೆಳೆದುದು ನಿಜವೇ. ಆದರೆ, ರೂಪಾಯಿಯ ಕೊಳ್ಳುವ ಶಕ್ತಿ ಹೇಗಿದೆ ಎಂಬುದನ್ನು ಯೋಚಿಸಿದರೆ ಆಶ್ಚರ್ಯವಾದೀತು. ನನ್ನ ಬಾಲ್ಯದಲ್ಲಿ ದ. ಕನ್ನಡದಲ್ಲಿ ತೆಂಗಿನಕಾಯಿ ರೂಪಾಯಿಗೆ ಹದಿನಾರು ಸಿಕ್ಕಿದ್ದರೆ, ಸ್ವಾತಂತ್ರ್ಯ ದೊರೆತ 1950ರ ಸುಮಾರಿಗೆ ಅದು ರೂಪಾಯಿಗೆ 4. ಈಗ ಅದು ಒಂದಕ್ಕೆ 4-5 ರೂಪಾಯಿ!

ಸ್ವಾತಂತ್ರ್ಯ ದೊರೆತ ಅವಧಿಯಲ್ಲಿ ಅಕ್ಕಿಯ ಬೆಲೆ ಮುಡಿಗೆ (37 Kg.) ರೂ. 14-15 ರೊಳಗಿತ್ತು. ಈಗ ಅದು kgಗೆ 4-5 ಅಥವಾ ಹೆಚ್ಚು. ಆರಂಭದಲ್ಲಿ ರೂ. 100ರ ನೀಲ ನೋಟಿಗೆ ಬಲು ಗೌರವ ಇದ್ದರೆ, ಈಗ ಅದು ಏನನ್ನೂ ಕೊಳ್ಳಲಾರದ ಕಾಗದದ ಚೂರು ಆಗಿದೆ. 1950ರ ತರುವಾಯ ಬೆಳೆದ ವಿದ್ಯಾ ಸಂಸ್ಥೆಗಳು ಬೇಕಷ್ಟಿವೆ. ಅದನ್ನು ಸೃಷ್ಟಿಸುವ ತುಂಬಿಸುವ ಯೋಗ್ಯತೆ ನಾಡಿನ ಜನಸಂಖ್ಯೆಗೂ ಬಂದಿದೆ.

ನನ್ನ ಬಾಲ್ಯದ ಮಿತಜ್ಞಾನ, ದೇಶದ ವಿಷಯದಲ್ಲಿರುವ ಪರಮ ಅಜ್ಞಾನ—ಎಷ್ಟಿದ್ದರೂ, ನನ್ನ ಸುತ್ತಣ ಜನರು ಬಹಳ ಮಟ್ಟಿಗೆ ಬಡವರೆಂದು ಅನಿಸಿದ್ದರೂ, ಆ ಬಡತನದಲ್ಲೂ ಅವರು ತೃಪ್ತರು ಅನಿಸಿತ್ತು, ಧೃತಿ, ನೀತಿ ಎರಡೂ ಕೆಟ್ಟವರಾಗಿರಲಿಲ್ಲ. 'ಅವನು' ಕೊಟ್ಟುದನ್ನು ಗೊಣಗದೆ ಪಡೆದು ಬಾಳಿದರು. ಇಂದು ಮಾತ್ರ ಹಾಗಿಲ್ಲ.

ನಿಸ್ವಾರ್ಥ ಜೀವನಕ್ಕೆ ಮರ್ಯಾದೆ ಸಲ್ಲದ ಕಾಲ ಇಂದು. ಕೈಗೆಟುಕುವುದನ್ನು ದೋಚಲಾರದ ದಡ್ಡ, ಬದುಕಲು ಅಯೋಗ್ಯ. ಓಂದೆ ಹಣದ



ಗಳಿಕೆಯಲ್ಲಿ ಸಾವಿರ ರೂಪಾಯಿ ಸಂಬಳದ ಗುರಿಕಾರನಾಗಿದ್ದ, ಇವತ್ತು ಕೋಟಿ ರೂಪಾಯಿ ಏನು ಮಹಾ? ಅನಿಸಿದೆ. ಅದರ ಗಳಿಕೆಯಲ್ಲಿ ದೊರೆಯುವ ಯಶಸ್ಸೇ ಯಶಸ್ಸು! ಉಳಿದ ಯಾವ ಸಾಹಸವೂ ಮರ್ಯಾದೆಗೆ ಅರ್ಹವಲ್ಲ! ರಾಜಕೀಯದಲ್ಲಂತೂ ಇದೊಂದೇ ಗುರಿ.

ದಿ। ಗಾಂಧೀಜಿಯ ನೈತಿಕ ಮೌಲ್ಯದಿಂದ ನಾವು ಶತಯೋಜನ ದೂರ ಸರಿದು ಬಾಳುತ್ತಿರುವುದು ಕಾಣುತ್ತಿದೆ.

ಹೀಗೆಲ್ಲ ಹೇಳುತ್ತಿರುವ ನಾನು, ನನ್ನ ಊರವರ ಬಡತನ ಕಂಡವನಾದರೂ ಅವರಂತೆ ಹಸಿದ ಬಡತನ ನನ್ನದಾಗಿರಲಿಲ್ಲ. ಹಸಿದ ಕಾಲ ಅಲ್ಲಿ, ಇಲ್ಲಿ, ಒಂದೊಂದು ದಿನವಿರಬಹುದು. ಮುಂದೆ ಅದು ಬರಲಿಲ್ಲ. ಆದರೆ, ಇಂದಿನ ನಾಗರಿಕ ಸೌಕರ್ಯ, ಸಮೃದ್ಧಿಯ ನಡುವೆ ಓಡಾಡುವ ಜನರ ಮರ್ಯಾದೆಯ ಅಧಃಪತನ ನನ್ನ ತಲೆಯನ್ನು ತಗ್ಗಿಸುತ್ತಿದೆ. 'ನನ್ನ ಸುತ್ತಲೂ ಕವಿದ ಈ ಅಧಃಪತನದಲ್ಲಿ, ನಾನು ಪಾಲುಗಾರನಲ್ಲವೇ' ಎಂಬ ಪ್ರಶ್ನೆಯನ್ನು ಉತ್ತರಿಸುವ ಹೊಣೆ ನನಗಿದೆ.

ನಮ್ಮ ಜನರಿಗೆ ತೃಪ್ತಿ ಬರುವ ಕಾಲ ಎಂದಾದರೂ ಇದೆಯೇ ಎಂದು ಕೇಳಿದರೆ ಅವರು ದಿನೇ ದಿನೇ ತಮ್ಮ ಆವಶ್ಯಕತೆಗಳನ್ನು ಬೆಳೆಯಿಸಿಕೊಂಡು, ಹೋಗುವ ಗುರಿ, ರೀತಿ, ಪ್ರಯತ್ನ, ನಮ್ಮದಾದರೆ, ಅದಕ್ಕೆ ಮಿತಿಯೇ ಇಲ್ಲ, ಅದರಿಂದ ದೊರೆಯುವ ತೃಪ್ತಿ–ನಮಗೆ ಎಟುಕದ ವಸ್ತುವಾದೀತು. ಆ ದೃಷ್ಟಿಯಿಂದ ಈ ಶತಕದ ಆರಂಭದಲ್ಲಿ ನಾನು ಕಂಡ, ಇದ್ದುದರಲ್ಲಿ ತೃಪ್ತಿ ಪಡೆದ ಜನತೆ ಏನಿದ್ದರೂ 'ಅದು ಎಷ್ಟಿದ್ದರೂ, ಸಾಲದೆಂಬ' ನನ್ನ ಸುತ್ತಲಿನ ಜನರಿಗೆ ತೃಪ್ತಿ ಎಂಬುದು ಚಂದ್ರ. ಕೈಗೆಟುಕದ ಚಂದ್ರ. ಆ ರಾಮಚಂದ್ರ. ●

## ನಮ್ಮೂರು ಅಡ್ಯನಡ್ಕ

ಹಳ್ಳಿಗಾಡಿನ ಪುಟ್ಟ–ಚೊಕ್ಕ ನಗರ ಅಡ್ಯನಡ್ಕ. ಐತಿಹಾಸಿಕವಾಗಿ, ಈ ಊರು ಪ್ರಸಿದ್ಧವಲ್ಲವಾದರೂ ಇದಕ್ಕೆ ಇದರದ್ದೇ ಆದ ಯೋಗ್ಯತೆಯಿದೆ. ಇಲ್ಲಿನ ಜನರು ವಿನಯಶೀಲರು, ಸ್ನೇಹಪರರು ಮತ್ತು ಮಾನವೀಯ ದೃಷ್ಟಿಯುಳ್ಳವರು. ಒಂದು ಪ್ರಾಥಮಿಕ ಶಾಲೆ, ಇನ್ನೊಂದು ಪ್ರೌಢ ಶಾಲೆಯನ್ನು ಹೊಂದಿರುವ ಇದು ಕಲೆಗಳ ನೆಲೆವೀಡು. ಶಾಲೆಗಳಲ್ಲಿ ವಿವಿಧ ಕಲೆಗಳ ಬಗ್ಗೆ, ಸಾಂಸ್ಕೃತಿಕ ಕಾರ್ಯಕ್ರಮಗಳ ಬಗ್ಗೆ ವಿದ್ಯಾರ್ಥಿಗಳಿಗೆ ಅರಿವು ಮೂಡಿಸುವುದು ಇಲ್ಲಿನ ಅಧ್ಯಾಪಕರ ವೈಶಿಷ್ಟ್ಯ. ಇದು ಕರಾವಳಿಯ ಸಾಂಸ್ಕೃತಿಕ ಕಲೆಯಾದ ಯಕ್ಷಗಾನದ ನೆಲೆವೀಡು. ಹಲಕೆಲವು ಅರ್ಥದಾರಿಗಳು ತಮ್ಮದೇ ಆದ ಶೈಲಿಯಲ್ಲಿ ಜನರನ್ನು ಮಂತ್ರ ಮುಗ್ಧರನ್ನಾಗಿಸುತ್ತಾರೆ. ಅದುವೇ ಇಲ್ಲಿನ "ಶ್ರೀ ದುರ್ಗಾ ಪರಮೇಶ್ವರಿ ಯಕ್ಷಗಾನ ಕಲಾಸಂಘ". ಯಕ್ಷಗಾನ ಕ್ಷೇತ್ರದಲ್ಲಿ ಇಲ್ಲಿನ ಮಹಿಳೆಯರೂ ಸಾಕಷ್ಟು ಹೆಸರು ಮಾಡಿದ್ದಾರೆ. "ಮಹಿಳಾ ಯಕ್ಷಗಾನ ಕಲಾಸಂಘ' ಎಂಬ ತಮ್ಮ ಮೇಳವನ್ನೇ ಹೊರಡಿಸಿದ್ದಾರೆ.

● ಶಾಂತಲತ, ಕುದ್ದಡ್ಕ

## ಪಾಣಾಜೆ–ಪಣಜಿ ಅಲ್ಲ

ಪುತ್ತೂರು ತಾಲೂಕಿನಲ್ಲಿ ನನ್ನ ದೊಡ್ಡಮ್ಮನ ಊರು. ಇಲ್ಲಿಗೆ ಹೆಸರು ಪಾಣಾಜೆ. ಅಯ್ಯೋ ಊರಿನ ಹೆಸರಲ್ಲೇನಿದೆ ಎಂದಿರಾ? ಇಲ್ಲೇ ಸ್ವಾಮಿ ಇರೋದು ಪೇಚಾಟ! ಹಾಂ! ಅದೇನು ಮಹಾ ಎಂದು ಇಲ್ಲಿ ಹುಡುಕಬೇಡಿ. ಗೋವದ ಹತ್ತಿರಕ್ಕೆ ಬನ್ನಿ! ಹಾಂ, ನೆನಪಾಗಿರಬೇಕಲ್ಲವೆ. ಅಲ್ಲೊಂದು "ಪಣಜಿ" ಇದೆಯೆಂದು. ಈ ಪುತ್ತೂರು ಸಮೀಪದ ಪಾಣಾಜೆಗೆ ಯಾರಾದರೂ ಪತ್ರ ಬರೆಯುವವರು ಇಂಗ್ಲಿಷ್ ಅಕ್ಷರಗಳಲ್ಲಿ 'PANAJE' ಎಂದು ಬರೆದಿರೋ ಕೈಕೊಟ್ಟಿತೆಂದೇ ತಿಳಿಯಿರಿ. ನಮ್ಮ ದೊಡ್ಡಮ್ಮನ ಮನೆಗೆ ಬರಬೇಕಾದ ಪತ್ರಗಳು ಅದೆಷ್ಟೋ ಸಲ 'PANAJI' (GOA) ವರೆಗೆ ಸುತ್ತುಹಾಕಿಕೊಂಡು ನಂತರ 'PANAJE'ಗೆ ಬಂದಿರುವುದನ್ನು ನಾನು ಪತ್ರಗಳ ಮೇಲಿದ್ದ ಸೀಲಿನಿಂದ ನೋಡಿದ್ದೇನೆ. ಹಾಂ! ನಿಮಗೆ ಯಾರಿಗಾದರೂ ಜೀವಂತ ಸ್ವರ್ಗಕ್ಕೆ ಹೋಗಬೇಕಾದರೆ ಈ ಪಾಣಾಜೆ ಮತ್ತು ಕೇರಳ–ದ.ಕನ್ನಡದ ನಡುವಿನ ಪೆರ್ಲದ ನಡುವೆ 'ಸ್ವರ್ಗ' ಇದೆ. ಕ್ಷಮಿಸಿ, ಇದು ಇಲ್ಲಿಯ ಒಂದು 'ಕುಗ್ರಾಮ'ದ ಹೆಸರು.

● ಕೊಕ್ಕಡ ವೆಂಕಟ್ರಮಣ ಭಟ್ಟ

ನನ್ನೂರು ನನ್ನ ಜನ

# ನಾನೂ ಮಂಗಳೂರೂ

● ಭುವನೇಶ್ವರಿ ಹೆಗಡೆ

ದಿನಾಲು ಬೆಳಗ್ಗೆ ಹತ್ತು ಘಂಟೆಯ ಹೊತ್ತಿಗೆ ಮಂಗಳೂರಿನ ಗದ್ದಲದ ಕೇಂದ್ರ ಭಾಗದಲ್ಲಿರುವ ನನ್ನ ಕಾಲೇಜಿನ ಮುಂದೆ ಗಿಜಿಗುಡುತ್ತ ಹಾರುವ ಸಿಟಿ ಬಸ್ಸೊಂದು ನನ್ನನ್ನು ಪುತಕ್ಕನೆ ಉದುರಿಸಿ ಹಾಕಿ ಮುಂದೆ ಸಾಗುತ್ತದೆ. (ಒಂದೊಂದು ದಿನ ಕಕ್ಕುತ್ತದೆ, ಒಂದೊಂದು ದಿನ ಎಸೆದು ಹೋಗುತ್ತದೆ) ಬಸ್ಸಿನ ಮೆಟ್ಟಿಲ ಬಳಿಯೇ ನನ್ನ ಮರ್ತ್ಯ ಶರೀರ ಜೋತಾಡಿಕೊಂಡಿದ್ದರೆ ತೊಟ್ಟು ಕಳಚಿದ ಹಣ್ಣಿನ ಹಾಗೆ ನಾನಾಗಿಯೇ ಶ್ರಮವಿಲ್ಲದೆ ಪುತಕ್ಕನೆ ಉದುರಿ ಬೀಳುತ್ತೇನೆ. ಬಸ್ಸಿನ ಮಧ್ಯ ಭಾಗಕ್ಕೆಲ್ಲಾದರೂ ದಬ್ಬಲ್ಪಟ್ಟು ಜನಪ್ರವಾಹದ ಕೈಕಾಲುಗಳೆಡೆಯಲ್ಲಿ ಸಿಲುಕಿಕೊಂಡಿದ್ದರೆ ಅದರಿಂದ ನನ್ನ ಮರ್ತ್ಯ ಶರೀರವನ್ನು ಈಚೆಗೆಳೆಯುವದರಲ್ಲಿ ಹತಪ್ರಾಣಳಾಗಿರುತ್ತೇನೆ. ಮಂಗಳೂರಿನ ಸಿಟಿ ಬಸ್ಸಿಗೆ ನಿರ್ವಾಹಕದ್ವಯತ್ರಯ ಹೀಗೆಲ್ಲ ಇದ್ದು ಕ್ರಮವಾಗಿ ಹಿಂಬಾಗಿಲು ಬಳಿಯಿರುವಾತ ದುಂಪೋಲೆ ದುಂಪೋಲೆ (ಮುಂದ್ಹೋಗಿ) ಎಂದೂ ಮುಂಬಾಗಿಲ ಬಳಿಯಿರುವಾತ ಪಿರಪೋಲೆ ಪಿರಪೋಲೆ (ಹಿಂದ್ಹೋಗಿ) ಎಂದೂ ಏಕಕಾಲಕ್ಕೆ ಬೊಬ್ಬಿಡುತ್ತಾರೆ. ಇನ್ನೊಬ್ಬಾತನಿಗೆ ಬಸ್ಸು ಸ್ಟಾಪಲ್ಲಿ ನಿಲ್ಲುತ್ತಲೇ ಅದೇನಾಗುತ್ತದೆಯೋ ಬೇಗ ಬೇಗ... ಎಂದು ಉಸಿರುಕಟ್ಟಿ ಒದರಲು ಶುರು ಮಾಡುತ್ತಾನೆ. ಮೈ ಮೇಲೆ ಎಚ್ಚರವಿಲ್ಲದವರ ಹಾಗೆ ಬೊಬ್ಬಿಡುವ 'ಬೇಗ ಬೇಗ'ದ ಆತ ಹಿಂದಿನ ರಸ್ತೆಯಲ್ಲಿ ಮತ್ತೊಂದು ಬಸ್ಸಿನ ಮೂತಿ ಗೋಚರಿಸುತ್ತಲೇ 'ರೈಟ್ ಪೋಯಿ' ಎನ್ನುತ್ತಾನೆ. ಅಷ್ಟರಲ್ಲಿ ಬಸ್ಸು ಹಾರಿಯಾಗುತ್ತದೆ. ಇಳಿದಾತ ಇಳಿದ. ಇಳಿಯತೊಡಗಿದವ ಜಿಗಿದ. ಇಳಿಯಲನುವಾಗುತ್ತಿದ್ದವ ಮುಂದಿನ ಸ್ಟಾಪಿಗೆ ಒಯ್ಯಲ್ಪಟ್ಟ.

ಇಂಥ ಸ್ಪೀಡಿನ ಬಸ್ಸಿನಿಂದ ಹೇಗೋ ಕಳಚಿಕೊಂಡು ಉದುರಿದ ನಾನು ಒಂದು ದಿನವಾದರೂ ಅನೂನೆಯಾಗಿ ಇಳಿದು ಗೆಲುವಾಗಿ ನನ್ನ ಆಫೀಸು ಪ್ರವೇಶಿಸಿದ ದಾಖಲಿಲ್ಲ. ಜನಪ್ರವಾಹದಿಂದ ಈಚೆಗೆಳೆಯಲ್ಪಟ್ಟ ನನ್ನ ಮರ್ತ್ಯ ಶರೀರದ ಚಪ್ಪಲಿಯ ಬಾರು ಒಂದು ದಿನ ಕಿತ್ತಿದ್ದರೆ ಇನ್ನೊಂದು ದಿನ ತೊಟ್ಟು ಕಿತ್ತು ಹೋಗಿ ನನ್ನ ವ್ಯಾನಿಟಿ ಬ್ಯಾಗು ಅಳತೊಡಗಿರುತ್ತದೆ. ಜಡೆ ಹರಿದುಹೋಗಿ ಜರ್ಜಡಿತಳಾಗಿ... ಅಂತೂ ಪ್ರಾಣಾಂತಿಕ ಮುಖಭಾವ ಹೊತ್ತೇ ನನ್ನ ಉದ್ಯೋಗಾಲಯವನ್ನ ಪ್ರವೇಶಿಸುವ ನನಗೆ ಗೇಟಿನೊಳಗಿನ ವಿದ್ಯಾರ್ಥಿ ಸಮೂಹದ ಮುಗುಳ್ನಗೆಯ ಸ್ಪರ್ಶವಾಗುತ್ತಲೇ ದೇಹಕ್ಕೆ ಪ್ರಾಣವೂ ಹಲ್ಲುಗಳಿಗೆ ಅಸ್ತಿತ್ವವೂ ಮರಳುತ್ತದೆ.

ನಾಲ್ಕೈದು ವರ್ಷಗಳಿಂದ ಹೀಗೆ ಉದುರಿ ಬೀಳುತ್ತಲೇ ಬದುಕಿ ಬಾಳಿಕೊಂಡಿದ್ದೇನೆಂದ ಬಳಿಕ ಬ್ರಹ್ಮ ನನಗಿಷ್ಟು ಆಯಸ್ಸು ಸುರಿದಿದ್ದರಲ್ಲಿ ಅನುಮಾನವಿಲ್ಲ. ಮಂಗಳೂರಲ್ಲಿ ನೌಕರಿ ಆಯ್ತು ಎಂದಾಕ್ಷಣ ನನ್ನ ತಾಯ್ತಂದೆಯರು ಮೊದಲು ವಿಚಾರಿಸಿದ್ದು ನಮ್ಮೂರಿನ 'ದುರ್ಗಾ ಭವನದ ಭಟ್ಟರು' ಐತಾಳರಲ್ಲಿ. "ಹೇಗೆ ನಿಮ್ಮೂರ ಕಡೆ ಕಳಿಸಬಹುದೆ?" ಎಂದು.

"ಓಹೋ ಮಂಗಳೂರಲ್ಲಿ ನೌಕರಿ ಆಯ್ತಾ? ಒಳ್ಳೇದ್ ಮಾರಾಯ್ರೆ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಂತಾಸಾ ಹೆದ್ರಿಕೆ ಇಲ್ಲ. ಎಲ್ಲಾ ವ್ಯವಸ್ಥೆ ಚೆನ್ನಾಗುಂಟು. ಕಳಿಸಿ ಕಳಿಸಿ" ಎಂದು ಶಿಫಾರಸು ಮಾಡಿದ್ದರು.

ಅದಕ್ಕೆ ಎಂತಾಸಾ ಹೆದರಿಕೆ ಇಲ್ಲದೆ ಉತ್ತರ ಕನ್ನಡದಿಂದ ದಕ್ಷಿಣ ಕನ್ನಡಕ್ಕೆ ನನ್ನನ್ನು ಜಿಲ್ಲಾಂತರಿಸಿಕೊಂಡೆ. ನೀವು ಯಾವ ಜಿಲ್ಲೆಯವರೇ ಆಗಿರಿ ಮಂಗಳೂರಿಗೆ ಬೇರೆ ಕಡೆಯಿಂದ ಬಂದಿದ್ದೀರಾದರೆ ನೀವು ಗುರುತಿಸಲ್ಪಡುವದು 'ಆಚೆಯವರು' ಎಂದೇ. ಕರಾವಳಿಯವರಲ್ಲವಾದರೆ 'ಘಟ್ಟದವರು' ಎಂಬ ಬಿರುದೂ ಸಿಗುತ್ತದೆ. ಹೊಸದಾಗಿ ಮಂಗಳೂರಿಗೆ ಬರುವವರಿಗೆ ಉಪಯುಕ್ತವಾಗಲೆಂದು 'ಕರಾವಳಿ ಭಾಷಾ ಕಲಿಕೆ' ಎಂಬೊಂದು ಪುಸ್ತಕವನ್ನು ನಾನು ಬರೆಯಲಿದ್ದು ಅದರ ಒಂದೆರಡು ಪಾಠಗಳು ಹೀಗಿವೆ.

# ಮಂಗಳೂರಿನ ಮೀನು ಮಾರ್ಕೆಟಿನಲ್ಲಿ ಒಂದು ಸಂಜೆ



ಮೊದಲನೆಯದಾಗಿ ನೀವು ಆಡುತ್ತಿರುವದು ಯಾವುದೇ ಜಿಲ್ಲೆಯ ಪ್ರಾದೇಶಿಕ/ದೇಸಿ/ಆಡುಭಾಷೆ ಯಾಗಿದ್ದರೂ ಅದನ್ನು ಬಿಟ್ಟು ಪುಸ್ತಕದಲ್ಲಿ ಬರೆಯುವ ಶುದ್ಧ(!) ಕನ್ನಡ ಭಾಷೆಯನ್ನು ಅಷ್ಟೇ ಗ್ರಂಥಸ್ಥ ಶೈಲಿಯಲ್ಲಿ ಮಾತನಾಡಬೇಕು. ಉದಾಹರಣೆಗೆ ನೀವಿಳಿಯುವ ಸ್ಟಾಪಿನಲ್ಲಿ ನಿಂತ ಬಸ್ಸು ನೀವು ಸೀಟಿನಿಂದೇಳುವದರೊಳಗೇ ಹೊರಟು ಬಿಟ್ಟಿದೆ. ಬಸ್ಸು ನಿಲ್ಲಿಸಲು ಹೇಳ ಬೇಕಾಗಿದೆ, ನೀವು ಬೆಂಗಳೂರಿನವರಾದರೆ – "ರೀ ಕಂಡಕ್ಟ್ರೆ ನಿಲ್ಸ್ರೀ ಬಸ್ನ ಇಳೀತಿದೀವಿ ಕಾಣ್ಸಲ್ವಾ?" ಎನ್ನುತ್ತೀರಿ. ಧಾರವಾಡ – "ತರಬ್ರೀಯಪ್ಪ ಮಂದಿ ಇಳ್ಯಾಕ ಹತ್ಯಾರ" ಹಾಸನ – "ಅಯ್ಯ! ನಿಲ್ಸಾಕಿಲ್ವಾ? ಅಂಗೇ ಒಂಟ್‌ಬುಟ್ಟವ್ನೆ. ಯಾಕೇ ಇಳೀತಿರಾದು ಕಾಣಾಕಿಲ್ವಾ? ನಿಲ್ಸು ನಿಲ್ಸು ಓ.... ಕಂಡಿಷ್ನಿ" ಮಂಗಳೂರು ಕನ್ನಡ – "ಹೋಯ್ ಕಂಡಕ್ಟರರೇ ಬಸ್ಸನ್ನು ನಿಲ್ಲಿಸಿರಿ. ನಾವು ಇಲ್ಲಿ ಈಗ ಇಳಿಯು ವವರಿದ್ದೇವೆ, ಹೊರಟೇ ಬಿಟ್ಟಿರುವಿರಲ್ಲಾ?" ಎಂದು ಎಷ್ಟೇ ಹೊತ್ತು ತಗಲಿದರೂ ಪ್ರತಿಶಬ್ದದ ನಡುವೆಯೂ ಗಾಳಿ ಆಡಲು ಸ್ಥಳ ಬಿಟ್ಟು ಶುದ್ಧ ಕನ್ನಡದಲ್ಲಿ ಹೇಳಬೇಕಾಗುತ್ತದೆ. 'ಚಿಲ್ರೆ ಇದ್ಯಾ?' ಎಂದು ಯಾರಾದರೂ ಕೇಳಿದರೆ 'ಇದೆ' ಎನ್ನುವ ಹಾಗಿಲ್ಲ. 'ಉಂಟು' ಎಂಬ ಸಮುದ್ರ ತೀರದ ಉರುಟಾದ ಶಬ್ದವನ್ನೇ ಬಳಸಬೇಕಾಗುತ್ತದೆ. 'ಇಲ್ಲ' ಎಂಬುದನ್ನಾದರೂ ಪಟಕ್ಕನೆ ಒರಟಾಗಿ "ಇಲ್ರೀ" ಎಂದು ಹೇಳಿಬಿಡುವ ಹಾಗಿಲ್ಲ. ಸ್ವಲ್ಪ ಗಾಳಿಯಾಡಲು ಸ್ಥಳ ಬಿಟ್ಟು "ಇಲ್ಲವಾ ಅಂತ" ಎಂದೋ "ಇಲ್ಲ ಕಾಣ್ಬೇಕು" ಎಂದೋ ಅನುಮಾನ ದಲ್ಲಿರುವ ಹಾಗೆ ಹೇಳಿ ಜಾರಿಕೊಳ್ಳುವ ನಯಗಾರಿಕೆ ಕಲಿಯಬೇಕು. ನಾನು ಹೊಸದಾಗಿ ಬಂದಾಗ ಒಟ್ಟು ನೂರಾ ಹದಿಮೂರು ಜನರ ಬಳಿ ನಿಮ್ಮಾಚೆ ಬಾಡಿಗೆ ಮನೆ ಇದ್ಯಾ? (ಉಂಟಾ?) ಎಂದು ಕೇಳಿ ನೂರಾ ಹದಿಮೂರು ಬಾರಿಯೂ "ಇಲ್ಲವಾ ಅಂತ" "ಇಲ್ಲ ಕಾಣ್ತದೆ" ಎಂಬ ಅನುಮಾನಾಸ್ಪದ ಉತ್ತರಗಳನ್ನೇ ಪಡೆದಿದ್ದೆ.

ನಮ್ಮಲ್ಲಿರುವ 'ಆ'ಕಾರಗಳನ್ನೆಲ್ಲ ಸಂದರ್ಭ ಕ್ಕನುಗುಣವಾಗಿ 'ಎ'ಕಾರವಾಗಿಯೋ 'ಒ'ಕಾರ ವಾಗಿಯೋ ಪರಿವರ್ತಿಸಿಕೊಳ್ಳಬೇಕಾದುದು ಎರಡನೇ ಭಾಷಾ ಆವಶ್ಯಕತೆ. ಮಲಯಾಳೀ ಗಂಧ ಸೂಸುವ ರೈಲ್ವೆ ನಿಲ್ದಾಣಕ್ಕೆ ಹೋದರಂತೂ ಮುಗಿಯಿತು. 'ಟೋಮ್', 'ಕೋಲೇಜ್', 'ಹೋಲೀಡೇ' ಮೊದಲಾದ ಒಕಾರಗಳ ಹಾವಳಿ ಮಂಗಳೂರು ಪೇಟೆ ಸುತ್ತುವಾಗ 'ಬೇಂಕು', 'ಬೇಟರಿ', 'ಗ್ರೇಂಟು' ಇಂಥ ಏಕಾರಗಳ ದರ್ಶನ ಸಾಕಷ್ಟಾಗುತ್ತದೆ.

ರಭಸದ ಜೀವನವಿರುವ ಮಂಗಳೂರಿಗೆ ಸ್ವಾರಸ್ಯವನ್ನು ತುಂಬುವವರಲ್ಲಿ ಇಲ್ಲಿನ ತುಂಡು ಲಂಗದ ಹುಡುಗಿಯರ ಪಾತ್ರ ದೊಡ್ಡದು. ಒಬ್ಬರ ಹೇರ್ ಸ್ಟೈಲಿನ ಹಾಗೆ ಮತ್ತೊಬ್ಬರದಿಲ್ಲ. ಒಬ್ಬಳ ಪೋಷಾಕು ಊರ್ಧ್ವಗಾಮಿಯಾಗಿದ್ದರೆ ಇನ್ನೊಬ್ಬಳದು ಅಧೋಗಾಮಿ, ನೋಡುವ ಕಣ್ಣು ಗಳು ಸನಾತನಿಯದಾಗಿದ್ದರೆ ಆತ ನಭೋಗಾಮಿ ಯಾಗುವಂಥ ಬೆಚ್ಚಿಬೀಳಿಸುವ ಡ್ರೆಸ್ಸು ಧರಿಸುವ ಕಾಲೇಜು ಕಿಶೋರಿಯರಿಗೂ ಬರವಿಲ್ಲ. ತುಳು ಇಲ್ಲಿಯ ರಾಷ್ಟ್ರೀಯ ಭಾಷೆ, ಇಂಗ್ಲಿಷು ಆಡುಭಾಷೆ. ಕನ್ನಡ, ಕೊಂಕಣಿ, ಮಲಯಾಳಿ ಮೊದಲಾದವು ಸಹಭಾಷೆಗಳು. ಇಂಗ್ಲಿಷರೂ ಸಹ ಬೆಚ್ಚಿಬೀಳಬಹುದಾದ 'ಅತ್ಯಾಂಗ್ಲ ಶೈಲಿಯ' ಜನರಿರುವ ಹಾಗೇ ಪ್ರಾದೇಶಿಕ ಬೇರುಗಳನ್ನು ಇನ್ನೂ ಬಲವಾಗಿ ಹಿಡಿದಿರುವ ಜನರು ಸಮ ಸಮವಾಗಿದ್ದಾರೆ. ಇವನ್ನು ಸಂಕೇತಿಸುವ ಹಾಗೆ ಇಲ್ಲಿ ಪಿಂಟೋ ಲೇನ್, ಲೋಬೋ ಲೇನ್ ಗಳನ್ನು ಹಾದು ಹೋಗುವಾಗ 'ಕುತ್ತಾರ ಪದವು' 'ಕಿನಾರೆಗುತ್ತು' ದಾರಿಗಳೂ ಸಿಗುತ್ತವೆ.

ಕದ್ರಿ ಪಾರ್ಕು ಎಂಬುದು ಈ ಸಂಸ್ಕೃತಿ ಸಮ್ಮಿಲನದ ತಾಣ. ಅಲ್ಲಿ ಅಕ್ಷರಶಃ ಶಾರ್ಟ್ಸ್ ಧರಿಸಿದ ತಾಯಂದಿರು ತಮ್ಮ ಸ್ನೇಹಿತರನ್ನು ಭೇಟಿಯಾಗುತ್ತಾರೆ. ಇವರ ಮಗುವಿನ ಬಳಿ 'ಸೇ ಹಲೋ' ಎಂದು ಒತ್ತಾಯಿಸುತ್ತಾರೆ. ಅದು ಪಿಳಿ ಪಿಳಿ ನೋಡಿ ಕತ್ತನ್ನು ಐಸ್‌ಕ್ರೀಂ ಗಾಡಿಯತ್ತ ಚಾಚುತ್ತದೆ. ಬಲೂನಿನತ್ತ ನೋಡಿ ಕೇಕೆ ಹಾಕುತ್ತದೆ.

ಅಲ್ಲಿಂದ ಬಸ್‌ಸ್ಟಾಪಿಗೆ ಬಂದು ನಿಂತರೆ ಶುದ್ಧ ಗ್ರಾಮೀಣ ಕಳೆ ಹೊತ್ತ ವೃದ್ಧ ಮಹಿಳೆಯೋರ್ವಳು ನಿಮ್ಮ ಬಳಿ 'ಗಂಟೇತಾಂಡ್?' ಎಂದು ಕೇಳು ತ್ತದೆ. (ಅದು ಒಂದು ತುಳು ನಾಟಕದ ಹೆಸರೂ ಹೌದು) ಗಂಟೆ ತಿಳಿದುಕೊಳ್ಳಲು, ಹಾಲಿಗೆ ದುಡ್ಡೆಣಿಸಿ ಕೊಡಲು ನೀವು ತುಳು ಕಲಿಯಲೇ ಬೇಕಾಗುತ್ತದೆ. ಹಾಗೆಯೇ 'ಬಲೇ ಚಾಪರ್ಕ' (ಬನ್ನಿ ಚಹ ಕುಡಿಯೋಣ) 'ಸಜ್ಜಿಗೆ ಬಜಿಲ್'



ಮೊದಲಾದ ರುಚಿರುಚಿಯಾದ ಹೆಸರಿನ ತುಳು ನಾಟಕಗಳ ಪೋಸ್ಟರುಗಳು ಇಲ್ಲಿಯ ಮೆಜೆಸ್ಟಿಕ್ ಆಗಿರುವ ಹಂಪನಕಟ್ಟೆಯಲ್ಲಿ ಜೋತಾಡುತ್ತಿರುತ್ತವೆ.

ಇಲ್ಲಿ ದುಡಿಯುವವರೆಲ್ಲ ಬೆವರು ಸುರಿಸಿ ದುಡಿಯುವವರೇ. ಹೊರಗೆ ಮಳೆ ಸುರಿಯುತ್ತಿದ್ದರೂ ಒಳಗೆ ಬೆವರು ಸುರಿಯುವ ವಿಚಿತ್ರ ಸೆಕೆಯ ಬೆವರೂರು. ದುಡಿಯದೇ ಆರಾಮ ಕುರ್ಚಿಯಲ್ಲಿ ಕುಳಿತರೂ ಬಿಡದ ಬೆವರಧಾರೆ. ಅಂದ ಮೇಲೆ ಮೇ ತಿಂಗಳಲ್ಲಿ ಕವಿಗೋಷ್ಠಿ ಇಟ್ಟುಕೊಂಡು "ಕವನ ಬರೀರಿ" ಅಂದ್ರೆ ಕವನ ಇನ್ನೇನು ಮಂಗಳೂರಿನ ಬೆವರ ಮೇಲೇ ಹುಟ್ಟಿಕೊಳ್ಳುತ್ತದೆ ಅಷ್ಟೆ.

ಕಾಶ್ಮೀರ್ದಾಗೆ ಐಸಿದ್ದಂಗೆ  
ಮಡಿಕೇರೀಲಿ ಮಂಜಿದ್ದಂಗೆ  
ಬಳ್ಳಾರೀಲಿ ಧೂಳಿದ್ದಂಗೆ  
ಮಂಗ್ಳೂರ್ನಾಗೆ ಬೆವರು

ನಮ್ಮ ಐತಾಳರದ್ದು ಈ ಬೆವರನ್ನು ಸಮರ್ಥಿಸುವಷ್ಟು ಊರ ಅಭಿಮಾನ. "ಹಾಗೆ ಮೈಯ ಕಲ್ಮಶವೆಲ್ಲ ಬೆವರಿ ಹೋದರೆ ಮೈ ಹಗುರಾಗಿ ಮಂಡೆ ಚುರುಕಾಗಿ ಓಡುತ್ತದೆ ಗೊತ್ತುಂಟೋ" ಅಂತ ಬೆವರೇ ಬರದ ಮಲೆನಾಡಿಗರನ್ನು ಒಂದು ನಮೂನೆ ದಡ್ಡರೆಂಬ ಹಾಗೆ ನೋಡುತ್ತಾರೆ.

ಇಲ್ಲಿಯ ಸಾಹಿತ್ಯಿಕ ಕಾರ್ಯಕ್ರಮಗಳಿಗೆ ನಾಟಕಗಳಿಗೆ ನಿಗದಿತ ಪ್ರೇಕ್ಷಕರು ಲೆಕ್ಕ ತಪ್ಪದಂತೆ ಹಾಜರಿರುತ್ತಾರೆ. ಮೊದಲ ಸಾಲಿನಿಂದ ಕೊನೆಯ ಸಾಲಿನ ತನಕವೂ ಕ್ರಮತಪ್ಪದ ವ್ಯಕ್ತಿಗಳು. ಗಂಭೀರವಾಗಿ ಕುಳಿತು ನೋಡುತ್ತಾರೆ. ಚೂರೂ ನಗು ಹೊರಚೆಲ್ಲುವದಿಲ್ಲ. ಧಾರವಾಡ ಹುಬ್ಬಳ್ಳಿಯ ಕಡೆಯ "ಭರ್ರೀ ಕುಲಕರ್ಣಿಯೋರೆ ಇಲ್ಲೇ ಕೂಡ್ರಲಾ" ಎಂಬ ಸ್ವಾಗತವಾಗಲಿ "ಯಾಕ್ಲೇ ಬಸ್ಲಿಂಗ್ಯಾ ಲೇಟಾತು" ಎಂಬ ಆಕ್ಷೇಪವಾಗಲಿ "ಯಾಕವಾ ತಂಗಿ ಸಪ್ಪಗದೀ" ಎಂಬ ಆತ್ಮೀಯತೆಗಾಗಲಿ ಹೊರಹೊಮ್ಮಲು ಆಸ್ಪದವಿಲ್ಲದಷ್ಟು ಗಂಭೀರ ವ್ಯಕ್ತಿಗಳು ತುಂಬಿ ಹೋಗಿದ್ದಾರೆ. ಅಹರ್ನಿಶಿ ಸ್ಟ್ಯಾಂಡರ್ಡ್ ಕಾಪಾಡಿಕೊಳ್ಳಲು ಹೇಚಾಡುವ ಜನ ಲೆಕ್ಕವಿಲ್ಲದಷ್ಟು. "ಅದಕ್ಕೊಂದು ಕ್ರಮ ಉಂಟು ಗೊತ್ತಾಯ್ತಾ?" ಎಂಬುದು ಅಲ್ಲಲ್ಲಿ ಕೇಳಿಬರುವ ಮಾತು.

ಮಂಗಳೂರಿನ ಗಾಂಭೀರ್ಯಕ್ಕೆ ಇನ್ನಷ್ಟು

'ತೂಕ' ಏರಿಸುವಲ್ಲಿ ಇಲ್ಲಿನ ವ್ಯಾಪಾರಿಗಳು ಸಿದ್ಧಹಸ್ತರು. ವಸ್ತುವಿನ ಬೆಲೆಯನ್ನು ಹೇಳುವಾಗ ಆ ಮುಖದ ಗಾಂಭೀರ್ಯ ನೋಡಿಯೇ ನೀವು "ಅದ್ವೇಗ್ರೀ ಅಷ್ಟು ಬೆಲೆ ಇದಕ್ಕೆ?" ಎಂಬ ಪ್ರಶ್ನೆಯನ್ನು ನುಂಗಿಬಿಡುತ್ತೀರಿ. ಅಪ್ಪಿ ತಪ್ಪಿ ಧೈರ್ಯ ಮಾಡಿ "ನಾನೂರು ರೂಪ್ಯಾ? ಇದೇ ಸೀರೆ ಸಾಗರದಲ್ಲಿ ಇನ್ನೂರೈವತ್ತು ರೂಪಾಯಿಗೆ ಸಿಗುತ್ತಲ್ರೀ" ಎಂದು ಹೇಳಿಬಿಟ್ಟಿರೋ ಮುಗಿಯಿತು. ಆ ಬಿಗಿದ ಮುಖ ಇನ್ನಷ್ಟು ಬಿಗಿದು ನಿಮ್ಮನ್ನು ಒಮ್ಮೆ ನೋಡಿ ಅಳೆದು ನೀವೊಂದು 'ಸ್ಟೇಂಡರ್ಡ್' ಇಲ್ಲದ ಜನ ಆಚೆಯವರಿರಬೇಕು ಎಂಬ ತೀರ್ಮಾನದಲ್ಲಿ ಒಂದು ಕುಹಕ ನಗೆಯ ಎಸಳು ಗೋಚರಿಸಿ ಕ್ಷುಲ್ಲಕ ಜಂತುವಾದ ನೀವು ಒಂದೋ ನಾನೂರು ರೂಪಾಯಿ ತೆತ್ತು ಸೀರೆ ಖರೀದಿಸಬೇಕು. ಇಲ್ಲಾ ಆ ಕ್ಷಣಕ್ಕೆ ಜಾಗ ಖಾಲಿ ಮಾಡಬೇಕು– ಅಷ್ಟು ಮಾಡಿ ಬಿಡುತ್ತದೆ.

"ಅದಕ್ಕೊಂದು ಕ್ರಮ ಉಂಟು ಗೊತ್ತಾಯ್ತೋ" ಎನ್ನುತ್ತ ಕ್ರಮಬದ್ಧವಾಗಿ ಬದುಕುವ ಇಲ್ಲಿಯ ಜನಕ್ಕೆ 'ಭಾವತೀವ್ರತೆ'ಯೆಂಬುದೇ ಇಲ್ಲ. "ಉತ್ಕಟ ಕ್ಷಣಗಳನ್ನು ಕಂಡವರೇ ಅಲ್ಲ. ಇಲ್ಲಿನ ಗಂಭೀರ ಜನ" ಎಂದೊಬ್ಬ 'ಆಚೆಯ' ಸಾಹಿತಿ ಮಿತ್ರರು ಒಮ್ಮೆ ಆಕ್ಷೇಪಿಸಿದರು. ಅದನ್ನು ಸ್ಥಳೀಯ ಸಾಹಿತಿಗಳೊಬ್ಬರು ಬಲವಾಗಿ ಪ್ರತಿಭಟಿಸಿದರು. ಆಗ ನಿಮ್ಮ ಭಾವತೀವ್ರತೆಯನ್ನು ವ್ಯಕ್ತಪಡಿಸಲು ನಿಮಗೆ ಒಂದಾದರೂ ಸುಂದರ ಶಬ್ದವಿದೆಯೆ? ಎಂದು ಪ್ರಶ್ನಿಸಿದಾಗ ಸ್ಥಳೀಯ ಸಾಹಿತಿಗಳು "ಉಂಟು ಮಾರಾಯ್ರೆ" ಎಂದರು. ಸಾಹಿತ್ಯದಲ್ಲಿ ದಕ್ಷಿಣ ಕನ್ನಡದ ಪಾತ್ರಗಳು ಆಡುವ ಮಾತಿನಲ್ಲಿ ಸೇರಿಕೊಂಡ ಈ 'ಮಾರಾಯ್ರೆ', ಸಿನಿಮಾಗಳಲ್ಲಿ ಕಡ್ಡಾಯವಾಗಿ ಉಡುಪಿಯ ಭಟ್ಟರ ಪಾತ್ರ ಬಳಸುವ ಟ್ರೇಡ್ ಮಾರ್ಕ್ ಶಬ್ದವಾದ ಈ 'ಮಾರಾಯ್ರೆ" ಎಂಬುದು ಭಾವತೀವ್ರತೆಯನ್ನು ಹೊರಹೊಮ್ಮಿಸುವ ಪದ ಎಂಬುದು ಇಷ್ಟು ವರ್ಷವಾದರೂ ನನ್ನ ಮೊದ್ದು ತಲೆಗೆ ಹೊಳೆದಿರಲೇ ಇಲ್ಲವಲ್ಲ ಎಂದು ಪೇಚಾಡಿಕೊಂಡೆ. ●

## ಕರ್ನಾಟಕದ ಏಕೈಕ 'ಬೆಂದ್ರ್‌ತೀರ್ಥ' ಮತ್ತು ತಂಪು ನೀರಿನ ಚಿಲುಮೆಗಳು!

ಕೃತಕವಾದ ಕಾರಂಜಿಗಳನ್ನು ನಾವು ಎಲ್ಲೆಡೆಯಲ್ಲೂ ಕಾಣುತ್ತೇವೆ. 365 ದಿನಗಳು ಎಡೆಬಿಡದೆ ಪವಿತ್ರ ಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿ ಪಯಣಿಗರಿಗೆ ದಾಹ ತಣಿಸಲು, ಕುಡಿಯುವ ಅರವಟ್ಟಿಗೆಯ 'ತಣ್ಣೀರು ಚಿಲುಮೆ' ಕಾಣಬೇಕಾದರೆ ಧರ್ಮಸ್ಥಳಕ್ಕೆ ಹೋಗುವ ದಾರಿಯಲ್ಲಿ ಉಜಿರೆ–ಕನ್ಯಾಡಿ ನಡುವೆ ಎಡಬದಿಗೆ ವಾಹನವನ್ನು ನಿಧಾನವಾಗಿ ಚಲಾಯಿಸುತ್ತಾ ಹೋಗಿ... ಹುಲಿಯ ಮುಖದಿಂದ ನೀರು ಸದಾ ಕಾಲ ಧಾರೆಯಾಗಿ ಹರಿಯುತ್ತಾ ನಿಮ್ಮನ್ನು ಸ್ವಾಗತಿಸುತ್ತದೆ.

ಇನ್ನೂ ವಿಶೇಷವೊಂದು ದ.ಕ. ಜಿಲ್ಲೆಯ ಪುತ್ತೂರು ತಾಲೂಕಿನ ಪಾಣಾಜೆಗೆ 3 ಕಿ.ಮೀ. ದೂರದ ಇರ್ದೆ ಗ್ರಾಮದಲ್ಲಿದೆ. ಪುತ್ತೂರು–ಪಾಣಾಜೆ ಮಾರ್ಗದಲ್ಲಿ 16 ಕಿ.ಮೀ. ಕ್ರಮಿಸುತ್ತಿರುವಾಗ 'ಬೆಂದ್ರ್‌ತೀರ್ಥ'ಕ್ಕೆ ದಾರಿ ಎಂಬ ಫಲಕ ಕಾಣಿಸುತ್ತದೆ. 1½ ಕಿ.ಮೀ. ಹೋದರೆ

ಫೋಟೋ: 'ದಿ ಪದ'



ಅಲ್ಲಿ 365 ದಿನವೂ ಊಟೆಯಾಗಿ ಚಿಮ್ಮುತ್ತಿರುವ ಬಿಸಿ ನೀರಿನ ಚಿಲುಮೆ ಇದೆ. ಇದು ಇಡೀ ಕರ್ನಾಟಕದಲ್ಲಿರುವ ಏಕೈಕ ಬಿಸಿನೀರಿನ ಚಿಲುಮೆ ಎಂದು ತಿಳುಹಲು ದ.ಕ. ಜಿಲ್ಲೆಯವನಾದ ನನಗೆ ಹೆಮ್ಮೆ. ಈ 'ಬೆಂದ್ರ್‌ತೀರ್ಥ' (ಬಿಸಿ ನೀರಿನ ಪವಿತ್ರ ಜಲ)ವು ಕರ್ನಾಟಕ ಪ್ರವಾಸೋದ್ಯಮ ಇಲಾಖೆಯವರಿಂದ ಗುರುತಿಸಲ್ಪಟ್ಟಿದ್ದರೂ ಹೇಳುವಂತಹ ಸುವ್ಯವಸ್ಥೆಯನ್ನು ಮಾತ್ರ ಇಲ್ಲಿಗೆ ಒದಗಿಸಿಲ್ಲವೆಂಬುದು ಖೇದದ ಸಂಗತಿ! ಪುತ್ತೂರಿಗೆ ಬಂದಾಗ ಈ 'ಬೆಂದ್ರ್‌ತೀರ್ಥ'ದಲ್ಲಿ ಸ್ನಾನ ಮಾಡಲು ಮರೆಯಬೇಡಿ!

● ಕೊಕ್ಕಡ ವೆಂಕಟ್ರಮಣ ಭಟ್ಟ

ನನ್ನೂರು ನನ್ನ ಜನ

## ಅಭಿವೃದ್ಧಿಯ ನೋಟ ಕಾಣಿಸುತ್ತಿರುವ

# ದಕ್ಷಿಣ ಕನ್ನಡ ಜಿಲ್ಲೆ

● ಈಶ್ವರ ದೈತೋಟ

ಫೋಟೋ: ಯಜ್ಞ, ದೈತೋಟ

ಪ್ರಥಮ ಬಾರಿಗೆ ದಕ್ಷಿಣ ಕನ್ನಡಕ್ಕೆ ಸಂದರ್ಶನ ವಿತ್ತ ಪತ್ರಕರ್ತ ಮಿತ್ರರೊಬ್ಬರು "ಕರ್ನಾಟಕದ ಫಾರೈನ್" ಎಂದು ಈ ಕರಾವಳಿ ಜಿಲ್ಲೆಯನ್ನು ಮೆಚ್ಚಿ ವರ್ಣಿಸಿದರು. ಬಾಲ್ಯವನ್ನು ಮಾತ್ರ ಇಲ್ಲಿ ಕಳೆದು ದೂರದ ಊರಿನಲ್ಲಿ ವೃತ್ತಿನಿರತನಾಗಿರುವ ನನಗೂ ಎಷ್ಟೋ ಬಾರಿ ಆ ಮಾತು ನಿಜವೆನಿಸುತ್ತದೆ.

ಕನ್ನಡದ ಹೆಸರು ಹೊತ್ತು ದಕ್ಷಿಣ ಕನ್ನಡ ಕರ್ನಾಟಕದ ಇತರೆಡೆಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದರೂ ಭಿನ್ನವಾದ ಸಂಸ್ಕೃತಿ, ಜನಜೀವನ ಶೈಲಿ, ಅಭಿವೃದ್ಧಿಯ ವೇಗ ಇಲ್ಲಿಯದು. ಪ್ರಕೃತಿ ಸೌಂದರ್ಯ, ಸಂಸ್ಕೃತಿ, ಶೈಕ್ಷಣಿಕ ಚಟುವಟಿಕೆಗಳಿಂದ ಹಾಗೂ ಇತ್ತೀಚೆಗೆ ಬ್ಯಾಂಕಿಂಗ್, ಉದ್ಯಮ ಕ್ಷೇತ್ರದ ಸಾಧನೆಗಳಿಂದ ವಿಶಿಷ್ಟ ಸ್ಥಾನ ಪಡೆದಿದೆ.

ಇದನ್ನು ಪಶ್ಚಿಮಾಂಬುಧಿಯಲ್ಲಿ ಮುಳುಗಿದ್ದಿರಬಹುದಾದ ಜಂಬೂದ್ವೀಪದ ಅಂಚು ಎನ್ನುತ್ತಾರೆ. ಪರಶುರಾಮ ಸೃಷ್ಟಿಯ ಕ್ಷೇತ್ರವೆಂದು ಹೆಸರು ಹೊಂದಿದೆ. ಸಾಕಷ್ಟು ಪ್ರಾಚೀನತೆಯನ್ನು ಹೊಂದಿರುವ ಪಶ್ಚಿಮಘಟ್ಟ ಮತ್ತು ಪಡುವಣ ಕಡಲಿನ ನಡುವಿನ ಈ ಭೂಪ್ರದೇಶ ಸಸ್ಯ, ಮತ್ಸ್ಯ ಮತ್ತಿತರ ಪ್ರಾಕೃತಿಕ ಸಂಪತ್ತಿನ



ನೆಲೆವೀಡು.

ಸೊಲೊಮನ್ ದೊರೆ ಇಲ್ಲಿಂದ ದಂತ, ದಾಲಚೀನಿಗಳನ್ನು ಆಮದಿಸುತ್ತಿದ್ದನಂತೆ. ಶತಮಾನಗಳ ಹಿಂದೆ ಗ್ರೀಕ್ ಕನ್ಯೆಯೊಬ್ಬಳು ಇಲ್ಲಿನ ಮಲಪಿಯ (ಮಲ್ಪೆ?) ನಾಯಕನೊಬ್ಬನನ್ನು ಪ್ರೇಮಿಸಿದ ಬಗ್ಗೆ ಕಥೆಯಿದೆ. ಒಂದನೇ ಶತಮಾನದಿಂದ 18ನೇ ಶತಮಾನದವರೆಗೆ ಇಲ್ಲಿಗೆ ಬಂದ ದೇಶವಿದೇಶಗಳ ಪ್ರವಾಸಿಗಳು ತಮ್ಮ ಅನುಭವ, ಅನಿಸಿಕೆಗಳನ್ನು ದಾಖಲಿಸಿದ್ದಾರೆ. ಈ ಪ್ರದೇಶ ಮೊದಲಿನಿಂದಲೂ ಪ್ರವಾಸಿಗಳಿಗೆ ಆಕರ್ಷಣೆಯ ತಾಣವಾಗಿತ್ತೆಂಬುದು ಈ ಕಥನಗಳಿಂದ ಕಂಡು ಬರುತ್ತದೆ. ದ.ಕ. ಜಿಲ್ಲೆ ರಚನೆಯಾದದ್ದು ಇತ್ತೀಚೆಗೆ. ಅದಕ್ಕೂ ಹಿಂದೆ ಕೆನರಾ ಜಿಲ್ಲೆಯಾಗಿ, ತುಳುನಾಡಾಗಿ ಇದು ಹರಡಿತ್ತು. ಕ್ರಿ.ಶ. 1ನೇ ಶತಮಾನದಲ್ಲಿ ಗ್ರೀಸ್‌ನಿಂದ ಬಂದ ಪ್ಲಿನಿ ಮತ್ತು 2ನೇ ಶತಮಾನದಲ್ಲಿ ಈಜಿಪ್ಟ್‌ನಿಂದ ಬಂದ ಟಾಲೆಮಿಯ ವಿವರಣೆಗಳು ಇಲ್ಲಿನ ಸಮುದ್ರ ವಾಣಿಜ್ಯ ಚಿತ್ರಣ ಕೊಡುತ್ತದೆ. ಆ ಮೇಲಿನ ಎರಿತ್ತೀನ್ ಸಮುದ್ರ ಮಾರ್ಗದರ್ಶನವೆಂಬ ಗ್ರಂಥದಲ್ಲೂ ಈ ಕರಾವಳಿ ವರ್ಣನೆಯಿದೆ. ಆ ಮೇಲೆ ಈಜಿಪ್ಟ್ ವ್ಯಾಪಾರಿ ಕಾಸ್‌ಮಾಸ್, ಚೀನಾದ ಬೌದ್ಧಪ್ರವಾಸಿ ಫಾಹಿಯಾನ್, ಹುವೆನ್‌ತ್ಸಾಂಗ್, ಮಾರ್ಕೊಪೋಲೋ, ವಿಜಯನಗರ ಸಾಮ್ರಾಜ್ಯವನ್ನು ಸೊಗಸಾಗಿ ವರ್ಣನೆಮಾಡಿರುವ ಅಬ್ದುಲ್ ರಜಾಕ್, ಫ್ರೆಂಚ್ ಪ್ರವಾಸಿ ಪಿರಾರ್ಡ್ ದೆಲವಲ್ ಎಂದು ಅನೇಕರಿಲ್ಲಿಗೆ ಪ್ರವಾಸ ಬಂದು ಬರೆದಿದ್ದಾರೆ.

> ಪ್ರಕೃತಿ ಸೌಂದರ್ಯ, ವಿಶಿಷ್ಟ ಸಂಸ್ಕೃತಿ—ಜನಜೀವನ ಶೈಲಿ, ಅಭಿವೃದ್ಧಿಯ ವೇಗ, ಬ್ಯಾಂಕಿಂಗ್ ಮತ್ತಿತರ ಉದ್ಯಮಗಳಲ್ಲಿ ಸಾಧನೆ—ಹೀಗೆ ದಕ್ಷಿಣ ಕನ್ನಡ ಜಿಲ್ಲೆ ಬೆಳವಣಿಗೆಯ ನೋಟ [illegible].

16ನೇ ಶತಮಾನದಲ್ಲಿ ಪಿರಾರ್ಡ್ ದೆಲವಲ್ ಬರೆದ ಕರಾವಳಿ ವಿವರಣೆ ಹೀಗಿದೆ. "ನದಿಯ ಇಕ್ಕೆಲ ಬಹು ರಮಣೀಯವಾಗಿದೆ. ಎತ್ತರದ



ಸಾವಿರ ಕಂಬದ ಬಸದಿ, ಮೂಡಬಿದ್ರಿ

ಬೆಟ್ಟಗಳಿಲ್ಲ; ಕತ್ತಲೆಯ ಕಣಿವೆಗಳಿಲ್ಲ. ಆದರೂ ಮಲೆನಾಡ ಮರಿ. ಎಲ್ಲೆಲ್ಲೂ ಹಸುರು, ಕಣ್ಣಿಗೆ ಹಬ್ಬ. ಒತ್ತಾಗಿ ಮತ್ತು ಎತ್ತರವಾಗಿ ಬೆಳೆದ ಗಿಡ ಮರಗಳು. ಅನೇಕ ಕಡೆ ತೆಂಗಿನ ಮರಗಳು, ಲಿಂಬೆ ಮರಗಳು (?) ಜುಳು ಜುಳು ನಾದ ಮಾಡುತ್ತ ಫಳ ಫಳ ಹೊಳೆಯುವ ತಿಳಿನೀರಿನ ಹಳ್ಳ ಕೊಳ್ಳಗಳು; ನದಿಯ ಆಕಡೆ ಮರದ ನೆರಳು; ಗೊಂಚಲು ಗೊಂಚಲಾದ ಹೂವಿನ ದಿಬ್ಬಣ. ವಿಧ ವಿಧ ನಾರುಬೇರುಗಳೂ ಎತ್ತರಕ್ಕೆ ಬೆಳೆದ ಮರಗಳ ಮೇಲೆ ಮತ್ತು ಬೊಂಬುಗಳ ಮೇಲೆ ಹಬ್ಬಿದ ತರುಗುಲ್ಮಲತೆಗಳೂ ಕಾಡಿಗೆ ಶೋಭೆ ಯನ್ನುಂಟು ಮಾಡುತ್ತಿದ್ದವು."

ಆದರೆ ಕೋಟಿ ಕೋಟಿ ವರ್ಷಗಳಿಂದ ಬಂದ ಈ ಹಚ್ಚ ಹಸಿರಿನ ಪ್ರಕೃತಿ, ಅರಣ್ಯ ಜೀವಿಗಳು ಇಂದಿಲ್ಲಿ ಮರೆಯಾಗುತ್ತಿವೆ. ನಾಗರಿಕತೆಯ ಹೆಸರಿನಲ್ಲಿ ಪರಿಸರ-ಪ್ರಕೃತಿ ಸಂಪನ್ಮೂಲಗಳು ಸೂರೆಗೊಳ್ಳುತ್ತಿವೆ ಎಂದು ವಿಷಾದದಿಂದ ಹೇಳಬೇಕಾಗಿದೆ.

ಪಾಶ್ಚಿಮಾತ್ಯ ದೇಶಗಳ ಸಂಪರ್ಕದಿಂದಾಗಿ ಈ ಜಿಲ್ಲೆ ವಿದ್ಯೆಯಲ್ಲಿ, ಸಂಸ್ಕೃತಿಯಲ್ಲಿ, ಕೈಗಾರಿಕಾ ಕ್ಷೇತ್ರದಲ್ಲಿ ಬೇರೆ ಜಿಲ್ಲೆಗಳಿಂದ ಮುಂದುವರಿದ ಜಿಲ್ಲೆಯಾಯಿತು. ಶಿಕ್ಷಣ, ಕೃಷಿ ಕೈಗಾರಿಕೆ, ಸಾರಿಗೆ ಸಂಪರ್ಕ, ಬ್ಯಾಂಕಿಂಗ್ ಮೊದಲಾದ ಚಟುವಟಿಕೆ ಗಳು ಒಂದನ್ನೊಂದು ಪೂರಕವಾಗಿ ಬಳಸಿ ಸಮಗ್ರವಾಗಿ ಈ ಜಿಲ್ಲೆ ಬೆಳೆದ ರೀತಿಯಂತೂ ಅಧ್ಯಯನ ಯೋಗ್ಯ.

ಮಣ್ಣಿನ ಮಡಿಕೆ, ಮಗ್ಗದ ಸೀರೆ, ಪೀಠೋಪ ಕರಣ, ಹಂಚು, ಬೀಡಿಗಳನ್ನು ಹೊರಪ್ರದೇಶ ಗಳಿಗೆ ಕಳಿಸುತ್ತಿದ್ದ ಜಿಲ್ಲೆಯಿಂದು ಕಿರು ಮತ್ತು ಮಧ್ಯಮ ಮಟ್ಟದ ಕೈಗಾರಿಕೆಗಳನ್ನು ಬಹುಸಂಖ್ಯೆ ಯಲ್ಲಿ ಹೊಂದಿವೆ; ಹೊಸ ರಫ್ತು ನೆಲೆ ಕಂಡು ಕೊಳ್ಳುತ್ತಿದೆ. ಕಲ್ಲು, ಮಣ್ಣು, ಮರಗಳ ಕಚ್ಚಾ ವಸ್ತುಗಳಿಂದ ಕತ್ತಿ, ನೇಗಿಲು, ಏತಗಳಂತಹ ಕೃಷಿಕನ ಹತ್ಯಾರಗಳಿಂದ ಪ್ರಾರಂಭಗೊಂಡ ಇಲ್ಲಿನ ಕೈಗಾರಿಕೆಯೀಗ ಉಷ್ಣ ವಿದ್ಯುತ್ ಸ್ಥಾವರ (ನಂದಿಕೂರು), ಪೆಟ್ರೋ ಕೆಮಿಕಲ್ಸ್ ಸ್ಥಾವರ (ಮಂಗಳೂರು)ಗಳ ಜಂಕ್ಷನ್‌ನಲ್ಲಿ ಬಂದು ನಿಂತಿದೆ. ಮಣಿಪಾಲದ ಮುದ್ರಣರಂಗ ದೇಶ ದಲ್ಲೇ ಅತ್ಯುತ್ತಮವೆಂಬ ಹೆಗ್ಗಳಿಕೆಗೆ ಪಾತ್ರ ವಾಗಿದೆ. ಪುತ್ತೂರಿನ ಸಹಕಾರಿ ರಂಗ ಕ್ಯಾಂಪ್ಕೋ ಚಾಕೊಲೇಟ್ ಬಹುರಾಷ್ಟ್ರೀಯ ಸಂಸ್ಥೆಗಳಿಗೂ ಚುರುಕು ಸಿಹಿ ಮುಟ್ಟಿಸಿದೆ.

ಮಣಿಪಾಲ, ಮಂಗಳೂರುಗಳಲ್ಲಿ ಹುಟ್ಟಿದ ಬ್ಯಾಂಕಿಂಗ್ ಸೇವೆ ಉದ್ಯಮವಾಗಿ ಬೃಹದಾಕಾರ ವಾಗಿ ಬೆಳೆದು ನಿಂತು ಹೆಸರುಪಡೆದಿದೆ. ಸಿಂಡಿಕೇಟ್, ಕೆನರಾ, ಕಾರ್ಪೊರೇಶನ್, ವಿಜಯ, ಕರ್ಣಾಟಕ ಎಂದು 20ಕ್ಕೂ ಹೆಚ್ಚು ಬ್ಯಾಂಕಿಂಗ್ ಸಂಸ್ಥೆಗಳ ಸ್ಥಾಪನೆ ಇಲ್ಲಿ ಆಗಿವೆ. ಬ್ಯಾಂಕ್ ಶಾಖೆ ನಿಬಿಡತೆ ಮತ್ತು ಉಳಿತಾಯ ಸಂಗ್ರಹಣೆ ಯಲ್ಲಿ ಈ ಜಿಲ್ಲೆಗೆ ಸರಿಸಾಟಿಯಿಲ್ಲ. ಬ್ಯಾಂಕೇತರ

ಮಂಜುನಾಥ ಸ್ವಾಮಿ ದೇವಾಲಯ, ಧರ್ಮಸ್ಥಳ





ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು

ಹಣಕಾಸು ಸಂಸ್ಥೆಗಳೂ ಇಲ್ಲಿವೆ. ಜನಪ್ರಿಯ ಗೊಳ್ಳುತ್ತಿರುವ ಐ.ಸಿ.ಡಿ.ಎಸ್., ಹೊಸದಾಗಿ ಮಣಿಪಾಲದ ಸಂಸ್ಥೆಗಳಿಗೆ ಸೇರಿರುವ ಲಾರ್ಡ್ ಕೃಷ್ಣ ಬ್ಯಾಂಕ್ ಅಭಿವೃದ್ಧಿಗೆ ಹೊಸ ಆಯಾಮ ನೀಡುವ ಘಟ್ಟದಲ್ಲಿವೆ.

ವರ್ಷಕ್ಕೆ 300 ಸೆಂಟಿಮೀಟರ್‌ನಷ್ಟು ವರುಣ ಕೃಪೆಯಾಗುವ, ಬೇಸಿಗೆಯ ತಿಂಗಳುಗಳಲ್ಲಿ ಬೆವರಿಳಿಸುವ ಇಲ್ಲಿನ ಬಯಲು, ಕಣಿವೆ, ಗುಡ್ಡಗಳಲ್ಲಿ ಬತ್ತ, ಅಡಿಕೆ, ತೆಂಗು, ಕಬ್ಬು, ಗೋಡಂಬಿ ಮೊದಲಿನಿಂದಲೂ ಪ್ರಧಾನ. ಆದರೆ ವಾಣಿಜ್ಯ ಚಟುವಟಿಕೆಗಳು ವಿಸ್ತರಿಸಿದಂತೆ, ಪೇಟೆಗಳೆಲ್ಲ ದಟ್ಟಣಿಸತೊಡಗಿದಂತೆ ಆಹಾರ ಬೆಳೆಗಳು ಕುಸಿದುವು. ಕೋಕೋ ಸಂಬಾರ ಜಿನಸು, ರಬ್ಬರು ಕೃಷಿಗಳು ಪ್ರಬಲಗೊಂಡವು. ಒಂದೊಮ್ಮೆ ಅಕ್ಕಿಯನ್ನು ರಫ್ತು ಮಾಡುತ್ತಿದ್ದ ಜಿಲ್ಲೆಯೀಗ ಆಹಾರಧಾನ್ಯಗಳ ಮಟ್ಟಿಗೆ ಪರಾವ ಲಂಬಿ. ಭಾರೀ ಭರವಸೆ ಹುಟ್ಟಿಸಿದ ಬ್ರಹ್ಮಾವರ ಸಹಕಾರಿ ಸಕ್ಕರೆ ಕಾರ್ಖಾನೆ ನಿರ್ಜೀವಗೊಂಡು ಕಬ್ಬನ್ನು ಕಹಿಗೊಳಿಸಿದೆ. ವಿದ್ಯುತ್‌ನೊಂದಿಗೆ ನೀರಾವರಿಗೂ ಬೆಂಬಲ ನೀಡಬೇಕಿದ್ದ ವರಾಹಿಯೂ ನಿರಾಶೆಗೊಳಿಸಿದೆ.

ದಕ್ಷಿಣ ಕನ್ನಡ ಅದರಲ್ಲೂ ಮಣಿಪಾಲ ಆಧುನಿಕ ಶೈಕ್ಷಣಿಕ ಜೇನುಗೂಡೆನಿಸಿದೆ. ವಿದೇಶ ಗಳಿಂದಲೂ ಇಲ್ಲಿಗೆ ಶಿಕ್ಷಣಾರ್ಥಿಗಳು ಬರುತ್ತಾರೆ. ಮೆಡಿಕಲ್, ಡೆಂಟಲ್, ಫಾರ್ಮೆಸಿ, ಇಂಜಿನಿಯರಿಂಗ್, ನರ್ಸಿಂಗ್ ಎಂದು ತಾಂತ್ರಿಕ ಅಧ್ಯಯನ ಸಂಸ್ಥೆಗಳೂ ಇಲ್ಲಿನ ಪದವಿಕಾಲೇಜು ಗಳೊಂದಿಗೆ ಪೋಣಿತವಾಗಿವೆ. ಮಂಗಳೂರು ವಿಶ್ವವಿದ್ಯಾಲಯವನ್ನು ಪಡೆದಿರುವ ಈ ಪ್ರದೇಶ ದಲ್ಲಿರುವ ಶೈಕ್ಷಣಿಕ ಕೊರತೆಯೇನೆಂದರೆ–ಕೃಷಿ ಕಾಲೇಜೊಂದು ಇಲ್ಲದಿರುವುದು. ಆದಿಯಲ್ಲಿ ಕ್ರಿಶ್ಚಿಯನರು, ಆ ಬಳಿಕ ಮಣಿಪಾಲದ ಪೈಗಳು ನಡೆಸಿದ ಶೈಕ್ಷಣಿಕ ಪ್ರಸಾರದ ಹಾದಿಯಲ್ಲಿಯೇ ನಿಟ್ಟೆ, ಸುಳ್ಯಗಳಂತಹ ಸಂಸ್ಥೆಗಳೊಂದಿಗೆ ಪ್ರತಿ ತಾಲೂಕಿನಲ್ಲಿಯೂ ಸ್ಥಳೀಯರು ಉತ್ಸಾ ಹಿತರಾಗಿದ್ದುದು ಶಿಕ್ಷಣಾವಕಾಶಗಳನ್ನು ವಿಸ್ತರಿ ಸಲು ಪ್ರೇರಣೆಯಾಯಿತೆನ್ನಬಹುದು.

ಕಾಸರಗೋಡು, ಪಾಣೆಮಂಗಳೂರು, ಸಂಪಾಜೆಘಾಟಿ, ನಾಗೋಡಿ ಘಾಟಿಗಳಂತಹ ಬೆರಳೆಣಿಕೆಯ ಸಾರಿಗೆ ಸಂಪರ್ಕವಿದ್ದುದು ಹಳೆಕಾಲದಲ್ಲಿ. ಈಗ ಹಳ್ಳಿಹಳ್ಳಿಗಳಿಗೂ ರಸ್ತೆ ಜಾಲವಿದೆ; ಬಸ್ ಸೌಕರ್ಯವಿದೆ. ಜಿಲ್ಲಾ ಕೇಂದ್ರ ಮಂಗಳೂರಿಗೆ ತಿರುವನಂತಪುರ, ಮದ್ರಾಸ್, ಬೆಂಗಳೂರು ಕಡೆಗಳಿಂದ ರೈಲು ದಾರಿಗಳಿವೆ. ಈಗ ಪಶ್ಚಿಮ ಕರಾವಳಿಯ ಭವಿಷ್ಯವನ್ನೇ ಬದಲಿಸಲಿರುವ ಕೊಂಕಣ ರೈಲುಮಾರ್ಗ ಈ ಜಿಲ್ಲೆಯಲ್ಲೇ ಹಾದುಹೋಗಲಿದೆ. ಬಜ್ಪೆ ವಿಮಾನ ನಿಲ್ದಾಣಗಳ ಇಂಡಿಯನ್ ಏರ್

ಲೈನ್ಸ್, ವಾಯು ದೂತ್; ಈಸ್ಟ್ ವೆಸ್ಟ್ ಏರ್‌ಲೈನ್ಸ್, ಆಕಾಶಯಾನ ಸೌಕರ್ಯವಿದೆ. ದೂರಸಂಪರ್ಕದಲ್ಲಂತೂ ಈ ಜಿಲ್ಲೆಯಲ್ಲಿ ಕ್ರಾಂತಿಯೇ ಆಗುತ್ತಿದೆ.

ದಕ್ಷಿಣ ಕನ್ನಡದ ಆಹಾರ ಪದ್ಧತಿಯನ್ನು ದೇಶಕ್ಕೆಲ್ಲ ಪರಿಚಯಿಸಿದ ಉಡುಪಿ ಹೊಟೇಲ್‌ಗಳ ಮೂಲ ಊರಾದ ಇಲ್ಲೀಗ ಹೊಟೇಲ್, ರೆಸ್ಟಾರೆಂಟ್, ಲಾಜಿಂಗ್ ಸೌಕರ್ಯಗಳು ಸಣ್ಣಪುಟ್ಟ ಊರುಗಳಲ್ಲಿಯೂ ಇದೆ. ಹಾಗೆಯೇ ಬಿಯರ್ ಮದ್ಯಸೇವನೆಯಲ್ಲಿ ರಾಜಧಾನಿ ಬೆಂಗಳೂರು



ಉಡುಪಿ ಕನಕದಾಸರು

ನಗರಕ್ಕೆ ಸವಾಲೆಸೆಯುತ್ತಿರುವುದರೊಂದಿಗೆ ಕುಗ್ರಾಮಗಳಲ್ಲಿಯೂ ವೈನ್‌ಶಾಪ್/ಸಾರಾಯಿ ಅಂಗಡಿಯೂ ಇದೆ.

ಕರ್ನಾಟಕದ ವಿಜಯನಗರ, ಕೆಳದಿ, ಹೈದರಾಲಿ, ಟಿಪ್ಪು, ಬ್ರಿಟಿಷರ ಕಾಲದಿಂದಲೂ ತಮ್ಮತನವನ್ನು ಉಳಿಸಿಕೊಂಡು ಬಂದ ಈ ಪ್ರದೇಶಿಗರು ಈಗ ಮಲೆಯಾಳ, ತಮಿಳು ಎಂದು ಪರಭಾಷಿಗರ–ಪ್ರದೇಶಿಗರ ವಲಸೆಯನ್ನೊಪ್ಪಿ ವೈಶಿಷ್ಟ್ಯವನ್ನು ಮತ್ತಷ್ಟು ವಿಸ್ತೃತಗೊಳಿಸಿದೆ. ಇದನ್ನು ಭಾಷೆಗಳ ಆಡುಂಬೊಲವೆಂದು ಭಾಷಾದ್ವೇಷ ವ್ಯಾಮೋಹಗಳ ಸಂಕುಚಿತ ಭಾವವಿಲ್ಲದ ಬಗ್ಗೆ ಸಾಹಿತಿ ಮರಿಯಪ್ಪ ಭಟ್ಟ ಕರೆದರು. ತುಳು ಇಲ್ಲಿನ ನಾಡಭಾಷೆ; ಕನ್ನಡ ರಾಜ್ಯಭಾಷೆ. ಇವೆರಡರೊಂದಿಗೆ ಕೊಂಕಣಿ, ಮಲೆಯಾಳ, ಮರಾಠಿ, ಉರ್ದು, ಹಿಂದಿ, ತೆಲುಗು, ಗುಜರಾಥಿ, ತಮಿಳುಗಳೂ ಸೇರಿ ಈ ಪ್ರದೇಶವನ್ನು ಭಾಷಾ ಮೊಸ್ಯಾಯಿಕ್ ನೆಲವನ್ನಾಗಿಸಿವೆ. ಆಧುನಿಕ ಸಿನಿಮಾ, ಸಂಗೀತ, ಸಾಟ್‌ಲೈಟ್ ಟಿ.ವಿ.ಗಳ ಅಬ್ಬರದ ಹೊರತಾಗಿಯೂ ಇಲ್ಲಿ ಕಂಬಳ, ನಾಗಮಂಡಲ, ಯಕ್ಷಗಾನ, ಭೂತಾರಾದನೆ, ಗೊಂಬೆಯಾಟ, ಜಾನಪದ, ಪಾಡ್ದನಗಳು, ತಾಳಮದ್ದಳೆ ಸಂಸ್ಕೃತಿ ನಶಿಸಿಹೋಗದೆ ಮೆರೆದಿವೆ. ಅಷ್ಟೇಅಲ್ಲ ವಿದೇಶೀಯರನ್ನು, ಸಂಶೋಧಕರನ್ನೂ ಪ್ರವಾಸಿಗರನ್ನೂ ಸೂಜಿಗಲ್ಲಿನಂತೆ ಆಕರ್ಷಿಸಿವೆ. ಅದೇಕೋ ನಾಟಕ, ಸಂಗೀತ, ಚಿತ್ರಕಲೆ, ನೃತ್ಯಕಲೆಗಳಲ್ಲಿ ಈ ಜನಕ್ಕೆ ಸ್ವಲ್ಪ ಅಸಡ್ಡೆ ಎಂದರೂ ಅತಿಶಯವಲ್ಲ.

29 ಲಕ್ಷ ಜನಸಂಖ್ಯೆ ಹೊಂದಿರುವ ದಕ್ಷಿಣ ಕನ್ನಡ ಸಂಪೂರ್ಣ ಸಾಕ್ಷರತಾ ಜಿಲ್ಲೆಯೆಂದೂ ಪರಿಗಣಿತವಾದ ಮೊದಲ ಕರ್ನಾಟಕ ಜಿಲ್ಲೆ. ಆದರೂ ಇಲ್ಲಿ ಅನಕ್ಷರಸ್ತರು ಇನ್ನೂ ಅನೇಕರಿದ್ದಾರೆ ಎಂದು ದೂರುಗಳೂ ಬಂದಿವೆ.

ನನ್ನೂರಿನ ಜನರ ಬಗ್ಗೆ ಮುದವೀಡು ಕೃಷ್ಣರಾವ್ 29-11-1938ರಲ್ಲಿ ಹೀಗೆ ಬರೆದರು: "ಇಡೀ ಕನ್ನಡ ನಾಡಿನಲ್ಲಿ ದ.ಕ. ಜಿಲ್ಲೆಯ ಜನರು ಸಾಹಸಿಗಳು. ಅವರು ಹೋದಕಡೆ ತಮ್ಮ ಪ್ರಭಾವವನ್ನು ಬೀರುತ್ತಾರೆ ಎಂಬುದಾಗಿ ದ. ಕನ್ನಡದವರ ಕೀರ್ತಿ ಎಲ್ಲೆಲ್ಲಿಯೂ ಹಬ್ಬಿದೆ.



ಜಿಲ್ಲೆಯ ಜಾನಪದ ಕ್ರೀಡೆ – ಕಂಬಳ

ದಕ್ಷಿಣ ಕನ್ನಡದವರ ಕಾರ್ಯಕುಶಲವು ಜಗದ್ವಿಶ್ರುತವಾಗಿದೆಯೆಂದು ಹೇಳುವುದು ಅತ್ಯುಕ್ತಿಯಲ್ಲ. ನಿರ್ವಿಕಲ್ಪವಾದ ಕನ್ನಡತನ ಬೆಳವಣಿಗೆಗೆ ಅಲ್ಲಿಯೇ ಅವಕಾಶ ದೊರೆತಿದೆ. ಮುದ್ದಣ ಕವಿಕಿಂಕರರಂತಹ ಆಧುನಿಕ ಕನ್ನಡ ಕವಿ ಚಕ್ರವರ್ತಿಗಳು ಅಲ್ಲಿಯೇ ಜನ್ಮತಾಳಿದ್ದಾರೆ. ಹಿಂದಿನ ಹಾಗೂ ಇಂದಿನ ಕನ್ನಡ ಸಾಹಿತ್ಯಕ್ಕೆ ದಕ್ಷಿಣ ಕನ್ನಡದವರು ಸಲ್ಲಿಸಿದ ಸೇವೆಯೂ ಅಭೂತಪೂರ್ವ. ಇಂದಿಗೆ ಕನ್ನಡ ವೃತ್ತಪತ್ರ, ಮಾಸಪತ್ರಗಳು ಕನ್ನಡತನದ ತಿರುಳನ್ನು ಹೆಚ್ಚಾಗಿ ಸಾರುತ್ತಿರುವುದೂ ದ.ಕ. ದಲ್ಲಿಯೇ. ಹೀಗೆ ಅನೇಕ ಬಗೆಗಳಿಂದ ಅನುಕೂಲ ವಾತಾವರಣವುಳ್ಳ ದಕ್ಷಿಣ ಕನ್ನಡವೇ ಕರ್ನಾಟಕ ಏಕೀಕರಣ ವಿಚಾರಕ್ಕೆ ಉಗಮಸ್ಥಾನವೆಂಬುದನ್ನೂ ನಾವು ಮರೆಯುವಂತಿಲ್ಲ" ನನ್ನೂರು ಕರ್ನಾಟಕದ ಫಾರೈನ್ ಆಗಿ ತನ್ನ ವೈಶಿಷ್ಟಗಳನ್ನು ಮರೆಯುತ್ತಾ ದಕ್ಷಿಣ ಕನ್ನಡ ಹೀಗೆಯೇ ಅಭ್ಯುದಯ ಪಥದಲ್ಲಿ ಮುಂದುವರಿಯಬೇಕೆಂಬುದು ನನ್ನಾಸೆ. ●

### ಕಾಸರಗೋಡು ಕನ್ನಡಿಗರು

# 'ದೃಢಸಂಕಲ್ಪದಿಂದ ಕಾಯುತ್ತಿದ್ದೇವೆ...'

● ಕಯ್ಯಾರ ಕಿಞ್ಞಣ್ಣ ರೈ

ಹಿಂದಿನ ದೇಶದ ರಾಜಕೀಯ ವ್ಯವಸ್ಥೆಯಂತೆ, ಕಾಸರಗೋಡು ಪ್ರದೇಶವೂ ಆಗಾಗ ಬೇರೆ ಬೇರೆ ರಾಜರ ಆಡಳಿತಕ್ಕೆ ಒಳಪಟ್ಟಿತ್ತು. ವಿಜಯನಗರದ ಅರಸರು, ಇಕ್ಕೇರಿ ನಾಯಕರು, ಮೈಸೂರಿನ ಸುಲ್ತಾನರು–ಹೀಗೆ ಅರಸು ಬಲ್ಲಾಳರೆಲ್ಲರೂ ಆಳಿದರು. ಭಾರತವನ್ನು ಏಕಸೂತ್ರದ ಆಡಳಿತಕ್ಕೆ ತಂದ ಬ್ರಿಟಿಷರು ಈ ಪ್ರದೇಶವನ್ನು ಮದ್ರಾಸು ರಾಜ್ಯದಲ್ಲಿ ಸೇರಿಸಿದರು; ಆಗ ಇದು ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿತ್ತು. 1-11-1956ರ ಪ್ರಾಂತ ವಿಭಜನೆಯ ನಂತರ, ದೇಶ ಸ್ವತಂತ್ರವಾದ ಮೇಲೆ, ಆ ಬಗ್ಗೆ ನೇಮಕವಾಗಿ ಫಜ್ಲಾಲಿ ಕಮಿಶನಿನ ವರದಿಯಂತೆ ಆ ಕಮಿಶನಿನಲ್ಲಿ ಕೇರಳದವರೇ ಆದ ಸರ್ದಾರ್ ಪಣಿಕ್ಕರ್ ಒಬ್ಬ ಸದಸ್ಯರಾಗಿದ್ದು ಅವರು ಪ್ರಭಾವ ಬೀರಿದಂತೆ ಈ ಭಾಗ ಕೇರಳಕ್ಕೆ ಅನ್ಯಾಯವಾಗಿ ಸೇರಿಸಲ್ಪಟ್ಟಿತು. ಆದರೆ ಈ ಅನ್ಯಾಯದ ವಿರುದ್ಧ ದೀರ್ಘಕಾಲದ ಇಲ್ಲಿನ ಜನತೆಯ, ಮುಖ್ಯವಾಗಿ ಕನ್ನಡಿಗರ ಹೋರಾಟ ನಡೆದು ತತ್ಫಲವಾಗಿ ನೇಮಕವಾದ ಮಹಾಜನ ಆಯೋಗ, ಚಂದ್ರಗಿರಿ–ಪಯಸ್ವಿನಿ ಹೊಳೆಯ ಉತ್ತರ ಭಾಗವನ್ನು ಕರ್ನಾಟಕಕ್ಕೆ ಸೇರಬೇಕೆಂದು ಶಿಫಾರಸು ಮಾಡಿದೆ. ಈ ಶಿಫಾರಸು ಜಾರಿಗೊಳ್ಳುವ ಸುಮುಹೂರ್ತವನ್ನು ಇಲ್ಲಿನ ಕನ್ನಡಿಗರು ನಿರೀಕ್ಷಿಸುತ್ತಿದ್ದಾರೆ.

'ಆಡಳಿತ ಸೌಕರ್ಯಕ್ಕಾಗಿ' ಕಾಸರಗೋಡನ್ನು ಕೇರಳಕ್ಕೆ ಸೇರಿಸಲಾಯಿತು ಎಂದು ಫಜ್ಲಾಲಿ ಕಮಿಶನಿನ ವರದಿಯ ಉಲ್ಲೇಖವಾಗಿ ಇಂದಿಗೆ ಸುಮಾರು ಮೂವತ್ತಾರು ವರ್ಷಗಳೇ ಸಂದವು; ಆಡಳಿತ ಸೌಕರ್ಯ್ಯ ಬೇಕಾದುದು ಕಾಸರಗೋಡಿನ ಜನತೆಗೆ; ಆದದ್ದು ಕೇರಳ ಸರಕಾರಕ್ಕೆ; ಇಂದಿಗೂ ಕಾಸರಗೋಡಿನವರು ಊಟ ಮಾಡಲು ಬೇಕಾದ ಅಕ್ಕಿಗೆ ಹೆಚ್ಚೇಕೆ ಉಪ್ಪು, ಮೆಣಸಿಗೂ ದಕ್ಷಿಣ ಕನ್ನಡವನ್ನೇ ಅವಲಂಬಿಸಬೇಕು. ಇಲ್ಲಿನ ಸಮೃದ್ಧ ನಾಣ್ಯ ಬೆಲೆ ಅಡಿಕೆ ಮಾರಾಟಕ್ಕೆ ಮಂಗಳೂರೇ ಗತಿ; ಆದರೆ ಆ ಕೃಷಿಯಿಂದ ಬಂದ ಉತ್ಪನ್ನದಲ್ಲಿ ತೆರಿಗೆ ಮಾತ್ರ ಕೇರಳಕ್ಕೆ ಕೊಟ್ಟು ಕೈ ಮುಗಿಯುವ ಸೌಕರ್ಯ ಇಲ್ಲಿ ನಮಗಿದೆ; ತೆರಿಗೆ ಕೊಟ್ಟ ಬಗ್ಗೆ ಈ ಪ್ರದೇಶದ ಮಾರ್ಗಗಳು ಇನ್ನೂ ತಾರು ಕಾಣದೆ ಧೂಳಿದೂಸರವಾಗಿದೆ. ಯಾವುದೇ ಅಭಿವೃದ್ಧಿ ಕಾರ್ಯ ಕೇರಳದಿಂದ ನಡೆಯುತ್ತಿಲ್ಲ. ರಾಜಧಾನಿಯೋ ಬಹಳ ದೂರ; ತಿರುವನಂತಪುರದ ಸಂಪರ್ಕ ಇಲ್ಲಿ ನಮಗೆ ಸಾಮಾನ್ಯವಾಗಿ ಇಲ್ಲ; ಅದಕ್ಕಿಂತ ಹೆಚ್ಚು ಬೆಂಗಳೂರಿನ ಸಂಪರ್ಕ ಇದೆ; ಅದರಿಂದ ಪ್ರಯೋಜನ ಇಂದಿಗೂ ಇದೆ.

ಇಷ್ಟು ದೀರ್ಘಕಾಲ, ಕಾಸರಗೋಡಿನ ಜನ ಕೇರಳದಲ್ಲಿ ಇದ್ದರೂ ಕನ್ನಡವನ್ನೇ ಉಸಿರಾಡುತ್ತಿದ್ದಾರೆ. ಇಲ್ಲಿನ ಕನ್ನಡ ಮಾತೃಭಾಷೆಯವರು ಮಾತ್ರವಲ್ಲ, ತುಳು–ಕೊಂಕಣಿ, ಮಲೆಯಾಳ ಮಾತೃಭಾಷೆಯವರು ಇಂದಿಗೂ ಕನ್ನಡ ಕಲಿಯುತ್ತಾರೆ. ಕೇರಳದಲ್ಲಿ ಉದ್ಯೋಗವಿಲ್ಲ; ಉದ್ಯೋಗ ಹುಡುಕಿ ಕರ್ನಾಟಕಕ್ಕೆ ಬರಬೇಕು; ಕರ್ನಾಟಕ ಸರಕಾರ ಉದ್ಯೋಗ ನೀಡುವರೆ ಅನುಕೂಲ ಮಾಡಿದೆ; ಮೆಡಿಕಲ್ ಇಂಜಿನಿಯರಿಂಗ್ ಪದವಿ ಪಡೆಯಲು ಕರ್ನಾಟಕ ಸರಕಾರ ಗಡಿ ಕನ್ನಡಿಗರಿಗೆ ರಿಯಾಯಿತಿ ನೀಡಿದೆ; ಇಲ್ಲಿ ಹಿಂದೆ ಪಾರ್ತಿಸುಬ್ಬ, ಗೋವಿಂದ ಪೈ, ಬೇಕಲ ರಾಮನಾಯಕ್, ಕಾವೇರಿ ಕಾನ ಕೃಷ್ಣ ಭಟ್ಟ ಇಂತಹ

ಅನೇಕ ಕವಿಗಳು, ವಿದ್ವಾಂಸರು, ಸಂಶೋಧಕರು, ಲೇಖಕರು ಇದ್ದಂತೆ ಇಂದೂ ಹೆಸರಾಂತ ಕನ್ನಡ ಕವಿಗಳು, ಕತೆಗಾರರು, ಲೇಖಕರು, ವಿದ್ವಾಂಸರು, ಸಂಶೋಧಕರು ಇದ್ದಾರೆ. ಅಖಿಲ ಕರ್ನಾಟಕ ಖ್ಯಾತಿಯ ಕನ್ನಡಿಗರು ಇದ್ದಾರೆ; ಅವರೆಲ್ಲರಿಗೂ ನಿಜವಾಗಿ ಸೌಕರ್ಯ ದೊರಕುವುದು ಕರ್ನಾಟಕ ದಿಂದಲೇ; ಆದರೆ ಆಡಳಿತ ಸೌಕರ್ಯಕ್ಕಾಗಿ ಸೇರಿಸಲಾಗಿದೆ ಎಂಬ ಮಾತನ್ನು ಪಣಿಕ್ಕರ್ ಮಹಾಶಯ ಕೂಡಿ ಬರೆಸಿದ್ದು ಬಹುಶಃ ಈ ಭಾಗದ ಧಾರಾಳ ತೆರಿಗೆಯಿಂದ ದರಿದ್ರ ರಾಜ್ಯವೆನಿಸಿದ ಕೇರಳಕ್ಕೆ ತೆರಿಗೆ ರೂಪದಿಂದ ಧಾರಾಳ ಹಣ ಸಿಗುತ್ತದೆ ಎಂಬುದಕ್ಕೆ ಮಾತ್ರ ಎಂದು ಅರ್ಥ ಮಾಡಬೇಕು. ಅಲ್ಲದೆ ಇಲ್ಲಿನ ಜನತೆಗೆ ಯಾವ ಸೌಕರ್ಯವೂ ಇಲ್ಲವಾಗಿದೆ ಎಂಬುದು ಖಚಿತವಾಗಿದೆ.

ಬುದ್ಧಿವಂತರೂ ದೂರದರ್ಶಿಗಳೂ ಆದ ಕೇರಳದ ಮುಖಂಡರೇ ಕಾಸರಗೋಡು ಕರ್ನಾಟಕದ್ದೆಂದು ಒಪ್ಪಿಕೊಂಡಿದ್ದಾರೆ. 1952ರ ಸುಮಾರಲ್ಲಿ ಶ್ರೀ ಇ. ಎಂ. ಎಸ್. ನಂಬೂದಿರಿಪಾಡ್ ಬರೆದ ಗ್ರಂಥದಲ್ಲಿ ಈ ಭಾಗ ಕರ್ನಾಟಕದ್ದೆಂದು ಹೇಳಿದ್ದಲ್ಲದೆ, ಅವರು ಮುಖ್ಯಮಂತ್ರಿಗಳಾಗಿದ್ದಾಗ, ಈ ಪ್ರದೇಶ ಕನ್ನಡ ಪ್ರದೇಶವೆಂಬ ಸರಕಾರೀ ಆದೇಶ ಹೊರಡಿಸಿರುವರು; ಅದೇ ರೀತಿ ಕೇರಳದ ಇನ್ನೊಬ್ಬ ಮುಖ್ಯಮಂತ್ರಿ ಶ್ರೀ ಅಚ್ಚುತ ಮೆನನ್ ಕಾಸರಗೋಡು ಕನ್ನಡಿಗರಿಗೆ ಅನ್ಯಾಯವಾಗಿದೆ ಎಂದು ಒಪ್ಪಿದ್ದಾರೆ. ಮಲಬಾರ್ ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಸಿ. ಕೆ. ಗೋವಿಂದನ್ ನಾಯರ್, ಖ್ಯಾತ ವಿದ್ವಾಂಸರೂ ವಿದ್ಯಾ ಮಂತ್ರಿಗಳೂ ಆಗಿದ್ದ ಜೋಸೆಫ್ ಮೊಂಡಶ್ಯೇರಿ, ಇನ್ನೊಬ್ಬ ಮುಖ್ಯಮಂತ್ರಿ ಪಟ್ಟಂತಾಣು ಪಿಳ್ಳೆ ಇವರೆಲ್ಲರೂ ಕಾಸರಗೋಡಿನ ಕನ್ನಡಿಗರಿಗಾದ ಅನ್ಯಾಯವನ್ನು ಒಪ್ಪಿಕೊಂಡಿರುವರು. ಮಹಾಜನ ವರದಿ ಜಾರಿಯಾದಲ್ಲಿ ಈ ಅನ್ಯಾಯ ಪರಿಮಾರ್ಜನೆ ಆಗುತ್ತದೆ. ಆದರೆ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರು ಯಾರಿದ್ದಾರೆ?

ಕರ್ನಾಟಕಕ್ಕೆ ಬೆಳಗಾವಿ ಎಲ್ಲಿ ಕೈಬಿಟ್ಟು ಹೋಗುತ್ತದೋ ಎಂಬ ಶಂಕೆ; ಅದಕ್ಕಾಗಿ ಮಹಾಜನ ವರದಿ ಜಾರಿಗೊಳಿಸಲು ಸಾಕಷ್ಟು ರಾಜಕೀಯ ಒತ್ತಡ ತರುತ್ತಿಲ್ಲವೆಂದು ತೋರುತ್ತದೆ. ಬೆಳಗಾವಿ ಹಿಂದೆಯೂ ಇಂದೂ ಮುಂದೂ ಕರ್ನಾಟಕದ್ದೇ; ಅದು ಹೋಗುವ ಪ್ರಶ್ನೆಯೇ ಇಲ್ಲ; ಮಹಾಜನ ವರದಿ ಜಾರಿಗೊಳಿಸಬೇಕೆಂದು ಕರ್ನಾಟಕ ಸರಕಾರ ಹಠ ಹಿಡಿದು ರಾಜಕೀಯ ಪ್ರಭಾವ ಬೀರಿದಲ್ಲಿ, ಬರಬೇಕಾದ ಕಾಸರಗೋಡು, ಅದರಂತೆ ದಕ್ಷಿಣ ಶೊಲ್ಲಾಪುರ, ಜತ್, ಅಕ್ಕಾಲ ಕೋಟೆ ಮೊದಲಾದ ಪ್ರದೇಶಗಳು ಬರುತ್ತವೆ. ದಿಟ್ಟತನದಿಂದ ಈ ನ್ಯಾಯ ಪಡೆಯಲು ಕರ್ನಾಟಕದ ಧುರೀಣತ್ವ ದೃಢ ನಿರ್ಧಾರ ತಾಳಬೇಕು. ಆಗ ಕಾಸರಗೋಡಿನ ಭವಿಷ್ಯ ಉಜ್ವಲವಾಗುತ್ತದೆ.

**ದಕ್ಷಿಣ ಕನ್ನಡ ಜಿಲ್ಲೆಯ ಆತ್ಮವೇ ಆಗಿರುವ ಕಾಸರಗೋಡು ಪ್ರದೇಶ, ಇನ್ನೊಂದು ಸಂಸ್ಕೃತಿ–ಚೌಕಟ್ಟಿನ ನಡುವೆ ಚಡಪಡಿಸುತ್ತಿದೆ. 'ಇಂದಲ್ಲ ನಾಳೆ ಕಾಸರಗೋಡು ಕರ್ನಾಟಕದೊಂದಿಗೆ ವಿಲಯನವಾಗುತ್ತದೆ ಎಂದು ಕಾಯುತ್ತಿದ್ದೇವೆ' ಎನ್ನುತ್ತಾರೆ ಹಿರಿಯ ಕವಿ–ಹೋರಾಟಗಾರರಾದ ಕಯ್ಯಾರ ಕಿಞ್ಞಣ್ಣ ರೈ.**

ನೆಲದ ಶ್ರೇಷ್ಠತೆಯಿಂದ, ಜಲ, ಫಲ ಸಮೃದ್ಧಿಯಿಂದ, ಸೃಷ್ಟಿಯ ಸೊಬಗಿನಿಂದ, ಸಾಹಿತ್ಯ–ಸಂಸ್ಕೃತಿ ಕಲೆಗಳಿಂದ, ಸರಳ ಸಜ್ಜನಿಕೆಯಿಂದ ಕಾಸರಗೋಡು ಪ್ರಖ್ಯಾತವಾಗಿದೆ. ಈ ಭಾಗ ಯಾವಲ್ಲಿಗೆ ಸೇರಿದರೂ ಅಲ್ಲಿಗೆ ಲಾಭವೇ ಹೊರತು ನಷ್ಟವಿಲ್ಲ. ಪ್ರಪಂಚದಲ್ಲಿಯೇ ಅತಿ ಶ್ರೇಷ್ಠವಾದ ಅಡಿಕೆ ಇಲ್ಲಿ ಬೆಳೆಯುತ್ತದೆ. ಅದರಿಂದ ಈ ಪ್ರದೇಶ ಸಹಜವಾಗಿ ಸಂಪದ್ಭರಿತವಾಗಿದೆ. ಯಕ್ಷಗಾನ ಪಿತಾಮಹ ಪಾರ್ತಿ

ಸುಬ್ಬನಿಂದ ಪ್ರಚಲಿತವಾದ ಅಖಿಲ ಕರ್ನಾಟಕ ಮಾತ್ರವಲ್ಲ ಇಂದು ರಾಷ್ಟ್ರ ವಿಶ್ವವ್ಯಾಪಿಯಾಗಿರುವ ಯಕ್ಷಗಾನ ಸಾಹಿತ್ಯ ಕಲೆಗಳಿಗೆ ಇದೇ ತವರೂರು. ರಾಷ್ಟ್ರಕವಿ ಗೋವಿಂದ ಪೈಗಳಂತಹ ವಿದ್ವಾಂಸರು, ಸಂಶೋಧಕರು, ಕವಿಗಳು ಇಡೀ ಭಾರತ ದೇಶದಲ್ಲಿಯೇ ಇನ್ನೊಬ್ಬರು ಸಿಗುವುದು ದುರ್ಲಭ. ಬೆನ್ನ ಹಿಂದೆ ಪಶ್ಚಿಮ ಘಟ್ಟದ ಬೆಂಬಲ, ಕಣ್ಣ ಮುಂದೆ ವಿಶಾಲ ರುದ್ರ ರಮಣೀಯ ನೀಲ ವಿಶಾಲ ಸಾಗರ, ನಡುವೆ ಕಲ ಕಲ ನಿನಾದದಿಂದ ಹರಿವ ನೇತ್ರಾವತಿ, ಪಯಸ್ವಿನೀ ಮೊದಲಾದ ನದಿಗಳು, ನಳನಳಿಸುವ ತೆಂಗು, ಕಂಗು, ಭತ್ತ ಬೆಳೆವ ಸಸ್ಯಶ್ಯಾಮಲೆ ಪೃಥಿವಿ—ಇಂತಹ ಸೊಬಗಿನಿಂದ, ಸಮೃದ್ಧಿಯಿಂದ, ಈ ಪ್ರದೇಶದ ನಾಡಿನ ಪ್ರಭುತ್ವಕ್ಕೆ ಮೂಡಿದ ಕಿರೀಟವೆಂಬ ಅರ್ಥದಲ್ಲಿ ಕಾಸರ+ಕೋಡು ಆಗಿದೆ; ಹೆಮ್ಮೆಪಡುವಂತಾಗಿದೆ.

ಆದರೆ ಇಂದಿನ ದುರ್ದೈವ ಕೇರಳದ ಮರುಭೂಮಿಯಲ್ಲಿ ನಾವು, ಇಲ್ಲಿಲ್ಲಿನ ಜನತೆ—ಮುಖ್ಯವಾಗಿ ಕನ್ನಡಿಗರು ದಿನ ರಾತ್ರಿ ಬೆಂದು ಬೇಗುದಿಗೊಂಡಿದ್ದೇವೆ; 'ಚಂದ್ರಾಪೀಡನ ದೇಹಕ್ಕೆ ಪುನಃ ಪ್ರಾಣ ಪ್ರತಿಷ್ಠೆಯಾಗುವ ಸುಮುಹೂರ್ತವನ್ನು ಕಾದು ಕುಳಿತ ಮಹಾಶ್ವೇತೆಯಂತೆ' ಕಾಸರಗೋಡಿನ ಕನ್ನಡಿಗರು ಕರ್ನಾಟಕದೊಂದಿಗೆ ವಿಲಯನಗೊಳ್ಳುವುದನ್ನೇ ಕಾಯುತ್ತಿದ್ದಾರೆ. ಇಂದಿಲ್ಲ—ನಾಳೆ—ಅದು ಆಗಿಯೇ ಆಗುತ್ತದೆ ಎಂಬ ದೃಢ ಸಂಕಲ್ಪ ಅವರದು. ಇದಕ್ಕೆ ಸಮಸ್ತ ಜನತೆಯ ಸಹಾಯ, ಸಹಕಾರ ಅವರು ಆಶಿಸುತ್ತಾರೆ; ಪ್ರಾರ್ಥಿಸುತ್ತಾರೆ. ●

## "ಬೈದೆಬೆಟ್ಟು—'ನಾರಾಯಣ' ಹೆಸರಿನ ವಿಶ್ವದಾಖಲೆಯೇ?"

ನನ್ನ ಊರು ಬೈದೆಬೆಟ್ಟು. ಇದು ಚಾರಿತ್ರಿಕ ಪ್ರದೇಶದಲ್ಲೊಂದಾದ ಬಾರಕೂರಿನಿಂದ 10-12 ಮೈಲು ದೂರದಲ್ಲಿ, ಕೊಕ್ಕರ್ಣೆ (KOKKARNE) ಯಿಂದ ಹೆಬ್ರಿಗೆ ಹೋಗುವ ದಾರಿಯಲ್ಲಿ ಸಿಗುವುದು. ಊರಿನ ವಿಶೇಷತೆ ಎಂದರೆ ಬೇರೆ ಬೇರೆ ಜಾತಿಯ ಜನರು ತಮ್ಮದೇ ಆದ ಕೇರಿಯಲ್ಲಿ ನೆಲಸಿದ್ದು. ಇಲ್ಲಿ ಮುಂಡಕ್ಕಿಯವರು, ಮರಾಠಿಗರು, ಬಳೆಗಾರರು, ಗೌಡ ಸಾರಸ್ವತರು, ಪೂಜಾರರು ಮತ್ತು ಶೆಟ್ಟಿಗಳು ನೆಲಸಿದ್ದಾರೆ. ಅನ್ಯೋನ್ಯದಲ್ಲಿಯಿಲ್ಲದಿದ್ದರೂ ತಮ್ಮಷ್ಟಕ್ಕೆ ತಾವು ಜೀವನ ಸಾಗಿಸಿಕೊಂಡಿದ್ದಾರೆ. ನನಗೆ ವಿಚಿತ್ರವಾಗಿ ತೋರಿದ ಒಂದು ವಿಶೇಷತೆ ಎಂದರೆ "ನಾರಾಯಣ" ಎಂಬ ಹೆಸರಿನ ಸಾಧಾರಣ 30-35 ಜನರ ಗುರುತು ನನಗಿದೆ. ನೆನಪಿಸಿ ಲೆಕ್ಕ ಮಾಡಿದಲ್ಲಿ "ಗಿನ್ನಿಸ್ ವರ್ಲ್ಡ್ ಬುಕ್"ನಲ್ಲಿ ದಾಖಲಿಸಲು "ಈ ವಿಚಿತ್ರ", ಅರ್ಹತೆ ಪಡೆಯಬಹುದೇ ಎಂತ ನನ್ನ ಸಂಶಯ. ನನ್ನ ಪರಿಚಯದ ನಾರಾಯಣರು ಈ ರೀತಿಯ ಹೆಸರಿನಲ್ಲಿ ಪ್ರಸಿದ್ಧಿ:—

ಬೈದೆಬೆಟ್ಟು ಶಾಲೆ ನಾರಾಯಣ ಮಾಸ್ಟ್ರು, ಕೆಂಜೂರು ಶಾಲೆ ನಾರಾಯಣ ಮಾಸ್ಟ್ರು, ಪಟೇಲ್ರ ಮನೆ ನಾರಾಯಣ, ಅಂಗಡಿಮನೆ ನಾರಾಯಣ, ಕೆಳ್ಗಂಗಡಿ ನಾರಾಯಣ, ಮೈರ್ಮಾಡಿ ನಾರಾಯಣ, ಬಳೆಗಾರ ನಾರಾಯಣ, ಮೇಲಬೆಟ್ಟು ನಾರಾಯಣ, ಹುಬ್ಬದಂಗಡಿ ನಾರಾಯಣ, ಕಡಂಗೊಡು ನಾರಾಯಣ, ಪೂಜಾರಿಬೆಟ್ಟು ನಾರಾಯಣ, ಹಳ್ಳಿ ನಾರಾಯಣ, ಕುಂಬಾರ ನಾರಾಯಣ, ಅಕ್ಷಲಿಗ ನಾರಾಯಣ, ಗಾಳಿಮನೆ ನಾರಾಯಣ, ಗಾಡಿ ನಾರಾಯಣ, ಕಳ್ತೂರು ನಾರಾಯಣ, ಚಾಪಾಳಿ ನಾರಾಯಣ, ಮೈರ್ಮಕ್ಕಿ ನಾರಾಯಣ, ಉಪ್ಪರಿಗೆ ಮನೆ ನಾರಾಯಣ, ಹೊಟೇಲು ನಾರಾಯಣ, ಸರಾಯಿ ಅಂಗಡಿ ನಾರಾಯಣ, ಮಾರಾಳಿ ನಾರಾಯಣ ಮಾಸ್ಟ್ರು, ಕಂಬಳಗದ್ದೆ ನಾರಾಯಣ, ಬಚ್ಚಿರೆ ನಾರಾಯಣ, ಚೊಂಟಕಾಲ ನಾರಾಯಣ, ಮರಾಠಿ ನಾರಾಯಣ, ಒಳಬೈಲು ನಾರಾಯಣ, ಬೈದೆಬೆಟ್ಟು ನಾರಾಯಣ.

● ಆನಂದ್ರಾಯ ಪೈ

ನನ್ನೂರು ನನ್ನ ಜನ

# ನೆನಪಿನಂಗಳದಲ್ಲಿ ಮಂಗಳೂರು

● ಮನೋರಮಾ ಎಂ. ಭಟ್
4-6-630 ಕರಂಗಲಪಾಡಿ,
ಮಂಗಳೂರು – 575 003.
● ಫೋಟೋ: ಯಜ್ಞ

ಯಾವ ಊರಾದರೂ ಆದೀತು... ನಿಮ್ಮ ಮಂಗಳೂರು ಮಾತ್ರ ಬೇಡಪ್ಪ ಎನ್ನುತ್ತಾರೆ ಹೊರಗಿನವರು. ಅದಕ್ಕೆ ಅವರು ನೀಡುವ ಕಾರಣ–ಮಂಗಳೂರಲ್ಲಿ ಭಾರಿ ಸೆಖೆ... ಮನೆ ಸಿಗುತ್ತಿಲ್ಲ... ಸಿಕ್ಕಿದರೂ ದುಬಾರಿ ಬಾಡಿಗೆ... ಜೀವನದ ಖರ್ಚು ಕೂಡಾ ಬಹಳ ಹೆಚ್ಚು... ಹೀಗೆ ಹೇಳುವವರ ಮಧ್ಯೆ ನಾವು ಮಾತ್ರ ಖುಶಿಯಾಗಿಯೇ ಇದ್ದೇವೆ. ತುಳುನಾಡಿ ನಷ್ಟು ಹಿತ ನಮಗೆ ಬೇರೆ ಯಾವ ಊರಲ್ಲೂ ಸಿಗದು. ಇಲ್ಲಿನ ಮಳೆ... ಚಳಿ... ಸೆಖೆ– ಎಲ್ಲವೂ ನಮಗೆ ಆಪ್ಯಾಯಮಾನ... ನಮ್ಮಲ್ಲಿನ ಕುಚ್ಚಲಕ್ಕಿಯನ್ನು ಉಣ್ಣುವಾಗ ಜಾನಪದ ಹಾಡಿನ ತುಣುಕೊಂದು ನೆನಪಾಗುತ್ತದೆ:

"ತುಪ್ಪೆಶನ ಉಂಬಲೆ ತುಳು
ನಾಡಿಂಗೋ ಯೆಕ್ಕು ।
ಅಕ್ಕಿಯ ಮೇಲೆ ಬರೆ ಇಲ್ಲೆ ।
ತುಳುನಾಡ ಮಕ್ಕಳ ಮೇಲೆ ಕಲೆ ಇಲ್ಲೆ ।

ತುಳುನಾಡಿನ ಮಕ್ಕಳು ಸುಂದರರಂತೆ... ಕಳಂಕ ರಹಿತರಂತೆ... ನಿಜವೇ? ಪಶ್ಚಿಮ ಸಮುದ್ರದ ಬಳಿ ಇರುವ ಮಂಗಳೂರು ತುಂಬಾ ಸುಂದರ ಪ್ರದೇಶಗಳಿಂದ ಕೂಡಿದೆ. ನಗರ ದೊಳಗೆ ಏರು ತಗ್ಗುಗಳಿದ್ದರೂ... ಈಗಲೂ ಭರದಿಂದ ನಗರೀಕರಣವಾಗುತ್ತಿರುವಾಗಲೂ...

ಕದ್ರಿ, ಮಂಜುನಾಥ ದೇವಾಲಯ, ಮಂಗಳೂರು



ಪ್ರದೇಶ ಸಸ್ಯ ಶ್ಯಾಮಲೆಯಾಗಿ ಇನ್ನೂ ಉಳಿದಿರುವುದು ಇಲ್ಲಿನ ಪ್ರಕೃತಿಯ ವಿಶೇಷತೆ—50 ವರ್ಷಗಳಷ್ಟು ಹಿಂದೆ ನಮ್ಮ ರಸ್ತೆಯ ಎರಡು ಪಕ್ಕಗಳಲ್ಲೂ ಸಾಕಷ್ಟು ಸಾಲು ಮರಗಳಿದ್ದುವು. ನಗರಕ್ಕೆ ವಿದ್ಯುತ್ ಸರಬರಾಜು ಆಗುವ ನೆವನದಲ್ಲಿ ಇದ್ದ ಅಪೂರ್ವ ಮರಮಟ್ಟುಗಳನ್ನು ಸಂಹಾರ ಮಾಡಿದ್ದರು. ಆದರೂ ಎತ್ತರದ ಸ್ಥಳದಲ್ಲಿ ನಿಂತು ನಮ್ಮ ನಗರವನ್ನೊಮ್ಮೆ ನೋಡಿದರೆ ಕಣ್ಣೆತ್ತುವ ತನಕ ಕಾಣುವುದು ತೆಂಗಿನಮರಗಳ ಹಿಂಡು. ಪಶ್ಚಿಮದಿಂದ ಬೀಸುವ ಗಾಳಿಗೆ ಅತ್ತೊಮ್ಮೆ ಇತ್ತೊಮ್ಮೆ ವಾಲುತ್ತಿರುವ ಮರಗಳ ಸಾಲು ಸಾಲು ಕಣ್ಮನಗಳನ್ನು ತಣಿಸುತ್ತವೆ. ನಗರವನ್ನು ಎಡಬಲಗಳಿಂದ ಬಳಸಿದೆ ನೇತ್ರಾವತಿ ಮತ್ತು ಗುರುಪುರ ನದಿಗಳು. ನದಿಗಳ ಹರವು ಭರವುಗಳನ್ನು ನೀವು ನಮ್ಮ ಮಳೆಗಾಲದಲ್ಲೊಮ್ಮೆ ಬಂದು ನೋಡಿ... ಹಿಂದೆ ನದಿಗಳಿಗೆ ಸಂಕಗಳಿಲ್ಲದಾಗ... ಮಂಗಳೂರಿನ ವ್ಯಾಪಾರ ವಹಿವಾಟುಗಳೆಲ್ಲಾ ದೋಣಿಯ ಮುಖಾಂತರದಿಂದಲೇ ಸಾಗುತ್ತಿತ್ತು.

ನಮಗೆ ಒಳ್ಳೆಯ ಮಳೆಗಾಲವಿದೆ. ಹಿತಮಿತ ಚಳಿಗಾಲವೂ ಇದೆ. ಕರಾವಳಿಯ ವಿಶಿಷ್ಟ ಹಣ್ಣುಹಂಪಲುಗಳಿಗೂ ಇಲ್ಲಿ ಬರಗಾಲವಿಲ್ಲ. ನಮ್ಮ ಮಕ್ಕಳುಮರಿಗಳಿಗೆ ನೋಡಿ ಕಲಿಯಲು, ಆನಂದಿಸಲು... ಚಿಲಿಪಿಲಿಗುಟ್ಟುತ್ತಿರುವ ಹಕ್ಕಿಗಳೂ ಇವೆ. ಸಾಹಿತಿಗಳಿಗೆ, ಕವಿಗಳಿಗೆ ಸ್ಫೂರ್ತಿಯನ್ನೀಯಲು ಪಡುಕಡಲು ಸಾಲದೇ... ಕವಿ ಕಡೆಂಗೋಡ್ಲು ಇವರ ಮಾತಿನಲ್ಲಿ ಹೇಳುವುದಾದರೆ... ಪಡುವಣ ಕಡಲಿನ... ತೆಂಗಿನ ಮಡಲಿನ... ಮರೆಯಲಿ ಮೆರೆವುದು ನಾಡೊಂದು... ಸೃಷ್ಟಿಯ ಮಾತೆಯ ಮೀಸಲು ಸೊಬಗಿನ... ಹೊದಿಕೆಯ ಹೊದ್ದಿದ ಬೀಡೊಂದು... ಇದು ಮಂಗಳೂರು!

ಹಾಗಂತ ಇತ್ತೀಚೆಗಿನ ದಿನಗಳಲ್ಲಿ ಮಂಗಳೂರು ಕಲುಷಿತಗೊಂಡಿದೆ. ಪರಿಸರ ಹಾಳಾಗುತ್ತಿದೆ. ಏರುತ್ತಿರುವ ಜನಸಂಖ್ಯೆ ನಗರೀಕರಣ... ಗಗನಚುಂಬಿಗಳ ಹಾವಳಿ... ನಗರದ ಚೆಲುವನ್ನು ಆರೋಗ್ಯವನ್ನು ಹಾಳು ಮಾಡುತ್ತಿದೆ.

ಹಳೆಯ ಕಾಲದಲ್ಲಿ ಮಂಗಳೂರಿನ ವೈಶಿಷ್ಟ್ಯತೆಯನ್ನು ಸಾರುವ ಎಷ್ಟು ಸುಂದರ ಮನೆಗಳಿದ್ದುವು... ಇಲ್ಲಿನ ಹಂಚಿನ ಕಾರ್ಖಾನೆ

**ಪಶ್ಚಿಮ ಸಮುದ್ರದ ಬಳಿ ಇರುವ ತುಳುನಾಡ ಸುಂದರ ನಗರ ಮಂಗಳೂರು—ರಮಣೀಯ ಸೂರ್ಯಾಸ್ತ, ಹಸಿರು, ಗುಡ್ಡ—ನದಿಗಳನ್ನು ಇನ್ನೂ ಉಳಿಸಿಕೊಂಡು ಬಂದಿರುವುದು ಸುದೈವ.**

ಗಳಲ್ಲಿ ತಯಾರಾಗುತ್ತಿದ್ದ ವಿಶಿಷ್ಟ ಮಾದರಿಯ ಕಂಭಗಳು... ಡಬ್ಬಲ್ ಹಂಚುಗಳ ಹೊದಿಕೆ... ಆಕರ್ಷಕ ಮುಖಮಂಟಪ... ಮನೆಯ ಹೊರ ಜಗಲಿಯಂಚಿಗೆ... ಕಲಾತ್ಮಕವಾದ ಕುಸುರಿ ಕೆಲಸದ ಅಂಚುಗಳು... ಮಾಡಿನ ಪಕ್ಕಾಸುಗಳಿಗೂ ಪುರಾತನ ವಾಸ್ತುಶಿಲ್ಪದ ಪ್ರಭಾವ. ಈಗಿನ ಜನರಿಗೆ ಆಧುನಿಕ ಥಳಕಿನ ಬೆಳಕಲ್ಲಿ ಪ್ರಾಚೀನತೆಯ ಚೆಲುವನ್ನು ಸವಿಯುವ ಸೌಂದರ್ಯಪ್ರಜ್ಞೆಯೂ ಇಲ್ಲವಾದದ್ದು ಮಂಗಳೂರಿನ ದುರ್ದೈವ. ನಮ್ಮ ಕದ್ರಿ ಗುಡ್ಡದ ತುದಿಯಲ್ಲಿ ಆಕಾಶವಾಣಿಯ ಹತ್ತಿರ ಪಶ್ಚಿಮಾಭಿಮುಖವಾಗಿ ಸಂಜೆಯ ಹೊತ್ತು ನಿಂತರೆ ಜನಸಾಮಾನ್ಯನೂ ಕವಿಯಾದಾನು...! ಓಹ್ ಎಷ್ಟು ರಮಣೀಯ ಸೂರ್ಯಾಸ್ತ... ಅರಬಿಸಮುದ್ರ... ಕೂಳೂರು ಸಂಕ... ಪಣಂಬೂರು ಗೊಬ್ಬರದ ಕಾರ್ಖಾನೆ... ಎತ್ತರದಲ್ಲಿ ಆಕಾಶವನ್ನು ಮುತ್ತಿಡುವ ನೀರಿನ ಟ್ಯಾಂಕಿ... ಮಧ್ಯೆ ಮಧ್ಯೆ ಕಣ್ಣೆತ್ತುವ ತನಕ ಹಸಿರೋ ಹಸಿರು... ನಿಂತು ನೋಡುವವನ ಹೃದಯ ಬಡಿತ... ಒಮ್ಮೆ ತಪ್ಪಿಹೋದೀತು. ಮೈಮರೆತೀರಿ ಜೋಕೆ! ಹತ್ತಿರದಲ್ಲಿ ವಸ್ತುಸಂಗ್ರಹಾಲಯವಿದೆ... ಜೋಗೇಶ್ವರ ಮಠವಿದೆ. ಮುಂಡಾನದ ಜಲಪಾತವಿದೆ. ಗೋಮುಖದಿಂದ ಗಂಗಾ, ಭಾಗೀರಥಿಯರು ಇಳಿಯುತ್ತಿದ್ದಾರೆ... ಕದ್ರಿ ಕಂಬಳ ನಡೆಯುವ ಗದ್ದೆಗಳಿವೆ... ಮಂಜುನಾಥನ ದೇಗುಲವಿದೆ... ದೇವಸ್ಥಾನವೂ ಆಧುನೀಕರಣಗೊಂಡಿದೆ. ಹಳೆಯದೇ ಚೆಂದವಿತ್ತು ಎನ್ನುತ್ತಿದ್ದೇವೆ ಹಳೆಯ ಜನ—ಏಕೆ

ಗೊತ್ತೇ... ಒಮ್ಮೆ ಕದ್ರಿ ಗದ್ದೆಗಳಲ್ಲಿ ಮೂರು ಬೆಳೆಯಾಗುತ್ತಿತ್ತು. ಬೆಳೆ ಕಟಾವಿನ ನಂತರ ಮಕ್ಕಳು ಕುಟ್ಟಿದೊಣ್ಣೆಯಾಡುತ್ತಿದ್ದರು. ಬೇಸಿಗೆಯಲ್ಲಿ ಕದ್ರಿ ಮಾವಿನಹಣ್ಣು ಬೇಕಾದಷ್ಟು ತಿನ್ನಲು ಸಿಗುತ್ತಿತ್ತು. ಗುಡ್ಡದ ಮೇಲೆ ಕೊಡಗಸನ ಹೂಗಳು ಸಿಗುತ್ತಿತ್ತು. ಇದು ಔಷಧಿಯೂ ಹೌದು. ಈ ಹೂಗಳಿಂದ ರುಚಿಕಟ್ಟಾದ ಬಾಳಕಗಳನ್ನು ಮಾಡುತ್ತಿದ್ದರು. ಎಲ್ಲಿದೆ ಈಗ ಈ ಹಳೆಯ ಕತೆಗಳು—ಕದ್ರಿ ಗುಡ್ಡದಲ್ಲೂ ಬಹುಮಾಳಿಗೆಗಳ ಕಟ್ಟಡಗಳು ತಲೆ ಎತ್ತಿವೆ!

ನಮ್ಮ ಬದುಕು ಜಟಕಾ ಬಂಡಿಯಲ್ಲಿ ಸಾಗುತ್ತಿದ್ದ ದಿನಗಳನ್ನು ನೆನೆಯದೆ ಇದ್ದರೆ ಆದೀತೇ—ರಾಜಮಹಾರಾಜರ ರಥಗಳನ್ನು ನೆನಪಿಗೆ ತರುವಷ್ಟು ಅಂದದ ಜಟಕಾ ಬಂಡಿಗಳು ಮಂಗಳೂರಿನಲ್ಲಿತ್ತು. ಎತ್ತರದ ಆಸನಗಳು... ಬಾಗಿಲು, ಕಿಟಿಕಿಗಳು... ಒಳ್ಳೆಯ ದಷ್ಟಪುಷ್ಟ ಕುದುರೆಗಳು... ಕುದುರೆಗಳಿಗೆ ಬೇಕಾಗುವ ಹುಲ್ಲು... ನಮ್ಮಲ್ಲಿನ ಕೆರೆಗಳ ಸುತ್ತ ಬೆಳೆಯುತ್ತಿತ್ತಲ್ಲ. ಮುಸಾಫ್ರಿ ಕೆರೆ... ಎಮ್ಮೆ ಕೆರೆ... ಗಜ್ಜರ ಕೆರೆ... ಹೆಚ್ಚಿನ ಕೆರೆಗಳನ್ನು ಈಗ ಮುಚ್ಚಲಾಗಿದೆ!

ಜಟಕಾ ಬಂಡಿಗಳಲ್ಲಿ ಕುಳಿತು ಕೋರ್ಟು ಕಚೇರಿಗಳಿಗೆ ಹೋಗುವ ವಕೀಲರುಗಳು. ನಮ್ಮ ನೆನಪಿನಂಗಳದಲ್ಲಿ ಇರುವ ಪಳೆಯುಳಿಕೆಗಳು. ಜರಿ ಮುಂಡಾಸು. ಕಪ್ಪು ಕೋಟು... ಕಚ್ಚೆ ಪಂಚೆ... ಗತ್ತಿನ ನೋಟ... ಎಡಬಲಗಳಲ್ಲಿ ಕಕ್ಷಿಗಾರರು...

ನಾವು ಪರಮತ ಸಹಿಷ್ಣುಗಳಾಗಿದ್ದೆವು. ಮಂಗಳಾದೇವಿ, ಶರವು ಮಹಾಗಣಪತಿ... ಮುನ್ನೂರು ವರ್ಷಗಳಷ್ಟು ಹಳೆಯ ಮಿಲಾಗ್ರಿಸ್ ಇಗರ್ಜಿ. ವಾಸ್ತುಶಿಲ್ಪದ ಸೌಂದರ್ಯವನ್ನು ಉಳಿಸಿಕೊಂಡ ಸಂತ ಎಲೋಸಿಯಸ್ ಚಾಪೆಲ್... ಬಾಸೆಲ್ ಮಿಷನ್ ಚರ್ಚ್... ಜುಮ್ಮಾ ಮಸೀದಿ... ಕುದ್ರೋಳಿ ಜೋಡು ಪಳ್ಳಿ... ಸುಲ್ತಾನ ಬತ್ತೇರಿ... ಈದ್ಗಾ ಪ್ರಾರ್ಥನಾ ಮಂದಿರ... ಆಯಾಮ ಧರ್ಮದವರಿಗೆ ಅವರವರ ಪವಿತ್ರ ಸ್ಥಳ... ಅಣ್ಣ ತಮ್ಮಂದಿರಂತಿದ್ದ ಸಹಬಾಳ್ವೆ... ಮಂಗಳೂರಿನಲ್ಲಿ ಹಿಂದೊಮ್ಮೆ ಇತ್ತು...

ಮಂಗಳೂರನ್ನು ತುಳುವಿನಲ್ಲಿ ಕುಡ್ಲ ಎಂದರೆ ಸುತ್ತಮುತ್ತಲಿನ ಹಳ್ಳಿಯ ಜನ 'ಕೊಡೆಯಾಲ' ವೆನ್ನುತ್ತಾರೆ. ಹೌದು ,ಕೊಡಿಯಾಲ್‌ಬೈಲ್ ಮಂಗಳೂರಿಗೊಂದು ಹಸಿರು ತಾಣವಾಗಿತ್ತು. ಎರಡು, ಮೂರು ಬೆಳೆ ಬೆಳೆಯುವ ಗದ್ದೆಗಳಿದ್ದುವು! ಈಜು ಕಲಿಯಬಹುದಾದಷ್ಟು ನೀರು ಕೊಡಿಯಾಲ್‌ಬೈಲ್ ತೋಟದಲ್ಲಿ ಇದ್ದ ಕಾಲವಿತ್ತು. ಈ ಸಂಗತಿಗಳು ಮಂಗಳೂರಿನ

ಸಮುದ್ರ ಸಂಪತ್ತು





ಸೇಂಟ್ ಅಲೋಶಿಯಸ್ ಚರ್ಚ್

ಚರಿತ್ರೆಯಲ್ಲಿ ಈಗ ಸೇರಿಹೋಗಿದೆ. ವಿದ್ಯಾವಂತರೇ ಈ ಹಸಿರನ್ನು ನಾಶ ಮಾಡಿದ್ದಾರೆ!

ಮಂಗಳೂರಿನ ಜನರ ಆರೋಗ್ಯವೇ ನನ್ನ ಭಾಗ್ಯ ಎನ್ನುತ್ತಿದ್ದರು ಆಯುರ್ವೇದ ವೈದ್ಯ ಶ್ರೀ ಎಂ. ವಿ. ಶಾಸ್ತ್ರಿಗಳು. ಅವರು ನಮ್ಮ ಕ್ರಿಕೆಟಿಗ ರವಿಶಾಸ್ತ್ರಿಯ ಅಜ್ಜ. ಶಾಸ್ತ್ರಿಗಳ ಕಸ್ತೂರಿ ಮಿಶ್ರಣ ನವಜೀವಾತುಗಳಿಲ್ಲದೆ ಮಂಗಳೂರಿನ ಹೆಂಗಳೆಯರ ಬಾಣಂತನ ಪೂರ್ತಿಯಾಗುತ್ತಿರಲಿಲ್ಲ. ಶಿವರಾಯರ ಆಸ್ಪತ್ರೆ ಎಂದೇ ಹೆಸರಾದ ಒಂದು ಖಾಸಗಿ ಚಿಕಿತ್ಸಾಲಯ ನಮ್ಮ ಗತಕಾಲದ ವೈಭವಕ್ಕೊಂದು ಕಿರೀಟಪ್ರಾಯದ ವಿಷಯ. ಶ್ರೀ ಮುಂಡ್ಕೂರು ಶಿವರಾವ್ ಇಲ್ಲಿನ ಡಾಕ್ಟರ್. ಇವರುಗಳಂಥಾ ತಜ್ಞ ವೈದ್ಯರು ಮಾನವೀಯತೆಯ ಸಾಕಾರ ಮೂರ್ತಿಗಳು. ಮಂಗಳೂರಿನ ಚರಿತ್ರೆಯಲ್ಲಿ ಮತ್ತೊಮ್ಮೆ ಬರಲಾರರು.

ದಿನಪತ್ರಿಕೆ 'ನವಭಾರತ', ವಾರಪತ್ರಿಕೆ 'ರಾಷ್ಟ್ರಬಂಧು' ಕಣ್ಮರೆಯಾದದ್ದು, ಮಂಗಳೂರಿನ ಬಡ ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡಿದ ಬೀಡಿ ಉದ್ಯಮ... ಗೇರುಬೀಜ... ಕಾಫಿ, ಹಂಚಿನ ಕಾರ್ಖಾನೆಗಳು... ಹಿಂದಿನ ಅಪ್ಪಣ್ಣನ ಕಟ್ಟೆ ಹಂಪನ್‌ಕಟ್ಟೆಯಾಗಿ ಬದಲಾದದ್ದು, ಮಂಗಳೂರು ಮಲ್ಲಿಗೆಯ ಕಂಪು ದೇಶ ವಿದೇಶಿಗರ ಮನವನ್ನು ಗೆದ್ದದ್ದು... ಇಲ್ಲಿನ ವಿಶಿಷ್ಟ ಕನ್ನಡ... ತುಳು... ಕೊಂಕಣಿಯ ಆಡುಮಾತುಗಳ ಸೊಗಸು... ಸಂಗೀತ... ನಾಟಕ... ಯಕ್ಷಗಾನ... ಬಯಲಾಟ... ಕೋಳಿಕಟ್ಟ... ಕಂಬಳ... ಜಾತ್ರೆ... ಭೂತದ ಕೋಲ... ಇವುಗಳೆಲ್ಲದರ ಚೆಲುವು... ಉಳಿವು... 'ಠೀವಿ'ಯ ಹೆಸರಲ್ಲಿ ನಶಿಸಿ ಹೋಗಲಾರದು ಎಂದು ಆಶಿಸಲೇ? ●

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ

# ಭೂತಾರಾಧನೆ

● ಅಮ್ಮೆಂಬಳ ಅನಂತಯ್ಯ ನಾವಡ

ನಮ್ಮ ಜಿಲ್ಲೆಯಲ್ಲಿ ದೇವಸ್ಥಾನಗಳಿದ್ದಂತೆ ಅನೇಕ ಭೂತಸ್ಥಾನಗಳೂ ಇವೆ. ಕೆಲವು ದೇವಸ್ಥಾನಗಳ ಬಳಿಯಲ್ಲಿಯೇ ಭೂತಸ್ಥಾನಗಳೂ ಇರುತ್ತವೆ. ಆ ಭೂತವು ಆಯಾ ದೇವರ ಸೇವಕನಂತೆ ಇರುತ್ತದೆ. ಉದಾಹರಣೆಗೆ, ಧರ್ಮಸ್ಥಳದಲ್ಲಿ ಅಣ್ಣಪ್ಪ ದೈವವು ಆ ರೀತಿಯಲ್ಲಿದೆ ಎಂದು ಹೇಳಬಹುದು. ಹಾಗೆಯೇ ಅಮ್ಮೆಂಬಳದಲ್ಲಿ ಗ್ರಹಭೂತವು ಇದೆ. ಇದಕ್ಕೆ ತುಳುವಿನಲ್ಲಿ 'ಗಿರಾವು' ಎಂದು ಹೇಳುತ್ತಾರೆ. ಹಿಂದೊಮ್ಮೆ ದೇವಸ್ಥಾನದೊಳಗೆ ಕಳ್ಳರು ನುಗ್ಗಿದಾಗ ಆ ದೈವವು ಘಂಟೆಯನ್ನು ಬಾರಿಸಿ ಊರಿನ ಜನರನ್ನು ದೇವಸ್ಥಾನಕ್ಕೆ ಬರುವಂತೆ ಮಾಡಿದೆಯಂತೆ. ಮೂರ್ಛೆರೋಗವಿದ್ದವರು ಈ ಗ್ರಹಭೂತದ ಪ್ರಸಾದದಿಂದ ಗುಣ ಹೊಂದುತ್ತಾರೆಂದು ನಂಬಿಕೆಯಿದೆ. ಈಗಲೂ ಅನೇಕ ಜನರು ಈ ರೋಗದ ಶಾಂತಿಗಾಗಿ ಅಲ್ಲಿಗೆ ಬರುತ್ತಾ ಇದ್ದಾರೆಂದು ತಿಳಿದು ಬರುತ್ತದೆ. ಹಾಗೆಯೇ ಅಣ್ಣಪ್ಪ ದೈವವು ಶ್ರೀ ಮಂಜುನಾಥನ ಅಚ್ಚುಮೆಚ್ಚಿನ ಬಂಟನಾಗಿರುತ್ತಾನೆಂದು ಹೇಳುತ್ತಾರೆ. ಲಕ್ಷಾಂತರ ಭಕ್ತರು ಬರುವ ಪುಣ್ಯ



ಸ್ಥಳವಾದ ಧರ್ಮಸ್ಥಳದಿಂದ ಯಾವ ವಸ್ತುವನ್ನೂ ಕದ್ದುಕೊಂಡು ಹೋಗಬಾರದೆಂದೂ ಕದ್ದವರು ಏನಾದರೊಂದು ಪ್ರಾಣಾಂತಿಕ ಖಾಯಿಲೆಗೆ ಒಳಗಾಗುವರೆಂದೂ ಆಮೇಲೆ ಅವರು ಧರ್ಮಸ್ಥಳಕ್ಕೆ ಬಂದು ಪ್ರಾಯಶ್ಚಿತ್ತವನ್ನು ಮಾಡಿದರೆ ಮಾತ್ರ ಸೌಖ್ಯವಾಗುವುದೆಂದೂ ಪ್ರಸಿದ್ಧಿಯಿದೆ. ಅನೇಕ ಕಡೆಗಳಲ್ಲಿ ಭೂತ ಸ್ಥಾನಗಳು ದೇವಸ್ಥಾನದಿಂದ ಸ್ವಲ್ಪ ದೂರದಲ್ಲಿರುತ್ತವೆ.

ದೈವಗಳು ಅನಾದಿಕಾಲದಿಂದ ಆಯಾಯ ಊರಿನಲ್ಲಿ ನೆಲೆಯಾಗಿರುತ್ತವೆ. ಕೆಲವು ಬೇರೆ ಊರುಗಳಿಂದ ವಲಸೆಯಾಗಿ ಬಂದ ಜನರೊಡನೆ ಬಂದವುಗಳಾಗಿವೆ. ಇನ್ನೂ ಕೆಲವು ದೊಡ್ಡ ಮಂತ್ರವಾದಿಗಳು ಮರಣಹೊಂದಿದ ನಂತರ ದೈವಗಳ ರೂಪದಲ್ಲಿರುತ್ತಾರೆ. ಅವರನ್ನು ನಂಬಿದವರು ಮುಂದೆಯೂ ನಂಬುತ್ತಾ ಬರುವರೆಂದು ಹೇಳಿಕೆಯಿದೆ.

ಅನೇಕ ದೈವಗಳು ತುಂಬಾ ಪ್ರಸಿದ್ಧವೆನಿಸಿವೆ. ಕಲ್ಲುರ್ಟಿ, ಕಲ್ಕುಡ, ಗುಳಿಗ, ಪಂಜುರ್ಲಿ, ಧೂಮಾವತಿ (ಜುಮಾದಿ) ಭಂಟ, ಉಳ್ಳಾಲ್ತಿ, ಮಹಿಷಂತಾಯ, ಜಾರಂದಾಯ, ಮಡಿಕತ್ತಾಯ ಮುಡುಪಿನಾರ್ ಕುರ್ಯಾಡ್ತಾರ್ ಮೊದಲಾದ ಭೂತಗಳು ಆಯಾಯ ಊರವರಿಂದ ಸೇವೆಯನ್ನು ಪಡೆದುಕೊಳ್ಳುತ್ತವೆ. ಎಲ್ಲಾ ಹಬ್ಬಗಳ ಸಂದರ್ಭದಲ್ಲಿ ಅವುಗಳಿಗೆ ಅರಳು, ಬಾಳೆಹಣ್ಣು ಅವಲಕ್ಕಿ ಬೆಲ್ಲ ಸೀಯಾಳ ತೆಂಗಿನಕಾಯಿಗಳನ್ನು ಸಮರ್ಪಿಸಿ ಪೂಜೆ ಮಾಡುತ್ತಾರೆ. ವರ್ಷಕ್ಕೊಮ್ಮೆ ನೇಮೋತ್ಸವಗಳನ್ನು ಏರ್ಪಡಿಸುತ್ತಾರೆ. ಸಾವಿರಾರು ಜನರು ಬಂದು ಹರಕೆ ಕಾಣಿಕೆಗಳನ್ನು ಒಪ್ಪಿಸುತ್ತಾರೆ. ಕೆಲವು ಭೂತಗಳಿಗೆ ಕೋಳಿಗಳನ್ನು ಬಲಿಕೊಡುತ್ತಾರೆ. ಎಲ್ಲಾ ಭೂತಗಳ ಉತ್ಸವದ ವೇಷಗಳು ಸಾಮಾನ್ಯವಾಗಿ ಒಂದೇ ರೀತಿಯಾಗಿದ್ದರೂ ಸ್ವಲ್ಪ ಸ್ವಲ್ಪ ವ್ಯತ್ಯಾಸ ಅವುಗಳಲ್ಲಿ ಕಂಡು ಬರುತ್ತವೆ. ಮುಖಕ್ಕೆ ಹಳದಿ ಬಣ್ಣ, ಕೆಂಪು ಅಂಗಿ ಪಾಯಿಜಾಮಗಳು, ಕಾಲಿಗೆ ಗಗ್ಗರ ಅಲಂಕರಿಸಿದ ಹಾಳೆಗಳ ಅಣಿ, ಕುತ್ತಿಗೆ ಕೈಗಳಿಗೆ ಬೆಳ್ಳಿಯ ಆಭರಣ, ತಲೆಗೆ ಬೆಳ್ಳಿಯ ಕಿರೀಟ, ಕೈಗಳಲ್ಲಿ ಘಂಟಾಮಣಿ, ಕಡ್ತಲೆ (ಉದ್ದವಾದ ಗಟ್ಟಿಯಾದ ತಳವಾರು) ಇವುಗಳಿಂದ ಭೂತದ ಪಾತ್ರಿಯು ಸಿದ್ಧನಾಗಿರುವಾಗ ಗುತ್ತಿನವರು ತಂತ್ರಿಗಳು ಪ್ರಾರ್ಥನೆ ಮಾಡಿ ಜನರೆಲ್ಲರೂ ಸಿಂಗಾರದ ತುಂಡುಗಳು ಮತ್ತು ಕೇಪಳ ಹೂಗಳನ್ನು ಬಿಸಾಡಿದಾಗ ವಾಲಗ, ಡೋಲು, ಬೇಂಡ್, ಕೊಂಬುಗಳು ಜೋರಾಗಿ ಬಾರಿಸಲ್ಪಡುವಾಗ ಭೂತದ ಕುಣಿತವು ಪ್ರಾರಂಭವಾಗುತ್ತದೆ. ಅರ್ಧ ಘಂಟೆಯವರೆಗೆ ನಾನಾ ರೀತಿಯಲ್ಲಿ ಕುಣಿಯುತ್ತಾ ಅತ್ತ ಇತ್ತ ಓಡುತ್ತಾ (ವಾಲಸರಿ) ಇರುವ ಆ ದೃಶ್ಯವು ಆಕರ್ಷಕವಾಗಿರುತ್ತದೆ. ಕೊನೆಗೆ ಹರಕೆ ಕಾಣಿಕೆ ಕೊಟ್ಟವರಿಗೆ ಪ್ರಸಾದವನ್ನು ಕೊಡುವುದಲ್ಲದೆ ಕುಟುಂಬದ ಜಗಳಗಳನ್ನು ತೀರಿಸುವ ಕಾರ್ಯಕ್ರಮವೂ ಇರುತ್ತದೆ. ಕೆಲವು ಕಡೆಗಳಲ್ಲಿ ಮೂರು ದಿವಸದವರೆಗೆ ಈ ಉತ್ಸವವು ಜರಗುತ್ತದೆ. ಈ ಸಂದರ್ಭದಲ್ಲಿ ಕೋಳಿಕಟ್ಟವನ್ನು ಮಾಡುತ್ತಾರೆ.

ಮಂತ್ರವಾದಿಗಳು ಮತ್ತು ಜ್ಯೋತಿಷಿಗಳು ಕೆಲವು ಭೂತಗಳನ್ನು ಸಿದ್ಧಿಮಾಡಿಕೊಂಡು ತಮ್ಮ ಕಾರ್ಯಕ್ರಮಗಳನ್ನು ಸುಲಭ ಸಾಧ್ಯವನ್ನಾಗಿ ಮಾಡಿಕೊಳ್ಳುತ್ತಾರೆ. ಗುಳಿಗ, ಕಲ್ಲುರ್ಟಿ ಭೂತಗಳನ್ನು ಅನೇಕರು ವಶಮಾಡಿಕೊಂಡು ಮಂತ್ರವಾದಕ್ಕೆ-ಭವಿಷ್ಯ ಹೇಳುವುದಕ್ಕೆ ಉಪಯೋಗಿಸಿಕೊಳ್ಳುತ್ತಾರೆ. ಅವುಗಳಿಗೆ ಆಗಾಗ ಬೇರೆ ಬೇರೆ ರೀತಿಯಲ್ಲಿ ಪೂಜೆಮಾಡಿ ತಮ್ಮ ಕಾಯಕಗಳ ಮೂಲಕ ಯಥೇಷ್ಟ ಹಣ ಸಂಪಾದನೆ ಮಾಡುತ್ತಾರೆ. ಅವರು ನಂಬಿದ ಜನರ ಕಷ್ಟಗಳನ್ನು ಪರಿಹರಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆ. ಕೆಲವು ಕುಟುಂಬದ ಜನರು ಒಟ್ಟು ಸೇರಿ ತಾವು ನಂಬಿದ ದೈವಗಳಿಗೆ ಧರ್ಮನೇಮ ಎಂಬ ಸೇವೆಯನ್ನು ಮಾಡಿಸುತ್ತಾರೆ. ಆದಿನ ನೇಮೋತ್ಸವ ಮಾಡಿಸುವುದಲ್ಲದೆ ಸಾವಿರಾರು ಜನರಿಗೆ ಅನ್ನ ಸಂತರ್ಪಣೆ ಮಾಡಿಸುತ್ತಾರೆ. ಹೀಗೆ ದೈವಗಳು ನಂಬಿದವರಿಗೆ ಇಂಬುಕೊಡುತ್ತವೆ ಎಂದು ಹೇಳಬಹುದು. ತಮ್ಮನ್ನು ನಂಬದವರಿಗೆ ಉಪದ್ರವವನ್ನೂ ನಂಬಿದವರಿಗೆ ಉಪಕಾರಗಳನ್ನೂ ಭೂತಗಳು ಮಾಡುತ್ತವೆ ಎಂಬ ಮಾತು ಪ್ರಚಲಿತವಾಗಿದೆ.

## ಚಿತ್ರಕವನ ಸ್ಪರ್ಧೆ: 105



ಫೋಟೋ: ವಿ. ಗೋಪಾಲ್, ಬೆಂಗಳೂರು

ಕವನಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 4-4-1992

## ಚಿತ್ರಕವನ ಸ್ಪರ್ಧೆ: 104

# — ಫಲಿತಾಂಶ —

ಬಹುಮಾನಿತ ಕವನ:

ಜಗದಗಲ ಏನಾದರೇನಂತೆ? ● ಶ್ರೀಮತಿ ಮುರಳಿ, ಮೇಲುಕೊಪ್ಪ

ಮೆಚ್ಚುಗೆ ಪಡೆದ ಕವನಗಳು:

ಪ್ರತಿಕ್ರಿಯೆ ● ಸಿ. ಎಚ್. ವರದರಾಜ, ಕಾಸರಗೋಡು

ಮೂಕ ವೇದನೆ ● ಯಶು ಪಂಜ

ನಡೆ ಮುಂದೆ ನಡೆ ಮುಂದೆ ● ನಡಿಬೈಲು ಉದಯಶಂಕರ

ಅರಣ್ಯ ರೋದನ ● ಸುಜಾತಾ ಲಕ್ಮನೆ, ಸಾಗರ

# ಹೊಣೆ

● ಕೆ. ಟಿ. ಗಟ್ಟಿ

'ವನಶ್ರೀ' ಉಜಿರೆ–574 240. ದ.ಕ.

**ಚಿ**ತ್ರಾಪುರ ನಿಲುದಾಣದಲ್ಲಿ ಬಸ್ಸು ಬಂದು ನಿಂತಾಗ ನಿಲುದಾಣಕ್ಕೆ ಹತ್ತಿರದಲ್ಲೇ ಸರಕಾರಿ ತಾಲೂಕು ಕೇಂದ್ರ ಆಸ್ಪತ್ರೆ ಎಂಬ ಬೋರ್ಡು ಕಾಣಿಸಿತು. ಅದು ಅವನಿಗೆ ಪರಿಚಿತವಾದ ಊರಲ್ಲ. ಆ ಊರಲ್ಲಿ ಅವನು ಎಂದೂ ಓಡಾಡಿರಲಿಲ್ಲ. ಅವನು ಹೋಗುತ್ತಿದ್ದುದು ಅರೇಹಳ್ಳಿ ಎಂಬ ಊರಿಗೆ. ಅದಿನ್ನೂ ಹದಿನೈದು ಕಿಲೊಮೀಟರ್ ದೂರ. ಅವನು ಹೋಗುತ್ತಿರುವುದು ತನ್ನ ಮಗಳಿಗೆ ಬಂದಿರುವ ಒಂದು ಸಂಬಂಧದ ವಿಚಾರವಾಗಿ ಗಂಡಿನ ಕಡೆಯವರೊಡನೆ ಮಾತಾಡಲು. ಆದರೆ ಇಂಥ ಪರಿಸ್ಥಿತಿಯಲ್ಲಿ ಅಲ್ಲಿ ಹೋಗಿ ಮಾಡುವುದೇನು? ಆದಷ್ಟು ಬೇಗನೆ ಡಾಕ್ಟರನ್ನು ಕಾಣಬೇಕು. "ಇಳೀರಿ ಸ್ವಾಮಿ, ಕೂಡಲೇ ಡಾಕ್ಟರನ್ನು ಕಾಣೋದು ಒಳ್ಳೇದು, ನೋಡಿ, ಅದೇ ಆಸ್ಪತ್ರೆ." ಸಹಪ್ರಯಾಣಿಕ ಹೇಳಿದ.

ಮಧ್ಯಾಹ್ನ ಊಟದ ಹೊತ್ತಿಗೆ ಮಳಗುತ್ತಿ ಎಂಬ ಊರಲ್ಲಿ ಬಸ್ಸು ನಿಂತಿತ್ತು. ಡಾಕ್ಟರ್ ನರಹರಿ ಕುಪ್ಪಿನ ಊಟ ಮಾಡಲು ಬಸ್ಸು ನಿಲುದಾಣದ ಹೋಟೆಲಿಗೆ ಹೋದ. ಅವನ ಸಹಪ್ರಯಾಣಿಕನಾದ ಸುಮಾರು ಅರುವತ್ತು ವರ್ಷ ವಯಸ್ಸಿನ ಹಳ್ಳಿಯ ಮನುಷ್ಯ ಆಗಲೇ ಬಂದು ಕುಳಿತು ಊಟ ಆರಂಭಿಸಿಬಿಟ್ಟಿದ್ದ. "ಎಲ್ಲಿಗೆ ಹೋಗ್ತಿದೀರಿ?" ಎಂದು ಆತ ಕೇಳಿದ. ಈತ ಬಸ್ಸಿನಲ್ಲಿ ಎರಡುಗಂಟೆ ಹೊತ್ತು ಪಕ್ಕದ ಆಸನದಲ್ಲಿ ಕುಳಿತಿದ್ದರೂ ಸುಮ್ಮನಿದ್ದ. ಈಗ ಮಾತು ಆರಂಭಿಸಿದನಲ್ಲಾ ಎಂದುಕೊಂಡು ಮನಸ್ಸಿಲ್ಲದ ಮನಸ್ಸಿನಿಂದ "ಅರೇಹಳ್ಳಿಗೆ" ಎಂದ. "ಯಾಕೆ?" ಆತ ಕೇಳಿದ. "ಸ್ವಲ್ಪ ಕೆಲಸ ಇದೆ"–ಡಾಕ್ಟರ್ ಕುಪ್ಪಿನ ಇನ್ನು ಪ್ರಶ್ನೆ ಬೇಡ ಎಂಬಂತೆ ಗಂಭೀರವಾಗಿ ನುಡಿದ. ಆದರೆ ಆತ ಡಾಕ್ಟರ್ ಕುಪ್ಪಿನನ ಮುಖಭಾವವನ್ನೇನೂ ಗಮನಿಸದೆ ಹಪ್ಪಳದ ನಡುವಿಗೆ ಕುಕ್ಕಿ ಬರಕ್ಕೆಂದು ಮುರಿದು "ಏನು ಮಾಡುತ್ತಿದ್ದೀರಿ?" ಎಂದು ಕೇಳಿದ. ಅಂಟಿತಲ್ಲಾ ತನಗೀ ಪ್ರಶ್ನಾ ಶನಿ ಎಂದುಕೊಂಡ ಡಾಕ್ಟರ್ ಕುಪ್ಪಿನ, ತಾನು ಮುಂಡಗೋಡು ತಾಲೂಕಿನ ಮಾರನಹಳ್ಳಿ ಎಂಬ ಊರಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಡಾಕ್ಟರ್ ಎಂದು ಹೇಳಿದರೆ ಬಸ್ಸಿನಲ್ಲಿ ಯಾಕೆ ಹೋಗ್ತಿದ್ದೀರಿ, ಕಾರಿಲ್ಲವೆ ಎಂದು ಕೇಳಬಹುದೇನೊ ಎಂದು ಶಂಕಿಸಿ ಸುಳ್ಳೇ ಒಳ್ಳೆಯದು ಎಂದು ನಿರ್ಧರಿಸಿ ಚುಟುಕಾಗಿ "ಮೇಸ್ಟ್ರು" ಎಂದ. "ಎಲ್ಲಿ?" ಆತ ಕೇಳಿದ. "ಮುಂಡಗೋಡಿನ ಪ್ರೈಮರಿ ಸ್ಕೂಲಿನಲ್ಲಿ" ಕುಪ್ಪಿನನೆಂದ.

ಮನೆ, ಆಸ್ತಿ ಪಾಸ್ತಿ, ಮಕ್ಕಳು ಮರಿ ಮುಂತಾದುವುಗಳ ಬಗ್ಗೆ ಪ್ರಶ್ನೆಗಳು ಆರಂಭವಾಗುವುದೇನೊ ಎಂದು ಚಿಂತಿಸಿದ ಡಾಕ್ಟರ್ ಕುಪ್ಪಿನ. ಅಂಥ ಪ್ರಶ್ನೆಗಳು ಆರಂಭವಾದರೆ 'ದಯಮಾಡಿ ಸುಮ್ಮನೆ ಇರಲು ಬಿಡಿ' ಎಂದು ಹೇಳುವುದೇ ಒಳ್ಳೆಯದೆನಿಸಿತು. ಆದರೆ ಆತ ಮುಂದಕ್ಕೆ ಪ್ರಶ್ನೆಗಳನ್ನು ಕೇಳಲಿಲ್ಲ. ಮೇಷ್ಟ್ರು ಅಂದ ಬಳಿಕ

ಜನ ಹೆಚ್ಚು ಪ್ರಶ್ನೆಗಳನ್ನು ಕೇಳುವುದಿಲ್ಲವೇನೊ ಅಂದುಕೊಂಡ. ಇನ್ನು ಮುಂದೆ ಪ್ರಶ್ನೆಗಳನ್ನು ಹಾಕಿ ಕಾಡುವ ಸಹಪ್ರಯಾಣಿಕರಿಗೆ ಇದೇ ಉತ್ತರವನ್ನು ನೀಡುವುದೆಂದುಕೊಂಡ.

ಊಟಮುಗಿಸಿ ಬಸ್ಸು ಹತ್ತಿ ಕುಳಿತಾಗಲೇ ಡಾಕ್ಟರ್ ಕುಪ್ಪಿನನಿಗೆ ಒಂಥರಾ ಗಂಟಲು ಕೆರೆತ ಆರಂಭವಾಯಿತು. ಕೆಲವೇ ನಿಮಿಷಗಳಲ್ಲಿ ಕೆರೆತ ನೋವಾಗಿ ಪರಿವರ್ತನೆಗೊಂಡು ಉಲ್ಬಣ ಗೊಳ್ಳುತ್ತಾ ಹೋಯಿತು. ಅಸಹನೀಯವಾದ ನೋವು. ಉಸಿರಾಡಲಿಕ್ಕೇ ದುಸ್ತರವೆನಿಸುವ ಪರಿಸ್ಥಿತಿ. ಅವನು ಏನೋ ಯಾತನೆಗೊಳಗಾಗಿ ದ್ದಾನೆ ಎಂಬುದನ್ನು ಗಮನಿಸಿದ ಸಹಪ್ರಯಾಣಿಕ ಅವನ ಮುಖನೋಡಿದ. ಗಂಟಲು ಕೆಂಪಗೆ ಊದಿಕೊಂಡಿದೆ. "ಸ್ವಾಮಿ, ಏನಾಗ್ತಿದೆ ನಿಮಗೆ?" ಸಹಪ್ರಯಾಣಿಕನ ದನಿಯಲ್ಲಿ ಬಹಳ ಆತಂಕವಿತ್ತು.

"ಗಂಟಲಲ್ಲಿ ಏನೋ ಸ್ವಲ್ಪ ನೋವು."

"ಮೊದಲೇ ಇತ್ತೆ, ಈಗ ಶುರುವಾಯ್ತೆ?"

"ಊಟ ಮಾಡಿದ ಕೂಡಲೇ ಶುರುವಾಯ್ತು. ಮೊದಲು ಇರಲಿಲ್ಲ."

ಸ್ವಲ್ಪ ನೋವಲ್ಲ, ಅಸಾಧ್ಯ ನೋವು. ಮಾತಾಡಲು ಕೂಡಾ ಆಗುತ್ತಿಲ್ಲ. ಧ್ವನಿ ಬಹಳ ಬಸಲಾಗಿದೆ. ಯಾರದೋ ದನಿ ಎಂಬಂತಿದೆ. ನೋವು ನಾಲಿಗೆಗೆ ಕೂಡ ಬರುತ್ತಿದೆ.

"ನಿಮ್ಮ ಗಂಟಲು ತುಂಬಾ ದಪ್ಪಗಾಗಿದೆ. ಎಲ್ಲಾ ಕೆಂಪಗಾಗಿ ಬಿಟ್ಟಿದೆ. ಸ್ವಾಮಿ, ನೀವು ಆದಷ್ಟು ಬೇಗನೆ ಡಾಕ್ಟರಲ್ಲಿಗೆ ಹೋಗಬೇಕು. ಅರೇಹಳ್ಳಿಯಲ್ಲಿ ಸರಿಯಾದ ಡಾಕ್ಟರಿಲ್ಲ. ನೀವು ಚಿತ್ರಾಪುರದಲ್ಲಿ ಇಳಿದ್ಬಿಡಿ. ಬಸ್‌ಸ್ಟ್ಯಾಂಡಿಗೆ ಹತ್ತಿರವೇ ದೊಡ್ಡ ಆಸ್ಪತ್ರೆಯಿದೆ."

"ಚಿತ್ರಾಪುರಕ್ಕೆ ಎಷ್ಟು ದೂರವಿದೆ" ಮುಳುಗು ತ್ತಿರುವವನಂತೆ ಕೇಳಿದ ಡಾಕ್ಟರ್ ಕುಪ್ಪಿನ.

"ಹೆಚ್ಚಿಲ್ಲ. ಇನ್ನು ಹತ್ತೇ ನಿಮಿಷದ ದಾರಿ." ಸಹಪ್ರಯಾಣಿಕನೆಂದ.

ಹತ್ತು ನಿಮಿಷ ಹತ್ತು ಗಂಟೆಯಂತೆ ತೋರಿತ್ತು ಡಾಕ್ಟರ್ ಕುಪ್ಪಿನನಿಗೆ.

ವಿಸ್ತಾರವಾದ ಅಂಗಣದಂತೆ ಕಾಣುವ ಆಸ್ಪತ್ರೆಯ ಹಜಾರದಲ್ಲಿ ಭಾರೀ ಜನ ಸಮ್ಮರ್ದ ವಿತ್ತು. ಆ ಕಡೆ ಈ ಕಡೆ ಕೆಲವು ಕಿಂಡಿಗಳು. ಕಿಂಡಿಗಳ ಮುಂದೆ ಜನರ ಸಾಲು.

ನೋಂದಣಿ ಎಂದು ಬರೆದ ಕಿಂಡಿಯ ಮುಂದಿದ್ದ ಸಾಲನ್ನು ಸೇರಿಕೊಂಡ. ಸುತ್ತಮುತ್ತ ರೋಗಿಗಳಂತೆ ಕಾಣುವ ಜನರು ಮತ್ತು ರೋಗಿಗಳಂತೆ ಕಾಣದ ಜನರ ಗುಂಪುಗಳಿದ್ದುವು. ಯಾರೂ ನಿಂತಲ್ಲಿ ನಿಲ್ಲದೆ ಅತ್ತ ಇತ್ತ ವ್ಯಗ್ರರಾಗಿ ಚಲಿಸುತ್ತಿದ್ದರು. ಸಾಲಿನಲ್ಲಿ ನಿಂತವರು ಸಹ ಸ್ತಬ್ದರಾಗಿ ನಿಲ್ಲುತ್ತಿರಲಿಲ್ಲ. ದೇಹದ ಭಾರವನ್ನು ಒಮ್ಮೆ ಬಲಕ್ಕೆ ಒಮ್ಮೆ ಎಡಕ್ಕೆ, ಒಮ್ಮೆ ಮುಂದಕ್ಕೆ ಒಮ್ಮೆ ಹಿಂದಕ್ಕೆ ಎಸೆಯುತ್ತಿದ್ದರು.

ಒಟ್ಟಿನಲ್ಲಿ ಒಂದು ಸಂಗತಿ ತುಂಬಾ ಸ್ಪಷ್ಟ ವಾಗಿ ಕಂಡಿತು. ಅಲ್ಲಿರುವವರೆಲ್ಲ ತುಂಬಾ ಬಡವರು. ಕೆಲವರಂತೂ ದಟ್ಟದರಿದ್ರರು. ಇಂಥ ಅನಿವಾರ್ಯ ಪರಿಸ್ಥಿತಿಯಲ್ಲದಿರುತ್ತಿದ್ದರೆ ತಾನು ಇಲ್ಲಿಗೆ ಬರುತ್ತಿರಲಿಲ್ಲ. ತಿಳುವಳಿಕೆಯುಳ್ಳವರು, ನಾಲ್ಕು ಕಾಸು ಮಾಡುವ ಸಾಮರ್ಥ್ಯವಿರುವವರು ಇಲ್ಲಿ ಬರುತ್ತಿಲ್ಲ. ಇಲ್ಲಿಗೆ ಬಂದು ತಪ್ಪು ಮಾಡಿದೆನೆ? ಬಸ್‌ಸ್ಟಾಂಡಿನ ಬಳಿಯೇ ಆಸ್ಪತ್ರೆ ಸಿಕ್ಕಿತೆಂದು ಬೇರೆ ಯೋಚಿಸದೆ ನೇರವಾಗಿ ಇಲ್ಲಿಗೇ ಬಂದುದು ತಪ್ಪಾಯಿತೆ?

ತನಗೆ ಗೊತ್ತಿಲ್ಲದ ಈ ಊರಿನಲ್ಲಿ ಯಾವ ಖಾಸಗಿ ಆಸ್ಪತ್ರೆಯನ್ನು ಹುಡುಕಿಕೊಂಡು ಹೋಗುವುದು? ತಾಲೂಕು ಕೇಂದ್ರ ಆಸ್ಪತ್ರೆ ಯೆಂದ ಮೇಲೆ ಚಿಕಿತ್ಸೆಯ ಸವಲತ್ತುಗಳೆಲ್ಲ ಇರುತ್ತವೆ. ಬೇರೆ ಕಡೆ ಹುಡುಕಿಕೊಂಡು ಹೋಗುವ ವ್ಯವಧಾನವಿಲ್ಲ. ನೋವು ಕ್ಷಣದಿಂದ ಕ್ಷಣಕ್ಕೆ ಜಾಸ್ತಿಯಾಗುತ್ತಾ ಇದೆ.

ನೋಂದಣಿಯವನು "ಏನು ಹೆಸರು?" ಎಂದು ಠೇಂಕರಿಸಿದ. ಮೊದಲೇ ಯೋಚಿಸಿ ಕೊಂಡಂತೆ "ಹರಿ" ಎಂದು ಮಾತ್ರಾ ಹೇಳಿದ. "ಏನಾಗ್ತಿದೆ?" ಅವನು ಪುನಃ ಠೇಂಕರಿಸಿದ. ಕುಪ್ಪಿನ ಮಾತಾಡದೆ ಗಂಟಲು ತೋರಿಸಿದ.

ಕುಪ್ಪಿನ ಕಿವಿ—ಮೂಗು—ಗಂಟಲು ವಿಭಾಗ ವನ್ನು ಹುಡುಕಿಕೊಂಡು ಹೊರಟ. ಭರ್ತಿ ಹತ್ತು ನಿಮಿಷ ಸುತ್ತಾಡಿದ ಮೇಲೆ ಕಿ.ಮೂ.ಗಂ. ವಿಭಾಗ ಸಿಕ್ಕಿತು. ಉಸ್ಸಪ್ಪಾ ಎಂದು ಒಳಹೊಕ್ಕ. ಗಂಟಲಿನ ಪಸೆಯಾರಿದ್ದು ಮಾತ್ರವಲ್ಲ, ಗಂಟಲೇ ಇಲ್ಲವೆನಿಸಿತು.

ಆಶ್ಚರ್ಯವೆಂದರೆ ಕಿ.ಮೂ.ಗಂ. ವಿಭಾಗ ದಲ್ಲಿ ಆ ಹೊತ್ತು ರೋಗಿಗಳೇ ಇರಲಿಲ್ಲ.

"ಬನ್ನಿ ಕೂತ್ಕೊಳ್ಳಿ" ಎಂದು ಬಿಳಿ ನಿಲು

ವಂಗಿಯ, ಹೆಚ್ಚೆಂದರೆ ಇಪ್ಪತ್ತೂರು ವರ್ಷ ವಯಸ್ಸಿನ ಡಾಕ್ಟರು ಆತ್ಮೀಯವಾಗಿ ಸ್ವಾಗತಿಸಿದರು. ಡಾಕ್ಟರ ಬಳಿ ಅವರದೇ ವಯಸ್ಸಿನ ಬಹಳ ಸುಂದರಿಯಾದ ನರ್ಸೊಬ್ಬಳು ನಿಂತುಕೊಂಡಿದ್ದಳು. ಡಾಕ್ಟರರ ಆತ್ಮೀಯವಾದ ಸ್ವಾಗತದಿಂದ ಬಹಳ ಸಮಾಧಾನವಾಯಿತು. ನರ್ಸಿನ ಮುಗುಳು ನಗೆಯಲ್ಲಿ ಸಹ ಅಷ್ಟೇ ಬಿಸುಪಿತ್ತು. ಆದರೆ ಎಲ್ಲವನ್ನೂ ಎಳೆಎಳೆಯಾಗಿ ಗಮನಿಸಿಕೊಳ್ಳುವ ವ್ಯವಧಾನ ಕುಪ್ಪಿನನಿಗಿರಲಿಲ್ಲ.

"ಏನಾಗ್ತಿದೆ?" ಡಾಕ್ಟರರು ಕೇಳಿದರು.

ಕುಪ್ಪಿನ ತನ್ನ ಕೆಂಪಗೆ ಊದಿಕೊಂಡ ಗಂಟಲನ್ನು ತೋರಿಸಿದ. ಅಷ್ಟೇ ಸಾಕು, ಮಾತಿನ ಆವಶ್ಯಕತೆಯೇ ಇಲ್ಲ ಎಂದವನಿಗನಿಸಿತು. ಮಾತ್ರವಲ್ಲ, ಗಂಟಲಿನಿಂದ ಮಾತು ಹೊರಡುವ ಸಾಧ್ಯತೆಯ ಬಗ್ಗೆ ಅವನಿಗೆ ಸಂದೇಹವಿತ್ತು.

ಡಾಕ್ಟರ್ ಬಾಯ್ತೆರೆಯಲು ಹೇಳಿ, ಗಂಟಲನ್ನು ಹೊರಗಿಂದ ಮುಟ್ಟಿನೋಡಿ, ಇನ್ನೊಬ್ಬರು ಡಾಕ್ಟರನ್ನು ಕರೆತಂದರು. ಆತನಿಗೆ ಸುಮಾರು ಐವತ್ತು ವರ್ಷವಿರಬಹುದು. ಆತ ಕುಪ್ಪಿನ ಬಾಯ್ತೆರೆದು ನೋಡಿದ್ದೇ 'ಅಡ್ಮಿಟ್ ಹಿಮ್' ಎಂದು ಮತ್ಯಾರನ್ನೋ ಕರೆದು 'ಎಮರ್ಜನ್ಸಿ ವಾರ್ಡಿಗೆ ಕೊಂಡ್ಹೋಗಿ' ಎಂದು ಆಜ್ಞಾಪಿಸಿದರು.

ತನ್ನ ಸ್ಥಿತಿ ಇಷ್ಟು ಗಂಭೀರವಾಗಿದೆಯೆ? ಪ್ರಾಣಕ್ಕೆ ಅಪಾಯವಿದೆಯೆ? ಆಗಿರುವುದಾದರೂ ಏನು, ಅಲರ್ಜಿಯೆ? ಕ್ಯಾನ್ಸರೆ? ನಾನು ಡಾಕ್ಟರ್ ಎಂಬುದನ್ನು ತಿಳಿಸಲೆ?

ತರುಣ ಡಾಕ್ಟರ್ ಅವನೊಡನೆ ಹೇಳಿದರು "ನೋಡಿ, ನಿಮ್ಮನ್ನು ನಾವು ತಕ್ಷಣ ಅಡ್ಮಿಟ್ ಮಾಡ್ಕೊಂಡು ಅಪರೇಶನ್ ನಡೆಸ್ಬೇಕಾಗಿದೆ. ಇನ್ನು ಹತ್ತೇ ನಿಮಿಷ ತಡವಾದರೂ ನಿಮ್ಮ ಪ್ರಾಣಕ್ಕೆ ಅಪಾಯವಿದೆ. ಇದೇ ರೀತಿ ಬಿಟ್ಟರೆ ಇನ್ನು ಹತ್ತು ನಿಮಿಷದಲ್ಲಿ ನಿಮ್ಮ ಗಂಟಲು ಇನ್ನಷ್ಟು ಹಿಗ್ಗಿ ನಿಮ್ಮ ಏಯರ್ ಪ್ಯಾಸೆಜ್ ಬಂದ್ ಆಗ್ತದೆ." ಡಾಕ್ಟರ್ ಒಂದು ಇಂಜಕ್ಷನ್ ಚುಚ್ಚಿದರು. "ಏನು ನಿಮ್ಮ ಹೆಸರು?" ಎಂದು ಕೇಳಿದರು.

"ನರಹರಿ" ಡಾಕ್ಟರ್ ನರಹರಿ ಕುಪ್ಪಿನ ಹೇಳಿದ. ಆದರೆ ನಾಲ್ಕಕ್ಷರದ ಬದಲು ರ್‌ರ್‌ರ್ ಎಂಬ ಶಬ್ದ ಮಾತ್ರವೇ ಹೊರಬಂತು.

## ನಿಲ್ಲಿ

ಎತ್ತರಗಳೇ
ತಗ್ಗಿನ ಅಂತರಗಳೇ
ಹೋಗದಿರಿ
ನಮ್ಮಿಂದ ಹಾಗೆ ದೂರ

ನೆಲ ಮುಗಿಲನ್ನು
ಬಲ್ಲ ಅಂತರಂಗಗಳೇ
ಪ್ರಶ್ನೆಗಳಿಗೆ ಮಿಕ್ಕುಳಿದ
ಉತ್ತರಗಳೇ ನಿಲ್ಲಿ

ಮೌನದಿಂದ ಮೌನಕ್ಕೆ
ಏರಿದ ಮೇರುಗಳೇ
ನಿಮ್ಮುಸಿರೇ ನಮ್ಮ
ಕೊರಳು

ನೆಲದಾಯಿಯಿಂದ
ಹೊರಟ ಬೇರುಗಳೇ
ಮರೆಯದಿರಿ
ನಾವು ನಿಮ್ಮ ಬಿಳಲು

ಬಿರು ಬಿಸಿಲಿಗೆ
ಅಡ್ಡ ನಿಂತ ವೃಕ್ಷಗಳೇ
ನಮ್ಮ ಕಾಯ್ದು ನೆತ್ತಿಗೆ
ಇರಲಿ ಸದಾ
ನಿಮ್ಮ ನೆಳಲು

● ಭಾಗ್ಯ ಜಯಸುದರ್ಶನ

ಡಾಕ್ಟರ್‌ಒಂದು ಫಾರ್ಮು ತೋರಿಸಿ "ಇಲ್ಲಿ ಸಹಿಮಾಡಿ" ಎಂದರು. ಕುಪ್ಪಿನ ತನ್ನ ಸಹಿಯನ್ನು ಗೀಚಿದ. ಅದು ಎಂದಿನ ಸಹಿಯಂತಿರಲಿಲ್ಲ.

ಎರಡು ನಿಮಿಷದೊಳಗೆ ಅವನನ್ನು ಎಮರ್ಜನ್ಸಿ ವಾರ್ಡಿಗೆ ಸಾಗಿಸಲಾಯಿತು. ಮತ್ತೆರಡು ನಿಮಿಷದಲ್ಲಿ ಅವನು ಅಪರೇಶನ್ ಥಿಯೇಟರಿನ ಟೇಬಲ್ ಮೇಲಿದ್ದ. ಅಷ್ಟು ಮಾತ್ರ ಗೊತ್ತು

ಡಾಕ್ಟರ್ ನರಹರಿ ಕುಪ್ಪಿನನಿಗೆ.

ಎಷ್ಟೋ ಹೊತ್ತಿನ ಬಳಿಕ, ತನಗೆ ಎಚ್ಚರಾಗಿದೆ ಎಂದು ಕುಪ್ಪಿನನಿಗೆ ಅನಿಸಿತು. ಆದರೆ ಕಗ್ಗತ್ತಲೆ, ಇಷ್ಟು ಬೇಗ ಕತ್ತಲಾಯಿತೆ, ಅಥವಾ ಇದು ಇನ್ನೊಂದು ದಿನವೆ, ಅಥವಾ ಬಹಳ ದಿನಗಳೇ ಕಳೆದಿವೆಯೆ ಎಂಬ ಗೊಂದಲಕ್ಕೊಳಗಾದ.

ಆ ಕತ್ತಲಲ್ಲಿ ನಾಲ್ಕು ಜನ ಡಾಕ್ಟರುಗಳು ಒಮ್ಮೆಲೇ ಕಾಣಿಸಿಕೊಂಡರು. ವಿಚಿತ್ರವೆಂದರೆ, ಅವರು ಬಿಳಿ ನಿಲುವಂಗಿಯ ಬದಲು ಕಪ್ಪು ನಿಲುವಂಗಿ ಧರಿಸಿರುವಂತೆ ತೋರಿತು. ಎಲ್ಲರ ಮೇಲು ಜೇಬಿನಲ್ಲಿಯೂ ಸ್ಟೆತಾಸ್ಕೋಪು ಇತ್ತು. ಎಲ್ಲರೂ ಎರಡೂ ಕೈಗಳನ್ನು ಕೆಳಜೇಬಿನಲ್ಲಿ ಇಳಿಸಿದ್ದರು. ಕಪ್ಪು ನಿಲುವಂಗಿಯ ಹೊರಗೆ ಕಾಣಿಸುತ್ತಿದ್ದುದು ಅವರ ಕತ್ತು ಮತ್ತು ತಲೆ ಮಾತ್ರ. ಕತ್ತು ಮತ್ತು ತಲೆ ಸಂಪೂರ್ಣವಾಗಿ ಗಾಜಿನಿಂದಾದಂತಿದ್ದು, ಎರಡು ಕಣ್ಣುಗಳ ಕಪ್ಪು ಮಣಿಗಳು, ಹುಬ್ಬಗಳು, ಮೀಸೆ ಮತ್ತು ಕೂದಲು ಮಾತ್ರ ಕಪ್ಪು, ಉಳಿದ ಭಾಗ ಗಾಜು, ಅಂದರೆ ಸ್ಪಟಿಕ ಶುಭ್ರ ಗಾಜು. ಒಳಗೆ ಬೆಳಕಿದೆಯೆಂಬಂತೆ ಹೊಳೆಯುತ್ತಿತ್ತು.

"ನೀನು ಆರೋಗ್ಯವಾಗಿರುವೆ ಏಳು" ಎಂದು ಒಂದು ಗಾಜಿನ ಮುಖ ಹೇಳಿತು. ಕುಪ್ಪಿನ ಎದ್ದು ಕುಳಿತ. ತಾನು ಕ್ಷೇಮವಾಗಿರುವ ಬಗ್ಗೆ ಅವನಿಗೆ ತುಂಬಾ ಆಶ್ಚರ್ಯವುಂಟಾಯಿತು.

"ಎದ್ದು ನಡೆ" ಇನ್ನೊಂದು ಮುಖ ಹೇಳಿತು. "ನೀನು ರೋಗ ಮುಕ್ತನಾಗಿರುವೆ. ಎದ್ದು ನಡೆದುಬಿಡು" ಇನ್ನೊಂದು ಮುಖ ಹೇಳಿತು.

ಅಷ್ಟು ಹೇಳಿದ್ದೇ ಸಾಕು ಎಂದು ಕುಪ್ಪಿನ ಎದ್ದು ನಡೆದ. ಆದರೆ ನಾಲ್ಕೇ ಹೆಜ್ಜೆ ನಡೆಯುವಷ್ಟರಲ್ಲಿ ಕಾಲುಗಳು ತುಂಬಾ ಭಾರವೆನಿಸಿ ಪ್ರಯಾಸ ಪೂರ್ವಕ ಕಾಲೆಳೆಯುತ್ತಾ ನಡೆದ.

ಆಸ್ಪತ್ರೆಯ ಜಗಲಿ ಬಹಳ ಉದ್ದವಿತ್ತು. ನಡೆದಷ್ಟೂ ಮುಗಿಯಲಿಲ್ಲ. ಒಂದು ಕೋಣೆ ಕಾಣಿಸಿತು. ಅದರೊಳಗಿನ ಗದ್ದಲ ಅವನ ಗಮನ ಸೆಳೆಯಿತು. ಒಳಗಿಣುಕಿದ. ಕೋಣೆಯ ತುಂಬ ಒಂದಿಂಚು ಜಾಗವನ್ನೂ ಬಿಡದೆ ಹಾಸಿಗೆಗಳು. ಅದರಲ್ಲಿ ತೆವಳುವ ರೋಗಿಗಳು. ಒಬ್ಬರೂ ಕಾಲುಗಳ ಮೇಲೆ ನಿಂತಿಲ್ಲ. ಎಲ್ಲಾ ಹುಳಗಳಂತೆ ತೆವಳುತ್ತಿದ್ದಾರೆ. ಎಲ್ಲಾ ಪರಿಚಿತ ಮನುಷ್ಯರಂತೆ ತೋರಿದರು. ಕೆಲವರ ಕೈಕಾಲುಗಳಿಗೆ ಅವನು



ನಿನ್ನೆ ತೋಟದ ಮಾವಿನಮಿಡಿ ಕದ್ದಿದಾರೆ ಅಂದ್ಮೇಲೆ ಇವತ್ತು ಮೆಣಸಿನಪುಡಿ ಕದೀಲಿಕ್ಕೆ ಕಳ್ಳರು ಬಂದೇ ಬರ್ತಾರ್ರೀ...!

ಬ್ಯಾಂಡೇಜು ಹಾಕಿದ್ದ. ಕೆಲವರ ಮುಖ ಮುಸುಡು ಬೆನ್ನು ಹೊಟ್ಟೆ ಹೊಲಿದಿದ್ದ. ಎಲ್ಲರೂ ಅದೇ ಸ್ಥಿತಿಯಲ್ಲಿದ್ದರು. ಯಾರೂ ಮೊದಲಿನಂತಿರಲಿಲ್ಲ.

ಆಮೇಲೆ ಕೆಲವು ಬಾಗಿಲು ಮುಚ್ಚಿದ ಕೋಣೆಗಳು. ಅವುಗಳನ್ನು ದಾಟಿದ ಮೇಲೆ ಒಂದು ಕೋಣೆಯಲ್ಲಿ ಒಂದು ಉದ್ದದ ಸರತಿಯ ಸಾಲು. ಪ್ರತಿಯೊಬ್ಬರ ಕೈಯಲ್ಲಿಯೂ ಒಂದು ಬಾಟಲಿ. ಒಬ್ಬಾತ ಒಂದು ದೈತ್ಯಗಾತ್ರದ ಗಾಜಿನ ಕೊಪ್ಪರಿಗೆಯಿಂದ ಒಂದು ಕೆಂಪು ದ್ರಾವಣವನ್ನು ಬಾಟಲಿಗಳಲ್ಲಿ ತುಂಬಿ ಕೊಡುತ್ತಿದ್ದ.

ಮತ್ತೆ ಸ್ವಲ್ಪ ನಡೆದ ಬಳಿಕ ಒಂದು ವಿಶಾಲವಾದ ಕೋಣೆಯಿಂದ ನವಿರಾದ ವಾದ್ಯಸಂಗೀತ ಹೊರಡುತ್ತಿರುವುದು ಕೇಳಿಸಿತು. ಮಬ್ಬು ಬೆಳಕಿನಲ್ಲಿ ಒಳಗೆ ನೂರಾರು ಮಂದಿ ನರ್ತಿಸುತ್ತಿದ್ದರು. ಒಂದು ರೀತಿಯ ಬಾಲ್‌ಡಾನ್ಸ್. ಗಂಡು ಹೆಣ್ಣು ಜೋಡಿಗಳು. ಡಾಕ್ಟರುಗಳು ಮತ್ತು ನರ್ಸುಗಳು. ಡಾಕ್ಟರುಗಳು ಬಿಳಿ ನಿಲುವಂಗಿಯಲ್ಲಿದ್ದರು, ನರ್ಸುಗಳು ಅವರ ಸಮವಸ್ತ್ರದಲ್ಲಿದ್ದರು.

ಮುಂದಕ್ಕೆ ದಾರಿಯಿಲ್ಲ. ಗೋಡೆ ಅಡ್ಡವಾಯಿತು. ಅಷ್ಟರಲ್ಲಿ ಅವನ ಶಕ್ತಿ ಸಂಪೂರ್ಣ ಹ್ರಾಸವಾಗಿತ್ತು. ಅವನು ಗೋಡೆಯನ್ನು ತಡವುತ್ತಾ ಕುಸಿದುಬಿದ್ದ.

ಬಹಳ ಹೊತ್ತಿನ ನಂತರ ಅವನು ಕಣ್ಣು

ತೆರೆದಾಗ ಮಂಚದ ಮೇಲೆ ಇದ್ದ. ಮೊದಲು ಜಾಗೃತವಾದುದು ಅವನ ಘ್ರಾಣೇಂದ್ರಿಯ. ಆಹ್ಲಾದಕರವಾದ ಅತ್ತರಿನ ವಾಸನೆ ಗಾಳಿಯಲ್ಲಿ ತೇಲಿ ಬಂತು. ಕತ್ತಿಗೆ ಸ್ಟೆತಾಸ್ಕೋಪು ಸಿಲುಕಿಸಿದ ಸುಂದರ ರೂಪ.

"ನಿಮ್ಮನ್ನು ಎದ್ದು ಹೋಗಲು ಯಾರು ಹೇಳಿದರು? ಎಲ್ಲಿಗಂತ ಹೊರಟಿದ್ದು ನೀವು?" ಆಕೆ ಕುಲುಕುಲು ನಗುತ್ತಾ ಕೇಳಿದಳು.

"ಡಾಕ್ಟರು ಹೇಳಿದ್ರು."

"ಏನು ಡಾಕ್ಟರು ಹೇಳಿದ್ರೆ? ಇಂಪಾಸಿಬಲ್. ಇರ್ರಿ. ಮಲಗಿದಲ್ಲಿಂದ ಏಳೋ ಸಾಹಸ ಮಾಡ್ಬೇಡಿ. ಈಗ ಹೇಗಿದ್ದೀರಿ?"

"ನನಗೆ ಏನಾಗಿತ್ತು?"

"ನಿಮ್ಮ ಗಂಟಲು ವಿಪರೀತ ಊದಿಕೊಂಡಿತ್ತು. ಅನ್ನನಾಳ ಮತ್ತು ಶ್ವಾಸನಾಳಗಳು ಒಂದಾಗುವ ಸ್ಥಿತಿಯಲ್ಲಿದ್ದುವು. ಶ್ವಾಸನಾಳವನ್ನು ಏನು ಮಾಡಲೂ ಸಾಧ್ಯವಿರಲಿಲ್ಲ. ಆದರೆ ಅನ್ನನಾಳದ ಒಂದು ತುಂಡನ್ನು ತೆಗೆಯಲೇ ಬೇಕಾಯಿತು."

"ಏನು ಅನ್ನನಾಳದ ತುಂಡು ತೆಗೆದಿದ್ದಾರೆಯೆ?"

"ಹೌದು. ಅದು ಅನಿವಾರ್ಯವಾಗಿತ್ತು. ಹೆಚ್ಚಲ್ಲ. ಬರೀ ಒಂದಿಂಚು ಉದ್ದದ ಒಂದು ತುಂಡು ಅಷ್ಟೆ. ಆ ಕಾರಣದಿಂದ ನಿಮಗೇನೂ ತೊಂದರೆಯಾಗಲಿಕ್ಕಿಲ್ಲ."

"ನಾನು ಇಲ್ಲಿಂದ ಯಾವಾಗ ಹೋಗಬಹುದು?"

"ನೀವು ಇನ್ನು ಒಂದು ವಾರವಾದರೂ ಇರಬೇಕಾಗುತ್ತೆ. ಅಪರೇಶನ್ ಕಾಲದಲ್ಲಿ ನಿಮಗೆ ರಕ್ತದ ಕೊರತೆಯುಂಟಾಗಿತ್ತು. ನಿಮಗೆ ಸರಿಹೊಂದುವ ರಕ್ತ ಸಿಗಲಿಲ್ಲ. ಕೊನೆಗೆ ನಮ್ಮ ಆಸ್ಪತ್ರೆಯ ಸ್ವೀಪರೊಬ್ಬನ ರಕ್ತ ಸರಿಹೋಯಿತು. ಅವನು ಒಂದು ಬಾಟಲಿ ರಕ್ತ ಕೊಟ್ಟ. ನೋಡಿ, ಅವನೇ" ಆಕೆ ಖಾಕಿ ಉಡುಪಿನಲ್ಲಿದ್ದ ಒಬ್ಬ ಮನುಷ್ಯನನ್ನು ತೋರಿಸಿದಳು.

ಅವನು ಆರಡಿ ಎತ್ತರದ ಒಂದು ಅಸ್ಥಿಪಂಜರದಂತೆ ಇದ್ದ. ಅವನ ಕಣ್ಣುಗಳನ್ನು ನೋಡಲಾಗಲಿಲ್ಲ. ಕುಪ್ಪಿನ ಕಣ್ಣು ಮುಚ್ಚಿಕೊಂಡ.

ಅವನನ್ನೀಗ ಒಂದು ಹೊಸ ಚಿಂತೆ ಕಾಡಿತು. ನಾನು ಈ ರೀತಿ ಇಲ್ಲಿ ಮಲಗಿದರೆ ನನ್ನ ಹೆಂಡತಿ ಮಕ್ಕಳಿಗೆ ತಿಳಿಯುವುದು ಹೇಗೆ? ಪರೀಕ್ಷಿಸಿಕೊಳ್ಳೋಣ, ಏನಾದರೂ ಪ್ರಥಮ ಚಿಕಿತ್ಸೆ ಮಾಡಿಸಿಕೊಂಡು ಹೊರಬೀಳೋಣ ಅಂತ ಬಂದರೆ ಇಲ್ಲಿ ಸಿಕ್ಕಿಹಾಕಿಕೊಂಡಾಯ್ತಲ್ಲ? ಈ ದರಿದ್ರ ಸರಕಾರೀ ಆಸ್ಪತ್ರೆಗೆ ಬಂದುದು ಒಂದು ನಾಚಿಕೆಗೇಡಿನ ಸಂಗತಿಯಾಯ್ತಲ್ಲ? ರಜೆ ಕೂಡಾ ಹಾಕದೆ ನಾನು ಇಲ್ಲೇ ಮಲಗುವುದಾದರೂ ಹೇಗೆ? 'ಹೋಗಬಹುದು' ಎಂದು ಡಾಕ್ಟರು ಹೇಳಿಲ್ಲವೆನ್ನುತ್ತಾಳೆ ಈಕೆ! ನಿಜವಿರಬಹುದು. ಯಾಕೆಂದರೆ, ಎದ್ದು ಕುಳಿತುಕೊಳ್ಳುವ ತ್ರಾಣವೂ ದೇಹದಲ್ಲಿಲ್ಲ. ಹಾಗಾದರೆ 'ಎಲ್ಲಿಗಂತ ಹೊರಟಿದ್ದು ನೀವು' ಎಂಬ ಅವಳ ಪ್ರಶ್ನೆಯ ಅರ್ಥವೇನು? ಗಂಟಲಿಗೊಂದು ಯಮಗಾತ್ರದ ಬ್ಯಾಂಡೇಜು ಬಿಗಿದಿದ್ದಾರೆ. ತಲೆ ನಿಂತಿರುವುದೇ ಅದರ ಆಧಾರದಲ್ಲಿ ಎಂಬಂತಿದೆ. ರುಂಡ ಮತ್ತು ಮುಂಡದ ನಡುವೆ ಕೊರಳೇ ಇಲ್ಲ, ಬ್ಯಾಂಡೇಜು ಮಾತ್ರವೇ ಇರುವುದು ಎಂಬಂತಿದೆ. ದೃಷ್ಟಿ ಕೂಡಾ ಮಬ್ಬುಮಬ್ಬು. ಏನೂ ಸ್ಫುಟವಾಗಿ ಕಾಣಿಸುತ್ತಿಲ್ಲ. ನನಗೆ ಏನಾಗಿಹೋಯ್ತು? ಏನಾದರಾಗಲಿ, ಮನೆಗೆ ತಿಳಿಸಲು ಡಾಕ್ಟರೊಂದಿಗೆ ಹೇಳಬೇಕು. ನಾನು ಡಾಕ್ಟರೆಂಬುದನ್ನು ತಿಳಿಸಲೇ ಬಾರದೆಂದುಕೊಂಡಿದ್ದೆ. ಆದರೆ ಈಗ ಬೇರೆ ದಾರಿಯಿಲ್ಲ

ಸ್ವಲ್ಪ ಹೊತ್ತಿನ ಬಳಿಕ ಒಬ್ಬಳು ನರ್ಸ್ ಬಂದಳು, ವಯಸ್ಸಿನಾಕೆ.

"ನನ್ನ ಮನೆಯವರನ್ನು ಬರಹೇಳಿ. ವಿಳಾಸ ಕೊಡ್ತೀನಿ. ಟೆಲಿಗ್ರಾಮ್ ಕೊಡಿ."

"ನಿಮ್ಮ ಮನೆಯವರು ಸ್ವಲ್ಪ ಹೊತ್ತಿನಲ್ಲಿ ಬರಬಹುದು."

"ಹೇಗೆ ಗೊತ್ತು ಅವರಿಗೆ?"

"ಪಕ್ಕದ ವಾರ್ಡಿನಲ್ಲಿರುವ ಪೇಶಂಟೊಬ್ಬ ನಿಮ್ಮ ಗುರುತು ಹಿಡಿದ. ನೀವು ಅವನ ಹೊಟ್ಟೆಯ ಮೇಲೆ ಯದ್ವಾತದ್ವಾ ಹಾಕಿದ ಹೊಲಿಗೆಯನ್ನು ಬಿಚ್ಚಿಸಿಕೊಳ್ಳಲು ಬಂದಿದ್ದ. ಅವನಿಂದ ಎಷ್ಟು ತೆಗೆದುಕೊಂಡಿರಿ?" ಆಕೆ ಒರಟಾಗಿ ಕೇಳಿ, ಅವನ ಉತ್ತರಕ್ಕೆ ಕಾಯದೆ ಹೊರಟುಹೋದಳು. ಸ್ವಲ್ಪ ಹೊತ್ತಿನ ಬಳಿಕ ಮರಳಿ ಬಂದು "ನಿಮ್ಮ ಮನೆಯವರು ಬಂದಾಗ ಆ ಸ್ವೀಪರನಿಗೆ ನೂರು ರೂಪಾಯಿ ಕೊಡಲು ಹೇಳಿ. ಅವನ ಹೆಂಡತಿಗೆ ಕ್ಯಾನ್ಸರ್. ದಿನ ಎಣಿಸ್ತಾ ಇದ್ದಾಳೆ" ಎಂದು ಹೇಳಿ ಹೋದಳು.

ತಾನು ಡಾಕ್ಟರ್ ಎಂದು ತಿಳಿದ ಬಳಿಕ ಅಲ್ಲಿನ ನರ್ಸುಗಳು ಮತ್ತು ಡಾಕ್ಟರುಗಳು ಹೆಚ್ಚಿನ ಗೌರವ ಮತ್ತು ಆದರ ತೋರಬಹುದೆಂದುಕೊಂಡಿದ್ದ. ಆದರೆ ಹಾಗೇನೂ ಆಗಲಿಲ್ಲ. ಅವನು ಯಾರೇ ಆಗಿರಲಿ, ಅವರ ಕಣ್ಣಲ್ಲಿ ಅವನು ಯಕಶ್ಚಿತ್ ರೋಗಿ ಮಾತ್ರವೇ ಆಗಿದ್ದ.

ಒಂದು ವಾರದಲ್ಲಿ ಅವನು ಗುಣಮುಖ ನಾದ. ಹೆಂಡತಿ ಮಕ್ಕಳು ಬಂದು ಅವನನ್ನು ಕರೆದುಕೊಂಡು ಹೋದರು. ಒಂದುವಾರ ಮನೆಯಲ್ಲೇ ಆರೈಕೆ ವಿಶ್ರಾಂತಿ ಪಡೆದು ಆಸ್ಪತ್ರೆಗೆ ಹೋಗಲಾರಂಭಿಸಿದ.

ಒಂದು ದಿನ ಆಸ್ಪತ್ರೆಯಲ್ಲಿ ಉಗುಳು ನುಂಗುವಾಗ ತಟ್ಟನೆ ಗಂಟಲುನೋವು ಕಾಣಿಸಿ ಕೊಂಡಿತು. ಏನೋ ಮಾತ್ರೆ ನುಂಗಿದ. ಪ್ರಯೋಜನ ವಾಗಲಿಲ್ಲ. ಆದರೆ ಉಣ್ಣುವಾಗ, ತಿನ್ನುವಾಗ ಏನೂ ತೊಂದರೆಯಿಲ್ಲ. ಉಗುಳು ನುಂಗುವಾಗ ಮಾತ್ರ ವಿಪರೀತ ನೋವು. ಹಾಗಂತ ಉಗುಳು ನುಂಗದಿರಲಾಗುತ್ತದೆಯೆ? ಉಗುಳು ಆಹಾರ ವಲ್ಲ, ಪಾನೀಯವಲ್ಲ, ಆದರೆ ಉಗುಳು ನುಂಗುವುದಿಲ್ಲ ಎಂದು ನಿರ್ಧರಿಸಲು ಸಾಧ್ಯ ವಿಲ್ಲ. ಉಗುಳಿನ ನೆನಪಾದರೆ ಬಾಯಲ್ಲಿ ಉಗುಳು. ಎಷ್ಟು ಹೊತ್ತು ತಡೆದುಕೊಳ್ಳಬಹುದು? ನುಂಗಲೇಬೇಕು. ಉಗುಳಬಹುದೇನೋ ನಿಜ. ಆದರೆ ಎಷ್ಟು ಬಾರಿ? ನಾಲ್ಕೈದು ಬಾರಿ ಉಗುಳಿದ ಮೇಲೆ ಒಮ್ಮೆ ನುಂಗಲೇ ಬೇಕೆನಿಸುತ್ತದೆ.

ತನ್ನ ಕಷ್ಟವನ್ನು ಯಾರಲ್ಲೂ ಹೇಳದೆ ಸ್ವಲ್ಪ ದಿನ ಮುಚ್ಚಿಟ್ಟ. ಏನೇನೋ ಮಾತ್ರೆ ನುಂಗಿದ. ಒಮ್ಮೊಮ್ಮೆ ಒಂದಿಡೀ ದಿನ ನೋವು ಇರುತ್ತಿರ ಲಿಲ್ಲ. ಹೋಯಿತೆಂದುಕೊಳ್ಳುವಷ್ಟರಲ್ಲಿ ಪುನಃ ಪ್ರತ್ಯಕ್ಷ.

ಬೇರೆ ಬೇರೆ ಡಾಕ್ಟರುಗಳಲ್ಲಿಗೆ ಹೋದ. ಸ್ಪೆಶಲಿಸ್ಟುಗಳಲ್ಲಿಗೆ ಹೋದ. ಎಲ್ಲಾ ಬಗೆಯ ಔಷಧಿ ನುಂಗಿದ. ಹಣ ನೀರಿನಂತೆ ಖರ್ಚಾ ಯಿತು. ನೋವಿನ ತೀವ್ರತೆ ಹೆಚ್ಚುತ್ತಾ ಹೋಯಿತು. ಉಗುಳು ನುಂಗುವಾಗ ಕತ್ತು ವಿಚಿತ್ರವಾಗಿ ತಿರುಗುತ್ತಿತ್ತು. ಭಾರೀ ಗಾತ್ರದ ಮೀನನ್ನು ನುಂಗಿದ ಕೊಕ್ಕರೆಯ ಕತ್ತಿನಂತೆ ವಕ್ರವಕ್ರವಾಗು ತ್ತಿತ್ತು. ಆಸ್ಪತ್ರೆಗೆ ಬಂದ ರೋಗಿಗಳು ಇದನ್ನು ನೋಡಿ ಆಶ್ಚರ್ಯ ಪಡುತ್ತಿದ್ದರು. ಕೆಲವರಿಗೆ ಅಯ್ಯೊ ಪಾಪ ಎಂದನಿಸಿದರೆ, ಇನ್ನು ಕೆಲವರಿಗೆ ತಮಾಷೆಯೆನಿಸಿ ನಗು ಬರುತ್ತಿತ್ತು. ಆದರೆ ಒಮ್ಮೆಯಾದರೂ ಗಂಟಲು ಹುಣ್ಣಿನ ನೋವನ್ನು ಅನುಭವಿಸದ ಮನುಷ್ಯನಿಲ್ಲದಿರುವುದರಿಂದ, ಕುಪ್ಪಿನ ಡಾಕ್ಟರನ್ನು ಶಾಶ್ವತವಾಗಿ ಕಾಡುತ್ತಿರುವ ಗಂಟಲುನೋವು ಎಷ್ಟು ಭೀಕರ ಎಂಬುದನ್ನು ಎಲ್ಲರೂ ಅರ್ಥಮಾಡಿಕೊಂಡಿದ್ದರು. ಕುಪ್ಪಿನನ ಪತ್ನಿಯಂತೂ ಗಂಡ ಗಂಟಲು ಹೊಸೆಯುವ ಬಗೆಯನ್ನು ಕಂಡು ಕಣ್ಣೀರು ಸುರಿಸುತ್ತಿದ್ದಳು.

ಕುಪ್ಪಿನನ ಗಂಟಲ ಸ್ಥಿತಿ ಹೀಗಿರುವಾಗ ಒಂದು ದಿನ ಅವನ ಬಳಿಗೆ ಬಂದ ರೋಗಿಯೊಬ್ಬ ಹೇಳಿದ, ಬೆಂಗೇರಿ ತಾಲೂಕಿನಲ್ಲಿರುವ ದಂಡಿಗನ ಬೆಟ್ಟ ಎಂಬ ಬೆಟ್ಟದ ಕಣಿವೆಯಲ್ಲಿ ಬೂತನಹಳ್ಳಿ ಎಂಬ ಒಂದು ಊರಿದೆ. ಅಲ್ಲಿ ಗುಡ್ಡಗಾಡು ಜನರ ಪಂಗಡವೊಂದಿದೆ. ಅವರು ಸಿದ್ಧೌಷಧ ನಿಪುಣರು. ಅವರಲ್ಲಿ ಇಂಥ ವಿಚಿತ್ರ ರೋಗಗಳಿಗೆ ಚಿಕಿತ್ಸೆ ಯಿದೆ.

ಇದು ಕೊನೆಯ ಪ್ರಯತ್ನ ಎಂದುಕೊಂಡು ಕುಪ್ಪಿನ ಹೆಂಡತಿ ಮತ್ತು ಹಿರೇ ಮಗನ ಸಹಿತ ದಂಡಿಗನ ಬೆಟ್ಟಕ್ಕೆ ಪಯಣ ಬೆಳೆಸಿದ.

ಗುಡ್ಡಗಾಡು ಪಂಗಡದವರು ಅವರ ಸುತ್ತ ನೆರೆದರು. ಅವರ ವೈದ್ಯ ಕುಪ್ಪಿನನನ್ನು ಪರೀಕ್ಷಿಸಿ ಚಿಕಿತ್ಸೆ ಮಾಡಬಹುದು, ರೋಗ ಗುಣವಾಗುತ್ತೆ, ಆದರೆ ಒಂಬತ್ತು ದಿನ ನಿಲ್ಲಬೇಕಾಗುತ್ತೆ ಎಂದು ಹೇಳಿದ. ಒಪ್ಪಿಕೊಳ್ಳದೆ ಬೇರೆ ದಾರಿಯಿದೆಯೆ?

ಹೆಂಡತಿ ಮತ್ತು ಮಗ ಎರಡು ದಿನ ಅವ ನೊಂದಿಗೆ ಉಳಿದರು. ಆದರೆ ಅಲ್ಲಿನ ಆಹಾರ ಪಾನೀಯ ಅವರನ್ನು ಕಂಗೆಡಿಸಿತು. ಹೀಗಾದರೆ ತಮಗೇನಾದರೂ ಅಸೌಖ್ಯವುಂಟಾಗುವುದೇನೋ ಎಂದು ಭೀತರಾದರು. "ನೀವು ಹೋಗಿ. ಚಿಕಿತ್ಸೆ ಮುಗಿಯುವ ಹೊತ್ತಿಗೆ ಬನ್ನಿ" ಎಂದು ಕುಪ್ಪಿನ ಹೆಂಡತಿ ಮತ್ತು ಮಗನನ್ನು ಕಳಿಸಿಬಿಟ್ಟ.

ರಾಗಿ ಅಂಬಲಿ, ಆಡಿನ ಹಾಲು, ಗಡ್ಡೆ ಗೆಣಸು ಇದು ಆಹಾರ. ಒಂದು ಹೊತ್ತು ಜೇನು ತುಪ್ಪ, ಮುಸುವನ ಎಂಜಲು ಮತ್ತು ಯಾವುದೋ ಬೇರು ಮೂರೂ ಸೇರಿದ ಗುಟ್ಟಿ. ಮತ್ತೆರಡು ಹೊತ್ತು ನಾಲ್ಕೈದು ಬಗೆ ಬೇರುನಾರುಗಳ ಕಷಾಯ ಇದು ಔಷಧಿ.

ಮೂರನೇ ದಿನದಿಂದಲೇ ಗಂಟಲು ನೋವು ಕಡಿಮೆಯಾಗುತ್ತಾ ಬಂದು ಎಂಜಲು ನುಂಗಲು ಸಾಧ್ಯವಾಯಿತು. ಎಂಟನೇ ದಿನ ಗಂಟಲು

ನೋವು ಪೂರ್ತಿಯಾಗಿ ಮಾದು ನಿರಾಯಾಸವಾಗಿ ಎಂಜಲು ನುಂಗಲು ಸಾಧ್ಯವಾಯಿತು.

"ನೀವು ನಾಳೆ ಹೋಗಬಹುದು. ಈ ರಾತ್ರಿ ಹುಣ್ಣಿಮೆ ಹಬ್ಬ. ನೀವು ನಮ್ಮೊಂದಿಗಿರುವುದು ತುಂಬಾ ಸಂತೋಷದ ವಿಷಯ" ವೈದ್ಯ ಹೇಳಿದ.

"ನಿಮ್ಮ ಚಿಕಿತ್ಸೆಯ ವೆಚ್ಚ ಹೇಳಿ" ಕುಪ್ಪಿನನೆಂದ.

"ನಮ್ಮ ಚಿಕಿತ್ಸೆಗೆ ವೆಚ್ಚವಿಲ್ಲ. ನಾವು ಔಷಧಿಯನ್ನು ಹಣಕ್ಕೆ ಮಾರುವುದಿಲ್ಲ."

"ಊಟ ಉಪಾಹಾರಗಳ ಖರ್ಚು. ಅದನ್ನಾದರೂ ನೀವು ಸ್ವೀಕರಿಸಬೇಕು."

"ಇಲ್ಲ. ನಮಗೆ ಎಷ್ಟೇ ಕಷ್ಟಗಳಿರಬಹುದು. ಆದರೆ ಬಂದವರನ್ನು ಸತ್ಕರಿಸುವುದರಲ್ಲಿ ನಮಗೆ ಸಂತೋಷ ಸಿಗುತ್ತದೆ. ಹಣ ತೆಗೆದುಕೊಂಡು ಆ ಸಂತೋಷವನ್ನು ಕಳೆದುಕೊಳ್ಳಲು ನಾವು ಸಿದ್ಧರಿಲ್ಲ."

ಇದು ಮನುಷ್ಯ ಪ್ರಪಂಚವೇ ಅಲ್ಲ. ಇನ್ನಾವುದೋ ಬೇರೆ ಲೋಕ ಅನಿಸಿತು ಕುಪ್ಪಿನನಿಗೆ.

ರಾತ್ರಿ ತಿಂಗಳ ಬೆಳಕಿನಲ್ಲಿ ಪಂಗಡದ ಮುಖಂಡ, ಅವನ ಪರಿವಾರದವರು, ವೈದ್ಯ ಮತ್ತು ಕುಪ್ಪಿನ ಒಂದೆಡೆ ಕುಳಿತರು. ಯುವಕ ಯುವತಿಯವರು ವೃತ್ತಾಕಾರವಾಗಿ ಸುತ್ತುತ್ತಾ ಹಾಡು-ಕುಣಿತ ಆರಂಭಿಸಿದರು.

ನೃತ್ಯ ಮುಗಿಯುತ್ತಾ ಬಂದಾಗ ತರುಣಿಯೊಬ್ಬಳು ಎಲ್ಲರ ಕೈಯಲ್ಲೂ ಒಂದು ಬಟ್ಟಲನ್ನು ಇರಿಸಿದಳು. ಇನ್ನೊಬ್ಬಳು ಅವಳ ಹಿಂದೆಯೇ ಆ ಬಟ್ಟಲುಗಳನ್ನು ತುಂಬುತ್ತಾ ಬಂದಳು. ಎಲ್ಲರೂ ಮೇಲಕ್ಕೆ ನೋಡಿ ಏನೋ ಪ್ರಾರ್ಥನೆ ಹೇಳಿ ಆ ಪೇಯವನ್ನು ಕುಡಿದರು.

ಯಾರಿಗೂ ಏನೂ ಆಗಲಿಲ್ಲ. ಕುಪ್ಪಿನನಿಗೆ ಮಾತ್ರ ಆ ಪೇಯ ಕುಡಿದೊಡನೆ ಕಣ್ಣು ಭಾರ ಭಾರವಾಗಿ ಕುಳಿತಲ್ಲೇ ಕಣ್ಮುಚ್ಚಿ ಒರಗಿದ. ಎಲ್ಲರೂ ಇನ್ನೂ ಕುಡಿಯುತ್ತಲೇ ಇದ್ದರು. ಬಟ್ಟಲು ಖಾಲಿಯಾದೊಡನೆ ಪುನಃ ತುಂಬಿಸಲಾಗುತ್ತಿತ್ತು. ಪಂಗಡದ ಗಾಯಕ ಹಾಡತೊಡಗಿದ.

ಕುಪ್ಪಿನನ ಕಣ್ಣು ಮುಂದೆ ಪುನಃ ಅದೇ ಆಸ್ಪತ್ರೆಯ ದೃಶ್ಯ ಮೂಡಿತು. ಅದೇ ನಾಲ್ಕು ಜನ ಡಾಕ್ಟರುಗಳು ಬಂದರು. ಅದೇ ಉಡುಪು, ಅದೇ ರೂಪ. "ನೀನೀಗ ಸರಿಯಾಗಿರುವೆ. ಎದ್ದು ನಡೆ" ಎಂದರು.

ಕುಪ್ಪಿನ ಎದ್ದು ನಡೆದ. ಜಗಲಿಯುದ್ದಕ್ಕೆ ನಡೆದ. ಒಂದು ಕೋಣೆಯಲ್ಲಿ ಹಾಡು ನರ್ತನ ನಡೆದಿತ್ತು. ತೆವಳುತ್ತಿದ್ದ ರೋಗಿಗಳೆಲ್ಲ ಎದ್ದು ನಿಂತು ಚಿತ್ರವಿಚಿತ್ರವಾಗಿ ನರ್ತಿಸುತ್ತಿದ್ದರು. ವಿಚಿತ್ರವೆಂದರೆ, ಅವರೆಲ್ಲ ಕಪ್ಪು ಉಡುಪು ತೊಟ್ಟಿದ್ದರು.

ಹಿಂದಿನ ಬಾರಿ ಡಾಕ್ಟರ್‌ಗಳು—ನರ್ಸುಗಳು ಬಾಲ್ ಡಾನ್ಸ್ ಮಾಡುತ್ತಿದ್ದ ಕೋಣೆ ಸ್ತಬ್ಧವಾಗಿತ್ತು. ನೆಲದ ಮೇಲೆ ಡಾಕ್ಟರುಗಳು, ನರ್ಸುಗಳು ನಿಶ್ಶಬ್ದವಾಗಿ ತೆವಳುತ್ತಿದ್ದರು.

ಈ ಬದಲಾವಣೆಯ ಬಗ್ಗೆ ಆಶ್ಚರ್ಯಪಡುತ್ತಾ ಮುಂದೆ ನಡೆದ.

ಆದರೆ ಮುಂದಿನ ಕೋಣೆಯಲ್ಲಿ ಅದೇ



ಭಿಕ್ಷಾ ಹಾಕೀ ಸ್ವಾಮೀ

ಕೈಕಾಲು ಗಟ್ಟಿ ಇರೋವಾಗ ಭಿಕ್ಷೆ ಬೇಡೋಕೆ ನಾಚಿಕೆಯಾಗೋದಿಲ್ವೇನೋ?

ಹೋಗ್ ಹೋಗ್ರೀ ನೀವು ಕೊಡೋ ಜುಜುಬಿ ಹತ್ತು ಪೈಸೆಗೆ ಕೈಕಾಲು ಬೇರೇ ಮುರ್ಕೋಬೇಕಾ?

ಹಳೆಯ ದೃಶ್ಯ. ಬಾಟಲಿಯಲ್ಲಿ ಕೆಂಪು ನೀರು ವಿತರಣೆಯಾಗುತ್ತಿತ್ತು.

ಹಿಂದಿನ ಬಾರಿಯಂತೆಯೇ ಜಗಲಿಯ ಕೊನೆಯಲ್ಲಿ ಅಡ್ಡವಾಗುವ ಗೋಡೆಯನ್ನು ನಿರೀಕ್ಷಿಸುತ್ತಾ ಮತ್ತೂ ಮುಂದಕ್ಕೆ ಹೋಗುವುದು ಬೇಡವೆನಿಸಿದರೂ ಹೋಗದಿರಲಾಗದೆ ನಡೆದ.

ಗೋಡೆಯಿರಲಿಲ್ಲ. ವಿಶಾಲವಾದ ದಾರಿಯಿತ್ತು. ಕೆಳಗಿಳಿದು ಹೋಗಲು ಮೆಟ್ಟಲುಗಳಿದ್ದುವು. ಮೆಟ್ಟಲುಗಳಾಚೆ ಸೂರ್ಯನ ಬೆಳಕಿತ್ತು.

ಬೆಳಗಾಯಿತು ಎಂದು ವೈದ್ಯ ಹೇಳಿದ.

ಡಾಕ್ಟರ್ ನರಹರಿ ಕುಪ್ಪಿನನಿಗೆ ಈಗ ಯಾವ ಪ್ರಯಾಸವೂ ಇಲ್ಲದೆ ಉಗುಳು ನುಂಗಲು ಸಾಧ್ಯವಾಗುತ್ತಿತ್ತು.

ಮನೆ ತಲುಪಿದಾಗ ತುಂಬಾ ಹಸಿದಿದ್ದ. ತನ್ನನ್ನು ಕರೆದುಕೊಂಡು ಹೋಗಲು ಬಂದ ಮಗ ಸ್ವಲ್ಪ ಬೈದ್ದನ್ನಾದರೂ ತರಬಾರದಾಗಿತ್ತೆ, ಅಬ್ಬ ಎಂಥ ಹಸಿವು ಎನ್ನುತ್ತಲೇ ಕೈಕಾಲು ಮುಖ ತೊಳೆದು ಕೊಂಡು ಊಟಕ್ಕೆ ಕುಳಿತ. ಆ ದಿನ ತನ್ನ ಮೊಮ್ಮಗನ ಹುಟ್ಟಿದ ಹಬ್ಬವಾದುದರಿಂದ ಕುಪ್ಪಿನನ ಹೆಂಡತಿ ಗಂಧಸಾಲೆ ಅಕ್ಕಿಯ ಅನ್ನ, ನಾಲ್ಕೈದು ಬಗೆಯ ಪಲ್ಯ ಮತ್ತು ಹೆಸರುಬೇಳೆ ಪಾಯಸ ಮಾಡಿದ್ದಳು.

ಡಾಕ್ಟರ್ ನರಹರಿ ಬಹಳ ಹಸಿದಿದ್ದನೇನೋ ನಿಜ. ಇಡೀ ಲೋಕವನ್ನೇ ತಿನ್ನುವ ಹಸಿವೆಯಿತ್ತವನಿಗೆ. ತನ್ನ ಹಳೆಯ ಹಸಿವೆ ಮರಳಿ ಬಂತಲ್ಲಾ ಎಂಬ ಖುಷಿ ಕೂಡ ಅದರೊಡನಿತ್ತು.

ಆದರೆ ಒಂದೇ ಒಂದು ಅನ್ನದ ಅಗುಳನ್ನವನಿಂದ ನುಂಗಲಾಗಲಿಲ್ಲ. ಉಗುಳಿನ ಹೊರತು ಬೇರೇನನ್ನೂ ಅವನಿಂದ ನುಂಗಲಾಗಲಿಲ್ಲ ●

## ಮಹಿಮಾಫಲ 'ಮಟ್ಟಿ ಗುಳ್ಳ'

ನಮ್ಮೂರು ಮಟ್ಟು ಎಂದಾಕ್ಷಣ ನೆನಪಾಗುವುದು ದುಂಡುಗಾದ ಪಚ್ಚನೆ ಮಿರುಗುವ 'ಗುಳ್ಳ' ಬದನೆ ಉದ್ದವಾಗಿದ್ದರೆ ಇದು ದುಂಡಗಾಗಿದ್ದು ಹಸಿರುಬಣ್ಣ ಜೊತೆಗೆ ಬಿಳಿಗೆರೆ, ಮುಳ್ಳು ತುಂಬಿದ ತೊಟ್ಟು ಇದರ ಶೋಭೆ.

ಉಡುಪಿಯಿಂದ ಐದು ಮೈಲು ದಕ್ಷಿಣಕ್ಕೆ ಕಟಪಾಡಿಯಿಂದ ಎರಡು ಮೈಲು ಪಶ್ಚಿಮಕ್ಕೆ ಇರುವ ಮಟ್ಟು ಗ್ರಾಮದಲ್ಲಿ ಬೆಳೆಯುವ ಎರಡನೇ ಬೆಳೆ ಗುಳ್ಳ. ಇಲ್ಲಿ ಬೆಳೆಯುವ ವಿಶಿಷ್ಟವಾದ ಈ ಗುಳ್ಳಕ್ಕೆ 'ಮಟ್ಟಿಗುಳ್ಳ' ಎಂದೇ ರಾಜ್ಯದಲ್ಲಿ ಹೆಚ್ಚೇಕೆ ಅಖಿಲ ಭಾರತ ಮಟ್ಟದಲ್ಲಿ ಹೆಸರು ಪಡೆದಿದೆ.

ಪೂರ್ವದಲ್ಲಿ ಉದ್ಯಾವರ ಹೊಳೆ–ಪಶ್ಚಿಮದಲ್ಲಿ ಅರಬ್ಬೀಸಮುದ್ರ, ಅಗಲ ಕಿರಿದಾದ ಈ ಹೊಯಿಗೆ ತುಂಬಿದ ಒಂದೂವರೆ ಮೈಲು ವಿಸ್ತೀರ್ಣದ ಏಕಮಾತ್ರ ಪ್ರದೇಶವೆ ಮಟ್ಟಿಗುಳ್ಳ ಬೆಳೆಯುವ ಸ್ಥಳ. ಇತರೆಡೆಗೆ ಈ ಬೀಜವನ್ನು ಬಿತ್ತಿದರೂ ಇಲ್ಲಿನ ಗುಳ್ಳದ ರುಚಿ ಅದಕ್ಕೆ ಬಂದಿಲ್ಲ. ಬಹಳ ಹಿಂದೆ ಈ ಪ್ರದೇಶದಲ್ಲಿ ಏನೂ ಬೆಳೆಯದೆ ಬಂಜರು ಭೂಮಿಯಾಗಿದ್ದಾಗ ಉಡುಪಿಯ ಶ್ರೀ ಶ್ರೀ ಸೋದೆ ವಾದಿರಾಜ ಸ್ವಾಮಿಗಳು ಭೇಟಿ ನೀಡಿ ಮಂತ್ರಿಸಿ ಕೊಟ್ಟ ಬೀಜದ ಫಲವೇ ಈ ಮಹಿಮಾಫಲ ಮಟ್ಟಿಗುಳ್ಳ. ಈ ಮಟ್ಟಿಗುಳ್ಳಕ್ಕೆ ಸರಿಸಾಟಿಯಾಗಿ ಪೆರಂಪಳ್ಳಿ ಎಂಬಲ್ಲಿ ಈ ಗುಳ್ಳದ ಬೆಳೆ ಬೆಳೆದರೂ ಈ ಮಟ್ಟಿ ಗುಳ್ಳದ ರುಚಿ ಈ ಪೆರಂಪಳ್ಳಿ ಗುಳ್ಳಕ್ಕೆ ಬಂದಿಲ್ಲ. ನೋಡಲಿಕ್ಕೆ ಯಾವ ವ್ಯತ್ಯಾಸ ಕಾಣದಿದ್ದರೂ ರುಚಿಯಲ್ಲಿ ವ್ಯತ್ಯಾಸ ಸ್ಪಷ್ಟವಾಗಿ ತಿಳಿಯುತ್ತದೆ.

ಗುಳ್ಳದ ಪಲ್ಯ, ಸಾಂಬಾರ್, ಮೆಣಸ್‌ಕಾಯಿ, ತಂಬಳಿ, ಅವೆಲು, ಕೊಡ್ಯಕ್ಕನ, ಉಪ್ಪಿನಕಾಯಿ ನೆನಸಿಕೊಂಡರೆ ಬಾಯಲ್ಲಿ ನೀರೂರುತ್ತದೆ. ಹಾಗೆಯೇ ರೊಟ್ಟಿ, ಪೋಡಿ, ವಾಂಗಿಬಾತ್ ಬಾಳಕ, ಹೀಗೆ ಹತ್ತು ಹಲವು ಚಪ್ಪರಿಸಿ ತಿನ್ನುವ ತಿಂಡಿಗಳು.ಯಾರಾದರೂ ಊಟ ಸೇರದವರು ಈ ಗುಳ್ಳದ ಗೊಜ್ಜಿನಲ್ಲಿ ಊಟ ಮಾಡಿ ನೋಡಿ ನೀವೊಬ್ಬರೇ ಸೇರಕ್ಕಿ ಅನ್ನ ಊಟ ಮಾಡುತ್ತೀರಿ. ವರ್ಷದ ಆರು ತಿಂಗಳು ವಿಫುಲವಾಗಿ ಸಿಗುವ ಗುಳ್ಳದಲ್ಲಿ ದಿನನಿತ್ಯವೂ ಊಟ ಮಾಡಿದರೂ ಮತ್ತೆ ಮತ್ತೆ ಸವಿಯಬೇಕೆಂಬಾಸೆ, ಏನೋ ಒಂದು ಆಕರ್ಷಣೆ ಈ ಮಟ್ಟಿ ಗುಳ್ಳಕ್ಕೆ ಇದೆ.

● ಗಂಗಾಧರ ಮಟ್ಟ

# ಔಂಸ್ರದ ಅಂತ್ರಾಯ್ಯ

● ಅ. ಬಾಲಕೃಷ್ಣ ಶೆಟ್ಟಿ ಪೊಳಲಿ

'ಶ್ರೀ ದೇವಿ ಪ್ರಸಾದ'
ಪರ್ಕಳ – 576 123, ದ.ಕ.

ಓಹೋ! ನಾನೂ ಅಂತ್ರಾಯ್ಯನಂತೆಯೇ ಔಂಸ್ರ ಮಾಡಿದ್ನೇ! ಅನಂತನಾರಾಯಣ ರಾವ್ ಎಂದು ವಿರಳ ವಿರಳವಾಗಿ ಬಿಡಿಸಿ ಹೇಳಿದರೆ ನಮ್ಮೂರಲ್ಲಿ ಯಾರಿಗೂ ತಿಳಿಯುವುದಿಲ್ಲ. ಪಟಾಕಿ ಪಕೀರಣ್ಣ, ಬಂಡಲ್ ಬಾಬಣ್ಣ, ಲಾಟ್ ಲಕ್ಕಣ್ಣ, ಗಪ್ಪಾಸ್ ಗಣಪಣ್ಣ, ತೆಡಿಲ್ ತಿಮ್ಮಣ್ಣ ಎಂದು ಹೇಳಿದರೆ ಮಾತ್ರ ವಿಳಾಸ ಸ್ಪಷ್ಟವಾಗುತ್ತದೆ. ಹೇಗೋ, ಹಾಗೆಯೇ ಔಂಸ್ರದ ಅಂತ್ರಾಯ್ಯ ಎಂದರೆ 'ಆರಾಮು' ರಾಮರಾಯರ ಮಗ ಅನಂತ ನಾರಾಯಣ ಎಂದು ಸರಿಯಾಗಿ ತಿಳಿಯುತ್ತದೆ.

ಆರಾಮ ರಾಮರಾಯರೆಂದರೆ ಒಂದು ಕಾಲ ದಲ್ಲಿ ಪ್ರಖ್ಯಾತ ಜಮೀನುದಾರರಾಗಿದ್ದ ಅನಂತಕೃಷ್ಣ ರಾಯರ ಏಕಮಾತ್ರ ಸುಪುತ್ರ. ಜೀವನವೆಲ್ಲ ಆರಾಮವಾಗಿದ್ದು ಇದ್ದ ಜಮೀನನ್ನೆಲ್ಲ ಕಳೆದು ಕೊಂಡವರು. ಆದರೆ ತನ್ನ ವಿಳಾಸ ಬರೆಯುವಾಗ ಮಾ।ರಾ। ಶ್ರೀ ರಾಮರಾಯರು, ಲೇಂಡ್ ಲೋರ್ಡ್ಸ್ ಎಂದೇ ಬರೆಯುತ್ತಾರೆ. ಲೋರ್ಡ್ಸ್ ಯಾಕೆ ಎಂದರೆ ಜಮೀನುದಾರರು ಎಂಬ ಬಹು ವಚನವಂತೆ. ಆದರೆ ಯಾವ ಚಿಂತೆಯೂ ಅವರನ್ನು ಬಾಧಿಸದೆ ಆರಾಮವಾಗಿಯೇ ಬಾಳಿದರು. ನನ್ನ ಮಗನ ಹುಟ್ಟು ಗುಣ ಆರಾಮ. 'ಆರಾಮ್ ಹರಾಮ್ ಹೈ' ಎಂದು ಯಾರೋ ಘೋಷಿಸಿ ದಾಗ ನಮ್ಮ ರಾಮು, "ಆರಾಮಾ ಹಾರಾಮಾ ಹಾಯ್ ಎಂದವ" ಎಂದು ಅನಂತಕೃಷ್ಣರಾಯರು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರಂತೆ. ತನ್ನ ಮೊದಲ ಮಗು ಗಂಡು ಮಗುವಾಗಬೇಕೆಂದು ಅವರು ಮಾತ್ರ ಅಲ್ಲ, ಅವರ ಪತ್ನಿ ರಾಧಮ್ಮನೂ ಆಸೆಪಟ್ಟಿದ್ದರಂತೆ. ಊರಿನ ಹಳೇ ದಾದಿ ಶತ



**ಏಳು ತಿಂಗಳು ಪೂರ್ತಿಯಾಗುವ ಮೊದಲೇ ತಾಯ ಗರ್ಭದಿಂದ ಧುಮ್ಮಿಕ್ಕಿದ ಅಂತ್ರಾಯ್ಣ ಬದುಕೆಲ್ಲ ಈ ವೇಗ-ಅವಸರ ಕಾಣಿಸಿದ.**

ಪ್ರಸೂತಿಕಾ ತಜ್ಞೆ ಕೂಸಮ್ಮನನ್ನು ಒಂದು ತಿಂಗಳ ಮೊದಲೇ ಮನೆಗೆ ತರಿಸಿಕೊಂಡಿದ್ದರಂತೆ. ಹತ್ತು ತಿಂಗಳು ಕಳೆದರೂ ಹೆರಿಗೆಯ ನೋವಿಲ್ಲ, ಇದೇನು ಹುಸಿ ಬಸಿರೇ? ಎಂದು ಹಿರಿಯರಿಗೆ ಚಿಂತೆ ಯಾಯಿತು. ವೈದ್ಯರಲ್ಲಿ ತೋರಿಸಿದರೆ, ಮಗು ಆರಾಮವಾಗಿ ಮಲಗಿದೆ. ಅದಕ್ಕೆ ಮನಸ್ಸಾದಾಗ ಹೆರಿಗೆಯಾಗುತ್ತದೆ. ಚಿಂತಿಸಬೇಡಿ. ಸಾವಿರದಲ್ಲಿ ಒಂದು ಹೀಗೂ ಆಗುವುದಿದೆ ಎಂದು ಮುಂದೆ ಹುಟ್ಟುವವ ಸಾವಿರಕೊಬ್ಬ ಸರದಾರ ಎಂದು ಭವಿಷ್ಯವಾಣಿ ನುಡಿದರಂತೆ. ಒಂದು ರಾತ್ರಿ ಯಾರಿಗೂ ತಿಳಿಯದಂತೆ ಮಗುವಿನ ಹೆರಿಗೆ ಯಾಯಿತು. ಮಗುವಿಗೆ ವಂಶದ ಹಿರಿಯರಾದ ಅಜ್ಜನ ಹೆಸರಿಟ್ಟರು. ಹೀಗೆ ಆರಾಮ ರಾಮ ರಾಯರ ಜನನವಾಯಿತು.

ಅವರ ಏಕೈಕ ಪುತ್ರನ ವಂಶವಾಹಿನಿಯೂ ಆಗಿ ಜನಿಸಿದವನೇ ನಮ್ಮ ಕಥಾನಾಯಕ ಅನಂತ ನಾರಾಯಣನೆಂಬ ಮಹಾನುಭಾವನು. ಹುಟ್ಟಿನಲ್ಲೇ ತಂದೆಗೆ ತೀರಾ ವಿರುದ್ಧ. ಮೊದಲ ಹೆರಿಗೆ ಸಂಭ್ರಮದಿಂದ ಸೀಮಂತಕ್ಕೆ ಎಲ್ಲ ತಯಾರಿಯ ಗದ್ದಲ ನಡೆಯುತ್ತಲೇ ಇತ್ತು. ಊರಿಗೆಲ್ಲ ಹೇಳಿಕೆ ಯಿತ್ತರು. ಮನೆಯೆದುರು ಚಪ್ಪರ ಎದ್ದಿತ್ತು. ಆದರೆ, ಹೆರಿಗೆಯ ದಾದಿಯೂ ಇಲ್ಲದೆಯೇ, ಏಳು ತಿಂಗಳು ಪೂರ್ತಿಯಾಗುವ ಮೊದಲೇ ತಾಯ ಗರ್ಭದ ಬಂಧನ ಕಳಚಿ ಮಗು ಭೂಮಿಗೆ ಬಿತ್ತು. 'ನೋಡೋ ಕಿಟ್ಟೂ, ನಿನ್ನ ಮಗ ನಿನ್ನ ಹಾಗಲ್ಲ. ತುಂಬ ಅವಸರದಲ್ಲಿ ಹುಟ್ಟಿದ್ದಾನೆ. ಮುಂದೆ ನೋಡಬೇಕು' ಎಂದು ಮಗುವಿನ ಅಜ್ಜ ಎಚ್ಚರಿಕೆ ಹೇಳಿದರಂತೆ. ಜಾತಕದಲ್ಲಿ ಏನು ಬರೆದಿದ್ದರೆಂಬು ದನ್ನು ಯಾರು ಯಾರಿಗೂ ಹೇಳದೆ ಗುಟ್ಟಾಗಿ ಇರಿಸಿಕೊಂಡಿದ್ದಾರಂತೆ.

ಆದರೆ ಅಜ್ಜನ ಊಹೆ ಸತ್ಯವಾಯಿತು. ಮಗು ಕವಚಿ ಬೀಳಲೇ ಇಲ್ಲ. ನೇರವಾಗಿ ನಾಲ್ಕು ಕಾಲು ಗಳಿಂದ ಮುಂದೆ ಮುಂದೆ ಹೋಗಿ ಆರು ತಿಂಗಳಲ್ಲಿ ನಡೆಯತೊಡಗಿತು. ಅಮ್ಮ ಅಪ್ಪ ಎಂದು ತೊದ ಲಿದ್ದೂ ಇಲ್ಲ. ವರ್ಷದೊಳಗೆ ಮಾತನಾಡಲು ಪ್ರಾರಂಭ. ತಂದೆ ತಾಯಿಗಳಿಗೆ ಸಂತೋಷವೋ ಸಂತೋಷ, ಊರವರಿಗೆ ಆಶ್ಚರ್ಯ. ಹೆದರಿದವರು ಅಜ್ಜಿ ರಾಧಮ್ಮ ಒಬ್ಬರೇ, 'ನಮ್ಮ ಅನಂತೂ ಯಾಕೆ ಹೀಗೆ ಅವಸ್ರ ಮಾಡ್ತಾನೆ, ರಾಮೂ! ಊರ ಜನ್ರ ದೃಷ್ಟಿ ಬಿದ್ರೆ ರಂಗೂಗೆ ಕಷ್ಟವಾಗ್ತದೆ,' ಎಂದು ಅವರು ನಿವಾಳಿಸಿದ್ದೇ, ನಿವಾಳಿಸಿದ್ದು. ಏನಾದರೇನು? what what happens what what time, happenಸೇ happens that that time ಏ ಎಂಬ ಮಾತಿನಂತೆ ನಡೆಯುತ್ತದೆ ಅಮ್ಮಾ ಎಂದು ಆರಾಮ ರಾಮರಾಯರು ತಾಯಿಗೆ ಬುದ್ಧಿ ಹೇಳಿದರು—ಎಲ್ಲ ಅವರವರು ಪಡೆದುಕೊಂಡು ಬಂದದ್ದು ಎಂಬ ತತ್ವೋಪದೇಶ ಬೇರೆ.

ಕೆಲವರು ಹುಟ್ಟಿದ ಗಳಿಗೆಯೇ ಹಾಗಿರುತ್ತದೆ. ಇಲ್ಲವಾದರೆ, ಇಪ್ಪತ್ತನಾಲ್ಕು ಗಂಟೆಯೂ ಸಾಕಾಗು ವುದಿಲ್ಲ ಎಂಬ ಗಡಿಬಿಡಿಯಲ್ಲಿ ಜಗತ್ತು ಓಡು ತ್ತಿರುವಾಗ, ಹಿಂದೆ ನೋಡಲೂ ಪುರುಸೊತ್ತು ಇಲ್ಲದಂತೆ ಯಾರೋ ಚಾಟಿ ಹಿಡಿದುಕೊಂಡು ಓಡಿಸುತ್ತಿದ್ದಾರೆ ಎಂಬಂತೆ ನಾಗಾಲೋಟದಲ್ಲಿ ಓಡುತ್ತಿರುವಾಗ, ಅದಾವುದರ ಗೊಡವೆಯೂ ಇಲ್ಲದಂತೆ ಆರಾಮವಾಗಿ ಇರಲು ಕೆಲವರಿಗೆ ಹೇಗೆ ಸಾಧ್ಯವಾಗುತ್ತದೆಯೆಂದು ನನ್ನಂಥವನಿಗೆ ಅಚ್ಚರಿ. ಜಗತ್ತನ್ನೇ ಹೊತ್ತು ಕೊಂಡವರಂತೆ ಅವಸರ ಮಾಡುವ ಕೆಲವರ ನಡುವೆ, ಸಾಕಷ್ಟು ಸಮಯಾವಕಾಶ ನಮ್ಮ ಮುಂದೆ ಇರುವಾಗ ಗಡಿಬಿಡಿ ಮಾಡುವುದು ಸಲ್ಲದು ಎನ್ನುವ ಸ್ಥಿತಪ್ರಜ್ಞರನ್ನು ಕಂಡಾಗ ಹೊಟ್ಟೆ ಉರಿಯುತ್ತದೆ. ಬೆಳಗ್ಗೆ ಹೇಳಿದ ಹೊತ್ತಿಗೆ ಸರಿಯಾಗಿ ಸೂರ್ಯ ಉದಯಿಸುತ್ತಾನೆ. ಆದರೆ ಸೂರ್ಯ ವಂಶದವ ರಾದ ಕೆಲವರು ಸೆಕೆಗಾಲದಲ್ಲಿ ಕಾಲಿನಿಂದ ತಲೆಯ ವರೆಗೆ ಪೂರ್ಣ ಕಂಬಳಿ ಹೊದ್ದುಕೊಂಡು ಒಂಬತ್ತೂ ವರೆಯ ವರೆಗೂ ಮಲಗುತ್ತಾರೆ. ಮತ್ತೆ ನಿಧಾನ ವಾಗಿ ಎದ್ದುಕೊಂಡು ಹತ್ತು ಗಂಟೆಗೆ ಪ್ರಾರಂಭ ವಾಗುವ ಆಫೀಸಿಗೆ ಹತ್ತೂವರೆಗೆ ತಲಪುತ್ತಾರೆ. ಈ ಮನುಷ್ಯ ಏನಾದಪ್ಪ ಎಂದು ಸಹೋದ್ಯೋಗಿ ಗಳು ಆತಂಕದಿಂದಿದ್ದರೂ ಇವರಿಗೆ ಏನೂ

ಆಗಿರುವುದಿಲ್ಲ. ದೂರದ ಊರಿನ ಪ್ರವಾಸ. ಟೀ ಕಾಫಿ ಕುಡಿಯಲಿಕ್ಕೆ ಹತ್ತು ನಿಮಿಷ ಎಂದು ಯಾವುದೋ ಊರಿನಲ್ಲಿ ಇಳಿಯಲಿಕ್ಕೆ ಕಂಡಕ್ಟರ್ ಹೇಳುತ್ತಾನೆ. ಇಪ್ಪತ್ತು ನಿಮಿಷ ಆದರೂ ಈ ಪುಣ್ಯಾತ್ಮರು ಬರುವುದಿಲ್ಲ. ಪ್ರಯಾಣಿಕರೆಲ್ಲ ಗಡಿಬಿಡಿ ಮಾಡುತ್ತಾರೆ. ಡ್ರೈವರ್ ಹಾರ್ನ್ ಹೊಡೆಯುತ್ತ ಇದ್ದಾನೆ. ಆದರೆ ಈ ಮಹಾಶಯ ಸಿಗರೇಟು ಸೇದುತ್ತ ನಿಧಾನವಾಗಿ ಏನೂ ಆಗಿಲ್ಲ ಎಂಬಂತೆ ಬಸ್ ಹತ್ತುತ್ತಾನೆ.

ನಾನೊಮ್ಮೆ ಸಂಜೆ ನನ್ನ ಸ್ನೇಹಿತನೊಬ್ಬನ ಮನೆಗೆ ಹೋಗಿದ್ದೆ. ನಾನು ಮನೆಯ ಒಳಗೆ ಹೋಗುತ್ತಿರುವಾಗಲೇ ಅವನ ತಮ್ಮ ಬೆನ್ನಿನಲ್ಲೊಂದು ಚೀಲಹಾಕಿಕೊಂಡು ಹೊರಗೆ ಬರುತ್ತಿದ್ದ. ಎಲ್ಲಿಗೆ ಎಂದು ಕೇಳಿದರೆ ಅಪಶಕುನ ಎಂಬ ನಂಬಿಕೆ ನಮ್ಮಲ್ಲಿ ಇನ್ನೂ ಇದೆ. ಹಾಗಾಗಿ ದೂರ ಎಂದು ಕೇಳಿದೆ. ದೂರ ಏನೂ ಇಲ್ಲ; ಮೈಸೂರಿಗೆ ಎಂದ. ಎಷ್ಟು ಹೊತ್ತಿಗೆ ಬಸ್ ಎಂದು ಮತ್ತೆ, ಪಾರ್ಲಿಮೆಂಟಿನಲ್ಲಿ ಉಪಪ್ರಶ್ನೆ ಕೇಳುತ್ತಾರಲ್ಲ, ಹಾಗೆ ಕೇಳಿದೆ. ಆರು ಕಾಲಕ್ಕೆ ಎಂದು ಹೊರಟ. ನನ್ನ ಕೈಗಡಿಯಾರದಲ್ಲಿ ಆಗಲೇ ಆರುಗಂಟೆ ಆಗಿತ್ತು. ಅಲ್ಲಿಂದ ಬಸ್ ನಿಲ್ದಾಣಕ್ಕೆ ಆಟೋ ಮಾಡಿ ಹೋಗುವುದಾದರೂ ಇಪ್ಪತ್ತು ನಿಮಿಷ ಬೇಕಿತ್ತು. ಏನೋ ನಿಮ್ಮ ತಮ್ಮ ಇಷ್ಟು ಹೊತ್ತಿಗೆ ಹೋದರೆ ಮೈಸೂರ್ ಬಸ್ ಸಿಗುತ್ತಾ ಎಂದು ನನ್ನ ಸ್ನೇಹಿತನಲ್ಲಿ ಕೇಳಿದೆ. ಅವನು ನಗುತ್ತ, ನನಗೇಕೋ ಅವನಿಗಿಲ್ಲದ ಚಿಂತೆ? ಆ ಬಸ್ ಯಾವಾಗಲೂ ತಡವಾಗಿಯೇ ಹೋಗುವುದಂತೆ ಎಂದ. ಇವನು ಹೋಗುವುದು ಡ್ರೈವರ್‌ಗೆ ಮೊದಲೇ ಗೊತ್ತೇ ಎಂದು ಮತ್ತೆ ಅಧಿಕಪ್ರಸಂಗ ಮಾಡಿದೆ. ಇದಕ್ಕೆ ಸ್ನೇಹಿತ ಉತ್ತರಿಸಲಿಲ್ಲ. ಇತರರ ಚಿಂತೆಗಳನ್ನು ಹೊತ್ತುಕೊಂಡು ತನ್ನ ರಕ್ತದೊತ್ತಡ ಹೆಚ್ಚಿಸಿಕೊಳ್ಳುವ ಪ್ರಾಣಿ ನಾನೆಂದು ಅವನೂ ಭಾವಿಸಿರಬೇಕು.

ಅದು ಇದೂ ಮಾತನಾಡಿ ಎಂಟು ಗಂಟೆಗೆ ಹೊರಡುವಾಗ, ಮೈಸೂರು ಮಹಾಶಯ ಬಾಗಿಲಲ್ಲಿ ಹಾಜರಿ. ಏನಯ್ಯಾ ಬಸ್ ತಪ್ಪಿತೇ ಎಂದರೆ ಇವತ್ತು ಡ್ರೈವರ್ ಚೇಂಜಾಗಿರಬೇಕು. ಚಿಂತಿಲ್ಲ, ನಾಳೆ ಹೋಗುತ್ತೇನೆ ಎಂದ. ಮರುದಿನವೂ ಹಾಗೆಯೇ ಆಯಿತೊ. ಅವನು... ಹೋಗಲಿಕ್ಕೆ ನನ್ನ ಅಪ್ಪಣೆ ಬೇಡ ತಾನೇ!

ಏನೋ ಹೇಳಲಿಕ್ಕೆ ಹೋಗಿ ಏನೋ ಹೇಳಿದೆ. ರಾಮನ ವರ್ಣನೆ ಮಾಡ ಹೋಗಿ ರಾವಣನ ಪರಾಕ್ರಮ ವರ್ಣಿಸಿದೆನೆಂದು ಕಾಣುತ್ತದೆ. ಆಗಲಿ, ಮತ್ತೆ ಅನಂತನಾರಾಯಣ ಪುರಾಣಕ್ಕೆ ಬರುತ್ತೇನೆ.

* * *

ದೊಡ್ಡ ನಗರದ ಪ್ರಖ್ಯಾತ ದೇವಾಲಯ. ಅದರ ಸುತ್ತ ಮುತ್ತ ಹಲವು ಕೃಪಾಗಳೂ ಕೆಲವು ಸದನಗಳೂ ಇವೆ. ಇವುಗಳಲ್ಲಿ ವರ್ಷಪೂರ್ತಿ ಶುಭ ಸಮಾರಂಭಗಳು. ಅದರಲ್ಲೊಂದರಲ್ಲಿ ಅಂತ್ರಾಯ್ಯನ ಸ್ನೇಹಿತನ ಭಾವನ ಮದುವೆ.




ಅಂಡೆದ ಬಾಯಿ ಆಂಡಲಾ ಕಟ್ಪೊಲಿ... ದೊಂಡೆದ ಬಾಯಿ....



ವಿಶ್ವ ಕಪ್ ಕ್ರಿಕೆಟ್ ಪ್ರಾರಂಭವಾಗಿರುವುದ ರಿಂದ ನಮಗೆ ಟ್ರಾಫಿಕ್ ಕಂಟ್ರೋಲ್ ಮಾಡೋದು ಕಡಿಮೆಯಾಗಿದೆ...

ಹನ್ನೆರಡು ಗಂಟೆಯ ಮದುವೆಗೆಂದು ಅವಸರವಸರವಾಗಿ ಹೋದ ಅಂತ್ರಾಯ್ನ ಮುಟ್ಟುವಾಗ ಹನ್ನೆರಡೂವರೆ. ಹೊರಗಿನಿಂದಲೇ ಇವರನ್ನು ಊಟಕ್ಕೆಳೆದುಕೊಂಡು ಹೋದರು, ಯಾರ್ರೋ. ಊಟಕ್ಕೆ ಕೂತಾಯ್ತು. ಆಚೀಚೆ ನೋಡಿದರೆ ಪರಿಚಯದವರು ಯಾರೂ ಕಾಣಿಸಲಿಲ್ಲ. ಸ್ನೇಹಿತನೂ ಕಾಣಲಿಲ್ಲ. ಇದೇನಪ್ಪಾ ಎಂದು ಯೋಚಿಸುವಾಗಲೇ ವಡೆ ಬಿತ್ತು ಎಲೆಗೆ. ಯಾರದೋ 'ಬೊಜ್ಜ'ದ ಊಟ. ದಕ್ಷಿಣೆಯೂ ಬಂತು. ಊಟಮಾಡಿ ಹೊರಗೆ ಬರುವಾಗ ಆಚೆಯ ಇನ್ನೊಂದು 'ಕೃಪಾ'ದಿಂದ ಸ್ವರ ಕೇಳಿಸಿತು. ಹೇಗೋ ತಲೆ ಮರೆಸಿ ಮನೆಗೆ ತಲುಪಲು ಸಾಕಾಗಿ ಹೋಯಿತಂತೆ!

ಅಂತ್ರಾಯ್ನನ ಅವಸ್ರದ ಫಜೀತಿಯನ್ನು ಅವನ ಖಾಸಾ ಧರ್ಮಪತ್ನಿ ಅಂಪಕ್ಕ (= ಅನ್ನಪೂರ್ಣಕ್ಕ) ಹೇಳುವುದನ್ನು ಕೇಳಬೇಕು.

ಒಂದು ಹೊಸತಾದ ಕಲ್ಯಾಣ ಮಂಟಪ, ಅದರಲ್ಲಿ ಒಂದು ಮದುವೆ. ಅಂತ್ರಾಯ್ನ ರಾತ್ರಿ ಹನ್ನೊಂದು ಗಂಟೆಗೆ ಸೈಕಲ್ ಸವಾರಿ ಮಾಡಿ ಹೊರಟ. ಎಲ್ಲಿಗೆಂದು ಕೇಳಿದರೆ ಮದುವೆಗೆ. ಈ ರಾತ್ರಿಯೇ ಎಂದರೆ ಹೌದು, ಹನ್ನೆರಡೂವರೆ ಗಂಟೆಗೆ ಎಂದ. ಇನ್ನರ್ಧಗಂಟೆಯಲ್ಲಿ ಸವಾರಿ ಮರಳಿ ಬಂತು. ಏನೆಂದು ಕೇಳಿದರೆ ಮದುವೆ ಕಾಗದದಲ್ಲಿ 12.30 p.m. ಎಂದಿದ್ದುದನ್ನು ಗಡಿಬಿಡಿಯಲ್ಲಿ ಓದಿ p.m. ಎಂದರೆ ರಾತ್ರಿಯೇ ಖಂಡಿತ ಎಂದು ನಿಶ್ಚಯ ಮಾಡಿ ಹೋದದ್ದಂತೆ. ಅಲ್ಲಿ ಹೋದರೆ ನರಪಿಳ್ಳೆಯೂ ಇರಲಿಲ್ಲವಂತೆ.

ಇವನ ಅವಸ್ರದಲ್ಲಿ ಅಂಪಕ್ಕ ಪಟ್ಟ ಕಷ್ಟ ಪರಂಪರೆಯೆಂದರೆ ಅವರ ಮಧುಚಂದ್ರ ಪ್ರವಾಸ. ಇದನ್ನು ತಿಳಿದ ಮೇಲೆ ನಿಮಗೆ ಅವನ ಮೇಲೆ ಸಹಾನುಭೂತಿ ಹುಟ್ಟದಿದ್ದರೆ ನಿಮ್ಮ ಎದೆ ಎಂಬುದು ಬಟ್ಟೆ ಒಗೆಯುವ ಕಲ್ಲು ಎಂಬುದರಲ್ಲಿ ಸಂದೇಹವಿಲ್ಲ. ಮದುವೆಯಾಗಿ ಆರು ವರ್ಷಗಳ ಅನಂತರ ಮೊದಲ ಬಾರಿ (?) ಮಧುಚಂದ್ರ ಪ್ರವಾಸವನ್ನು ಕರಾರಸಾಸಂ ಸುವಿಹಾರಿಯಲ್ಲಿ ಮಾಡಿದರು.

ಇವರು, ಹಾಸನದಲ್ಲಿ ಬಸ್ ನಿಂತಾಗ ಕೆಳಗಿಳಿದರು. ಒಂದೆರಡು ನಿಮಿಷ ಚಳಿಗಾಳಿಗೆ ಮೈ ಒಡ್ಡಿದರು. ಮತ್ತೆ ಮರಳಿ ಬಸ್ ಹತ್ತಿದರು. ಕಂಡಕ್ಟರ್ ಎಲ್ಲ ತಲೆನೋಡಿ ರೈಟ್ ಎಂದ. ಆರೆಂಟು ಕಿಲೋಮೀಟರ್ ಬಸ್ ಓಡಿತ್ತು. ಬಸ್ ಒಮ್ಮೆಲೇ ನಿಂತಿತು. ಯಾರೋ ಟ್ಯಾಕ್ಸಿಯಲ್ಲಿ ಬಂದು ಬಸ್ ನಿಲ್ಲಿಸಿದರಂತೆ. ಮೇಲೆ ಬಂದು ಡ್ರೈವರ್ ಕಂಡಕ್ಟರ್ ಇಬ್ಬರಿಗೂ ಬೈದರಂತೆ. ಆಮೇಲೆ ಇವರು ಕುಳಿತಲ್ಲಿಗೆ ಬಂದು, 'ಏನ್ರೀ! ನೀವು ಎಲ್ಲಿಗೆ ಹೋಗುವವರು ಎಂದು ಕೇಳಿದರಂತೆ. ಬೆಂಗಳೂರಿಗೆ? ಯಾಕೆ? ಎಂದು ಕಿಸೆಗೆ ಕೈಹಾಕಿ ತಮ್ಮ ಸೀಟ್ ನಂಬ್ರ ಸರಿಯಾಗಿಯೇ ಇದೆ ಎಂದರಂತೆ ಅಂತ್ರಾಯ್ನ. ಬಸ್ಸಿಗೆ ಬಸ್ಸೇ ಎಚ್ಚತ್ತು ನಗಾಡಿತಂತೆ. ಮಂಗಳೂರಿಗೆ ಹೋಗುವ ಬಸ್ ಇದು, ನೀವು ಇಳಿಯಿರಿ ಎಂದರಂತೆ. ಮೇಲೆ ನೋಡಿದರೆ ಅವರ ಪೆಟ್ಟಿಗೆಯೂ ಇಲ್ಲ. ಇಳಿಯದೆ ಉಪಾಯವಿರಲಿಲ್ಲ. ಅಂತೂ ಪ್ರಯಾಣದ ಮೊದಲ ಹಂತದಲ್ಲೇ 'ಪ್ರಥಮ ಚುಂಬನಂ ದಂತ ಭಗ್ನಂ' ಆಯಿತು. (ಉಳಿದ ವಿವರಗಳು ಪ್ರಕೃತ ಅನಾವಶ್ಯ!)

ಬೆಂಗಳೂರು ತಲಪಿದ ಮೇಲೆ ತನ್ನ ಸ್ನೇಹಿತನಿಗೆ ಫೋನ್ ಮಾಡಲೆಂದು ಕಿಸೆಗೆ ಕೈಹಾಕಿದ. ಏನನ್ನು ನೋಡುವುದು. ಸ್ನೇಹಿತನು ಬರೆದುಕೊಟ್ಟಿದ್ದ ವಿಳಾಸ ಮತ್ತು ಫೋನ್ ನಂಬರ್ ಇರುವ ಚೀಟಿಯನ್ನು ಬಸ್ ಇಳಿದ

ಕೂಡಲೇ ಮುದ್ದೆ ಮಾಡಿ ಬಿಸಾಡಿದ್ದ; ಬದಲಿಗೆ ಟಿಕೇಟನ್ನು ಚೆನ್ನಾಗಿ ಮಡಚಿ ಹಣದ ಪಾಕೀಟಿನಲ್ಲಿ ಭದ್ರವಾಗಿ ಇರಿಸಿದ್ದ. ಹೀಗಾಗಿ ಮಧುಚಂದ್ರ ಕಂಟಕಿಯಾಗಬಹುದಾಗಿದ್ದ ಮಿತ್ರನಿಂದ ಬಚಾವಾದೆನೆಂದು ಗಂಡನ ಅವಸರದ ಬುದ್ಧಿಗೆ ಮೊದಲನೆಯ ಬಾರಿ ಅಂಪಕ್ಕ ಕೃತಜ್ಞತೆ ಸಲ್ಲಿಸಿದರಂತೆ. (ಅದೇ ಕೊನೆಯ ಬಾರಿಯೂ ಹೌದಂತೆ!)

ಯಾವ ವಿಘ್ನವೂ ಇಲ್ಲದೆ ಮೂರು–ನಾಲ್ಕು ದಿನ ಬೆಂಗಳೂರನ್ನು ಹುಡಿ ಮಾಡಿದರು. ಒಂದು ದಿನ ಬಸ್ಸಿನಲ್ಲಿ ಹೋಗುವಾಗ ಬೆಂಗಳೂರಿನ ಯಾವುದೋ ಒಂದು ಕಡೆ ಕಿಲೋಮೀಟರ್ ಕಲ್ಲು ಮೈಸೂರು 14 ಎಂದು ತೋರಿಸುತ್ತಿತ್ತು. ಇವರ ಊರಿನ 'ವಿಶ್ವಕೋಶ' ಏಕೋಪಾಧ್ಯಾಯ ಶಾಲೆಯ ಮುಖ್ಯೋಪಾಧ್ಯಾಯರು ಹೇಳಿದ್ದರಂತೆ–ಬೆಂಗಳೂರಿನಿಂದ ಮೈಸೂರಿಗೆ ಹೋಗಿ ಬರಲು ಕಡಮೆ ಎಂದರೆ ಎರಡು ದಿನವಾದರೂ ಬೇಕು ಎಂದು. ಅಂತ್ರಾಯ್ಣ ಅದನ್ನು ಪೂರಾ ನಂಬಿದ್ದ. ಈ ಕಲ್ಲು ನೋಡಿದ ಮೇಲೆ ವಿಶ್ವಕೋಶದ ಮೇಲೆ ಅಸಾಧಾರಣ ಮತ್ತು ಅತ್ಯುಗ್ರ ಕೋಪ ಉಂಟಾಯಿತು. ಮನಸ್ಸಿನಲ್ಲೇ ಹಲವು ಬಗೆಯ ಶಾಪ ಇತ್ತ. ಅಂತೂ ನಾಳೆ ನಮ್ಮ ಟ್ರಿಪ್ ಮೈಸೂರಿಗೆ ಎಂದು ಉದ್ಘೋಷಿಸಿದ. ಅಂಪಕ್ಕನಿಗೆ ಬಹಳ ಕುಶಿಯಾಯಿತು. ಮರುದಿನ ಬೆಳಗ್ಗೆ ಎಂಟಕ್ಕೆ ಒಂದು ಟ್ಯಾಕ್ಸಿ ಕರೆದು ಮೈಸೂರಿಗೆ ಎಂದ. ಟ್ಯಾಕ್ಸಿ ಹೊರಟಿತು. ಅಂತ್ರಾಯ್ಣನ ಪ್ರಕಾರ ಇಪ್ಪತ್ತು ನಿಮಿಷದಲ್ಲಿ ಮೈಸೂರು ತಲುಪಬೇಕು. ಮಧ್ಯಾಹ್ನದವರೆಗೆ ತಿರುಗಿ ಬೇರೊಂದು ಟ್ಯಾಕ್ಸಿಯಲ್ಲಿ ಮರಳುವುದು ಅಥವಾ ಯಾರೋ ಹೇಳಿದಂತೆ, ಬಸ್ಸಿನಲ್ಲೇ ಮರಳುವುದು. ಈಗ ಅರ್ಧ ತಾಸು ಕಳೆದರೂ ಮೈಸೂರಿಲ್ಲ.

ಏಯ್, ನಿಲ್ಲಿಸಯ್ಯಾ. ಏನು! 14 ಕಿಲೋಮೀಟರ್ ಹೋಗಲಿಕ್ಕೆ ಅರ್ಧ ತಾಸೂ ಸಾಕಾಗುವುದಿಲ್ಲವೇ? ದಾರಿ ತಪ್ಪಿಸಿ ನಮ್ಮನ್ನು ಮಂಗ ಮಾಡುವ ಅಂದಾಜಾ? ಇಪ್ಪತ್ತೆಂಟು ರೂಪಾಯಿಗಿಂತ ಒಂದು ಪೈಸೆ ಕೂಡಾ ಹೆಚ್ಚು ಕೊಡುವ ಮಗನಲ್ಲ ನಾನು ಎಂದು ಅಂತ್ರಾಯ್ಣ ಆರ್ಭಟಿಸಿದ. ಅವನು ಟ್ಯಾಕ್ಸಿ ನಿಲ್ಲಿಸಿದ. ಹೊಸ ಊರು. ಅಂಪಕ್ಕನಿಗೆ ಭಯವಾಯ್ತಂತೆ. ಎಲ್ಲಾದರೂ ಜಗಳ ಪ್ರಾರಂಭವಾದರೆ ಎಂದು. ಆದರೆ ಆ ಡ್ರೈವರ್ ಒಳ್ಳೆಯವ. ಟ್ಯಾಕ್ಸಿ ನಿಲ್ಲಿಸಿದವನೇ



ಸ್ಕೋರ್ ಎಷ್ಟು ಸಾರ್?

'ಏಕ್‌ದಂ' ನಗತೊಡಗಿದನಂತೆ. ಸ್ವಾಮಿ, ಅದು ಯಾರೋ ಮಕ್ಕಳು ಮಾಡಿದ ತುಂಟತನವಿರಬೇಕು. ಮೈಸೂರು–ಬೆಂಗಳೂರು ದೂರ ಎಷ್ಟೆಂದು ಈ ಗೈಡ್‌ನಲ್ಲಿದೆ ಎಂದು ಸರಕಾರವೇ ಪ್ರಕಟಿಸಿದ ಹೊತ್ತಗೆ ಕೊಟ್ಟನಂತೆ. ಅವರು ಮೈಸೂರಿಗೆ ಹೋದರೋ ಅಥವಾ ಅಲ್ಲಿಂದಲೇ ಹಿಂದೆ ತಿರುಗಿದರೋ ಎಂದು ಇವತ್ತಿಗೂ ಯಾರಿಗೂ ಗೊತ್ತಿಲ್ಲ. ಯಾರಾದರೂ ಕೇಳಿದರೆ, ರಾಜಕೀಯದವರು ಮುಗುಳು ನಕ್ಕು No Comments ಅಂತಾರಲ್ಲಾ ಹಾಗೆ ಅಂಪಕ್ಕ ನಕ್ಕು ಬಿಡುತ್ತಾರೆ.

ಅಂತ್ರಾಯ್ಣ ಶುದ್ಧ ನೈಷ್ಠಿಕ ಬ್ರಾಹ್ಮಣನಾದರೂ ಹೊಟೇಲ್ ಊಟಕ್ಕೆ ಬಹಿಷ್ಕಾರ ಹಾಕಿದ ಪೈಕಿಯಲ್ಲ. ಅವನ ಇಂಗ್ಲಿಷ್ ಜ್ಞಾನವಂತೂ ದೇವರಿಗೇ ಪ್ರೀತಿ. ಇವೆರಡರ ಸಮ್ಮೇಳನದಿಂದಾಗಿ ಆದ ಫಜೀತಿಯನ್ನು ನಮ್ಮೂರಿನ ಪಟಾಕಿ ಫಕೀರಣ್ಣ ಹೇಳಬೇಕು. ಒಮ್ಮೆ ಅಂತ್ರಾಯ್ಣ ಅವನ ಸ್ನೇಹಿತನ ಮನೆಗೆ ಹೋದಾಗ ಅಯ್ಯಾ! ನೀನು ವೆಜ್ಜೋ, ನಾನ್ ವೆಜ್ಜೋ ಎಂದು ಸ್ನೇಹಿತ ಕೇಳಿದಾಗ, ಅಯ್ಯೋ ಪ್ಯೂರ್ ನಾನ್ ವೆಜ್ಜ್ ಎಂದನಂತೆ ಅಂತ್ರಾಯ್ಣ. ಇವನ ಹಾಸ್ಯಪ್ರಜ್ಞೆ ಮೆಚ್ಚಿದ ಅವನು ಓಹೋ ಹಿಂದೆ ನಾನು ಪ್ಯೂರ್

ವೆಜ್ಜ್ ಎನ್ನುತ್ತಿದ್ದೆ. ಈಗ ಹೀಗೋ ಎಂದು ಕೇಳಿದರೆ ಅಯ್ಯಾ, ನಾನಲ್ಲ, ನಮ್ಮಪ್ಪ ನಮ್ಮಜ್ಜ ಕೂಡಾ ಪ್ಯೂರ್ ನಾನ್‌ವೆಜ್ಜು ಎಂದನಂತೆ ಅಂತ್ರಾಯ್ಣ. ನಾನ್‌ವೆಜ್ಜ್ ಎಂದರೆ ತರಕಾರಿ ಎಂದೇ ಅಂತ್ರಾಯ್ಣ ನಂಬಿ ಹೇಳಿದ್ನೋ ಅಥವಾ ಮಿತ್ರನ ಮನೆಯಲ್ಲಾದರೂ, ನಟ್, ಬೋಲ್ಟ್ ಪರಿಚಯ ಮಾಡಿಕೊಳ್ಬೇಕು ಎಂದು ಹಾಗೆ ಹೇಳಿದ್ನೋ ಎಂದು ಇಂದಿಗೂ ತಿಳಿದಿಲ್ಲ. ಆದರೆ ಅವನ ಸ್ನೇಹಿತ ಅವಸ್ರದ ಪೈಕಿ ಅಲ್ಲವಾದ ಕಾರಣ ಇವನಿಗೆ ಪ್ಯೂರ್ ವೆಜ್ಜ್ ಬಡಿಸಿದಾಗ, ಹೌದ್ವಾದು! ಇದೇ ಪ್ಯೂರ್ ನಾನ್‌ವೆಜ್ಜು ಎಂದು ಅಂತ್ರಾಯ್ಣ ಸ್ನೇಹಿತನಿಗೆ ಶಹಭಾಸ್ ನೀಡಿ ಸಮಸ್ಯೆ ಬಗೆಹರಿಯಿತಂತೆ.

* * *

ಮೊನ್ನೆ ಮೊನ್ನೆ ಏನಾಯ್ತು ಗೊತ್ತೇ? (ಗೊತ್ತಿದ್ದರೆ ನಾನ್ಯಾಕೆ ಹೇಳ್ಬೇಕು, ಅಲ್ವೇ) ಅಂತ್ರಾಯ್ಣ ಮೊದಲ ಬಾರಿಗೆ ಒಂದು ಗುತ್ತೇದಾರಿ ವಹಿಸ್ಕೊಂಡ. ಭಾರತೀಯ ಹಾಸ್ಯ ಸಮ್ಮೇಳನವೊಂದನ್ನು ಸಮುದ್ರ ತೀರವೊಂದ್ರಲ್ಲಿ ಮೂರ್ಹಗ್ಲು ಮೂರ್ ರಾತ್ರಿ ಏರ್ಪಾಡು ಮಾಡಿದ್ರು. ಅದ್ರ ಊಟ ಉಪ್ಚಾರ್ದ ಹೊಣೆ ಅಂತ್ರಾಯ್ಣನಿಗೆ. ಶುಕ್ರವಾರ್ದಿಂದ ರವಿವಾರ್ದವರೆಗೆ. ಉಡ್ಪಿಯಲ್ಲಿ ಊಟ ತಯಾರ್ಸಿ ಸಮುದ್ರ ತೀರಕ್ಕೆ ಒಯ್ದು ಬಡಿಸ್ಬೇಕು. ಸರಿ. ಶುಕ್ರವಾರ ಮಧ್ಯಾಹ್ನ 500 ಜನಕ್ಕೆ ಊಟ ತಯಾರ್ಸಿ ಹೋದ್ರೆ ಅಲ್ಲಿದ್ದುದು ಎರಡೇ! ಸಮುದ್ರದ ತೆರೆಗ್ಳು ಮತ್ತು ಹ್ಯೊಗೆ ರಾಶಿ. ಹೀಗ್ಯಾಕಾಯ್ತು ಅಂತ ನೋಡಿದ್ರೆ—ನೋಡಿದ್ದು ಅಂದು ರಾತ್ರೆ ಮನೆಯಲ್ಲಿ ಸಮ್ಮೇಳನದ ಆಮಂತ್ರಣ ಪತ್ರವನ್ನು – ಆ ಕಾರ್ಯಕ್ರಮ ನಡೆಯಬೇಕಾಗಿದ್ದುದು ಮುಂದಿನ ಶುಕ್ರವಾರ ಅಂದ್ರೆ ಎಪ್ರಿಲ್ ಒಂದ್ರಂದು. ಆದ್ರೆ ವಾರ ನೆನ್ಪಿಟ್ಟುಕೊಂಡ ಅಂತ್ರಾಯ್ಣ ಮಾಡಿದ ಔಂಸರ ದಿಂದಾಗಿ ಆ ದಿನ ಭಾರಿ ಗಮ್ಮತ್ತಿನ ಊಟ— ಸರ್ಕಾರಿ ಆಸ್ಪತ್ರೆಯ ರೋಗಿಗಳಿಗೆ! ●

# ಸಂಘಟನೆಯ ಬೀಡು

ದಕ್ಷಿಣ ಕನ್ನಡ ಎಂದ ಕ್ಷಣ ನೆನಪಿಗೆ ಬರುವುದು ಸಂಘಟನೆ. ಇಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಸಂಘಟನೆ ಬಲವಾಗಿ ಬೆಳೆದಿದೆ. ಅಂದ ಹಾಗೆ ನೀವು ದ.ಕ. ದವರೆ ಅಥವಾ ದ.ಕ.ಕ್ಕೆ ಬರುವವರೆ ಹಾಗಾದರೆ ಒಮ್ಮೆ ಖಂಡಿತವಾಗಿ ಕುಪ್ಪೆಪದವಿಗೆ ಬನ್ನಿ. ಇದು ಮಂಗಳೂರಿನಿಂದ 30 ಕಿ.ಮೀ. ದೂರದಲ್ಲಿದೆ. ಇಲ್ಲಿಗೆ ಬಂದರೆ ನಿಮಗೆ ಯಾವ ರೀತಿಯಲ್ಲಿಯೂ ನಷ್ಟವಾಗದು. ಇಲ್ಲಿ ನಿಮ್ಮನ್ನು ಸ್ವಾಗತಿಸಿ, ಆದರಿಸುವ ಸೇವಾ ಮನೋಭಾವದ ಜನರಿದ್ದಾರೆ.

ಬಂದಾಗ ಇಲ್ಲಿ ಮಹಾವೀರ ಹೊಟೇಲಿನ ಮಸಾಲೆ ದೋಸೆಯ ರುಚಿಯನ್ನು ಸವಿಯಲು ಮಾತ್ರ ಮರೆಯಬೇಡಿ. ಅಗ್ಗದ ಬೆಲೆಗೆ ರುಚಿಯಾದ ತಿನಿಸುಗಳನ್ನು ಸುಮಾರು 50 ವರ್ಷಗಳಿಂದ ಇದು ಕೊಡುತ್ತ ಬಂದಿದೆ. ಇಲ್ಲಿ ಎಲ್ಲ ಆಧುನಿಕತೆಯೇ ತುಂಬಿದೆ ಎಂದು ಭಾವಿಸಿದರೆ ಅದು ನಿಮ್ಮ ತಪ್ಪು. ಇಲ್ಲಿ ಪರಶುರಾಮನಷ್ಟೇ ಹಳೆಯ, ಇತಿಹಾಸವಿರುವ ಬಾರ್ದಿಲ ಶ್ರೀ ಸಾಂಭ ಸದಾಶಿವ ದೇವರ ಆಲಯವಿದೆ. ಅಷ್ಟೇ ಅಲ್ಲದೆ ಇನ್ನೆರಡು ದೇವಾಲಯಗಳು, ಎರಡು ಮಸೀದಿಗಳು, ಒಂದು ಇಗರ್ಜಿ ಸಹ ಇದೆ. ಇಲ್ಲಿರುವ ಸಂಘಟನೆಗಳ ಪಟ್ಟಿ ಮಾಡಬೇಕಾದರೆ ಒಂದು ಇಡಿ ದಿನ ಬೇಕಾದೀತು. ಮುಖ್ಯವಾಗಿ ದುರ್ಗಾ ಯುವಕ ಮಂಡಲ, ಜೂನಿಯರ್ ಫ್ರೆಂಡ್ಸ್ ಕ್ಲಬ್, ನವಚೇತನ ಯುವಕ ವೃಂದ, ಪೌರ ಹಕ್ಕು ಹಿತ ರಕ್ಷಣ ವೇದಿಕೆ. ಅಷ್ಟೇ ಅಲ್ಲದೆ ಧಾರ್ಮಿಕ ರಾಜಕೀಯ ಎಂದು ಸುಮಾರು 25 ಸಂಘಟನೆಗಳಿರುವ ಸಮೃದ್ಧ ಊರು ನಮ್ಮದು. ಒಂದು ವೇಳೆ ಕುಪ್ಪೆಪದವು ದಾಟಿ ಮುಂದೆ ಬಂದಿರಾ ಜೋಕೆ! ಯಾಕೆಂದರೆ ರಸ್ತೆ ಕೆಟ್ಟಿದೆ. ಒಂದು ವೇಳೆ ಬಂದೆಬಿಟ್ಟಿರಿ ಎಂದಾದರೆ ಕುಪ್ಪೆಪದವು ನವಚೇತನ ಯುವಕ ವೃಂದದ ಗ್ರಾಮೀಣ ಯುವಕರು ನಿಮ್ಮನ್ನು ಸ್ವಾಗತಿಸಿ ಉಪಚರಿಸುತ್ತಾರೆ. ಇಲ್ಲಿ ಎಲ್ಲ ಮತ ಧರ್ಮದ ಜನರಿದ್ದರೂ ವಿವಿಧತೆಯಲ್ಲಿ ಏಕತೆ ಎನ್ನುತ ಒಟ್ಟಾಗಿ ದುಡಿಯುವ ಸಹೃದಯ ಜನ ನಮ್ಮಲ್ಲಿದ್ದಾರೆ. ದಯಮಾಡಿ ಸಂಘಟನೆಗಳ ಬೀಡಾದ ಈ ಊರಿಗೆ ಬರಲು ಮರೆಯದಿರಿ.

● **ಗಣೇಶ್ ನಾಯಕ್ ಬಾರ್ದಿಲ,**
ಕುಪ್ಪೆಪದವು

ಬೊಕ್ ಧಾರಾವಾಹಿ – 4

# ಶಾಲಿನಿ



● ಗೋಪಿ

ಶಾಲಿನಿ ತನ್ನ ಕಣ್ಣುಗಳನ್ನು ನಂಬದೆ ಮತ್ತೆ ಮತ್ತೆ ಅತ್ತಕಡೆ ನೋಡಿದಳು. ಹೌದು, ಸಂದೇಹವೇ ಇಲ್ಲ. ಅದು ದಿವಾಕರನೇ – ನೆನೆದವರ ಮನದಲ್ಲಿ ಎಂಬಂತೆ ಎದುರಿಗೆ ಪ್ರತ್ಯಕ್ಷನಾಗಿ ಬಿಟ್ಟಿದ್ದಾನೆ. ಶಾಲಿನಿಯ ಮನಸ್ಸಿನಲ್ಲಿ ಸಣ್ಣದಾಗಿ ಒಂದು ನವಿರುಸಂತಸವೆದ್ದಿತು. ಅವನೊಂದಿಗೆ ಹಾಯಾಗಿ–ಹರಟೆ ಹೊಡೆಯುತ್ತ ಎರಡು ದಿನ ಉಡುಪಿಯಲ್ಲಿ ಕಾಲ ಕಳೆದದ್ದು ನೆನಪಿಗೆ ಬಂದಿತು.

'ಹಾಯ್'–ಎನ್ನುವಂತೆ ಕೈಯೆತ್ತಿ ಹೇಳಿ ಅವನತ್ತ ನಡೆದುಬಂದಳು. ಅವನೂ ನಿಧಾನ ವಾಗಿ ಇವಳತ್ತ ಹೆಜ್ಜೆಹಾಕಿದ. ಶಾಲಿನಿ ಸುತ್ತಲೂ ನೋಡುತ್ತಲೇ ಬಂದಳು. ಇವರಿಬ್ಬರನ್ನು ಆ ಪಲ್ಲವಿ, ಸುಮನ, ಶ್ರೀಲತಾ, ವನಮಾಲ, ಪದ್ಮಾ ಹೀಗೆ ಯಾರಾದರೂ ನೋಡಿಬಿಟ್ಟರೆ?

'ಹಲೋ ಶಾಲಿನಿ, ವಾಟ್ ಎ ಸರ್‌ಪ್ರೈಸ್? ಹ್ಯಾಗಿದ್ದೀರಿ? ಉಡುಪಿ ನೆನಪು ಇದೇ ತಾನೇ?'



**ಉಡುಪಿಯ ಮಲ್ಪೆ ಸಮುದ್ರತೀರದಲ್ಲಿ, ಶ್ರೀಕೃಷ್ಣ ಸನ್ನಿಧಾನದಲ್ಲಿ ಹಾಡುತ್ತಿದ್ದ ಸುಂದರ ಹೆಣ್ಣು ಶಾಲಿನಿಯನ್ನು ಕಂಡಿದ್ದ ದಿವಾಕರ ಮೊದಲ ನೋಟದಲ್ಲೇ ಅವಳ ವ್ಯಕ್ತಿತ್ವಕ್ಕೆ ಮಾರುಹೋಗಿದ್ದ.**

**ಶಾಲಿನಿಯ ತಾಯಿ ಜ್ಯೋತಿಗೆ ತನ್ನ ಸಂಬಂಧಿಕ ಡಾಕ್ಟರ್ ಪ್ರತೀಕನನ್ನು ತನ್ನ ಮಗಳಿಗೆ ತಂದುಕೊಳ್ಳಬೇಕೆಂಬಾಸೆ.**

**ಶಾಲಿನಿಗೆ ದಿವಾಕರನ ನೆನಪು...**

ಎಂದು ಕೇಳಿದ ದಿವಾಕರ.

'ಓ, ಚೆನ್ನಾಗಿದೆ....' ಎಂದವಳು 'ಇದೀಗ ನಿಮ್ಮನ್ನ ನೆನಪು ಮಾಡಿಕೊಳ್ತಿದ್ದೆ'—ಎಂದು ಹೇಳಲು ಹೊರಟುಹೋಗಿದ್ದವಳು, ತಡೆದು, 'ಇದೇನಿದು, ಹುಡುಗಿಯರ ಕಾಲೇಜ್ ಮುಂದೆ ಓಡಾಡ್ತಿದ್ದೀರಿ?' ಎಂದಳು.

ದಿವಾಕರ ಅವಳನ್ನೆ ನೋಡಿದ. ಅವಳ ಮುಖದ ಮೇಲೆ ತುಂಟುನಗೆಯ ಭಾವ. ಗಾಳಿಗೆ ಹಣೆಗಿಳಿಯುತ್ತಿದ್ದ ಮುಂಗೂದಲನ್ನು ಹಿಂದಕ್ಕೆ ತಳ್ಳುತ್ತಿದ್ದಳು. ಅತಿ ಸೌಮ್ಯವಾಗಿ ಕಂಡರೂ ಕಿಲಾಡಿಯಾಗಿದ್ದಾಳೆ ಎಂದುಕೊಂಡ.

'ಯಾವುದೊ ಒಂದು ಹುಡುಗಿ ನೆನಪು ಬಂತು. ಅವಳೂ ಕಾಲೇಜ್ ಓದ್ತಿರೊ ಹುಡುಗಿ. ಈ ಬಣ್ಣಬಣ್ಣಗಳ ನಡುವೆ ಏನಾದ್ರೂ ಆ ಸುಂದರ ಮುಖ ಕಾಣಿಸತ್ತಾ ಅಂದುಕೊಂಡು ನಿಂತ್ಕೊಂಡೆ'—ಎಂದ ದಿವಾಕರ.

'ಓಹ್, ಹಾಗಾ? ಆ ಸುಂದರ ಮುಖ ಕಾಣಿಸ್ತಾ?' ಎಂದಳು ಶಾಲಿನಿ. ದಿವಾಕರ ಅವಳ ಮುಖವನ್ನು ಮತ್ತೂ ನೋಡಿ, ಸುತ್ತಲೂ ಒಮ್ಮೆ ನೋಡಿ ಹೇಳಿದ: 'ಒಂದು ಸುಂದರ ಮುಖ ಹುಡುಕ್ಕೊಂಡು ಬಂದ್ರೆ, ಇಲ್ಲಿ ಎಲ್ಲೆಲ್ಲೂ ಸುಂದರ ಮುಖಗಳೇ ಕಾಣಿಸ್ತಿವೆ'—ಎಂದ.

ಅವಳು ಒಂದು ಕ್ಷಣ ಸುಮ್ಮನಾದಳು. ಅವನ ಉತ್ತರ ತಮಾಷೆಯದ್ದೊ, ಗಂಭೀರವಾದ್ದೊ ಎಂದು ಯೋಚಿಸಿದಳು. ಈ ಗಂಡಸರೆಲ್ಲ ಹೀಗೆಯೇನೊ ಅಂದುಕೊಂಡಳು.

ಅವನು ಜೋರಾಗಿ ನಗತೊಡಗಿದ.

'ನಂಗೆ ಗೊತ್ತು. ನೀವು ಏನೇನೋ ಯೋಚ್ನೆ ಮಾಡ್ತಿದೀರಿ. ನಾನು ಸುಂದರ ಮುಖಗಳ್ನ ನೋಡೊಕ್ಕೆ ಇಲ್ಲಿ ನಿಂತಿದೀನಿ ಅಂತ ಅಂದು ಕೊಂಡುಬಿಟ್ಟಿರೇನೊ? ಇಲ್ಲ ಇಲ್ಲ, ನಾನು ನಿಮ್ಮನ್ನೆ ಹುಡುಕ್ಕೊಂಡು ಬಂದೆ. ನಿಮ್ಮನ್ನ ಕಂಡುಹಿಡಿಯೋಕೆ ಇಲ್ಲಿರೊ ಎಲ್ಲ ಮುಖಗಳನ್ನೂ ನೋಡಬೇಕಾಯ್ತು'—ಎಂದ.

ಅವಳಿಗೆ ಮತ್ತೂ ಆಶ್ಚರ್ಯ. ಇವನು ತನ್ನನ್ನೆ ಹುಡುಕಿಕೊಂಡು ಬಂದಿದ್ದಾನೆ. ಏಕೊ?

'ಇವತ್ತು ನಮ್ಮ ಸೋದರತ್ತೆ ಮನೆಗೆ ಹೋಗಿದ್ದೆ. ಪದ್ಮಾ ಕಾಲೇಜ್‌ಗೆ ಹೊರಟಿದ್ಳು. ಅವಳನ್ನ ನನ್ನ ಬೈಕ್‌ನಲ್ಲಿ ಕರೆದುಕೊಂಡು ಬಂದೆ. ಅವಳು ಒಳಗೆ ಹೋದ್ಳು. ಈ ಕಡೆ ನೀವು ಕಾಣಿಸಿದಿರಿ'—ಎಂದ.

ಇಬ್ಬರೂ ನಾಲ್ಕು ಹೆಜ್ಜೆ ಹಾಕಿ ಅಲ್ಲೆ ಇದ್ದ ಮರದಡಿಯ ಕಲ್ಲುಬೆಂಚಿನ ಮೇಲೆ ಕುಳಿತರು. ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಅನಿರೀಕ್ಷಿತವಾಗಿ ಒಬ್ಬರನ್ನೊಬ್ಬರು ಭೇಟಿ ಮಾಡಿದ್ದರಿಂದ ಮಾತನಾಡಲು ಏನೂ ವಿಷಯ ವಿರಲಿಲ್ಲ.

ಅವನೇ ಕೇಳಿದ: 'ಕ್ಲಾಸುಗಳು ಹ್ಯಾಗೆ ನಡೀತಿವೆ?'

'ಆ್ಯಸ್ ಯ್ಯೂಶುವಲ್ ನಡೀತಿದೆ. ನಾವು ತುಂಬಾ ಓದ್ಕೊಬೇಕು. ಕ್ಲಾಸುಗಳ ಮೇಲೆ ತುಂಬಾ ಡಿಪೆಂಡ್ ಆಗೋಕ್ಕಾಗೋಲ್ಲ'—ಎಂದಳು.

'ನಮ್ದು ಅದೇ ಗತಿ. ಮಧ್ಯೆ ಮಧ್ಯೆ ಸ್ಟ್ರೈಕು ಗಳು—ಬಂದುಗಳು—ಎಲೆಕ್ಷನ್‌ಗಳು ಬೇರೆ. ಕ್ಲಾಸುಗಳು ಸೀರಿಯಸ್ ಆಗಿ ನಡಿಯೋದೇ ಕಡಮೆ. ಹ್ಯಾಗೋ ತೇಲ್ತಾ ಇದ್ದೀನಿ'—ಎಂದ ದಿವಾಕರ.

ಮತ್ತೆ—'ನೀವು ಸೊಗಸಾಗಿ ಹಾಡ್ತೀರಿ. ಅವತ್ತು ಉಡುಪಿಲಿ ಹಾಡಿದ್ದು ಇನ್ನೂ ನನ್ನ ಕಿವಿಗಳಲ್ಲಿ ಗುಂಯ್‌ಗುಡುತ್ತಿದೆ. ನಿಮ್ಮ ಹಾಡನ್ನ

ಮತ್ತೆ ಮತ್ತೆ ಕೇಳ್ಬೇಕೂ ಅನ್ನಿಸ್ತಿದೆ. ಯಾವಾಗ ಆಪರ್ಚುನಿಟಿ ಕೊಡ್ತೀರಿ?' ಎಂದ.

ಅವಳಿಗೆ ಸಂಕೋಚ–ಸಂತಸ. ಅನೇಕರು ಅವಳ ಹಾಡುಗಾರಿಕೆಯನ್ನು ಮೆಚ್ಚಿದ್ದಿತ್ತು. ಆದರೆ, ದಿವಾಕರನ ಮೆಚ್ಚುಗೆ ಯಾಕೋ ಅವಳ ಯುವ ಹೃದಯದೊಳಗೆ ತೂರಿಕೊಂಡಿತ್ತು.

'ನಂಗೂ ಹಾಡೋದು ಇಷ್ಟ. ಹಾಡೋ ವಿಷಯದಲ್ಲಿ ಮಾತ್ರ ನಂಗೆ ಯಾವ ಸಂಕೋಚನೂ ಇಲ್ಲ. ಯಾವಾಗ್ಲಾದ್ರೂ ಪದ್ಮಾ ಮನೆಗೆ ಬಂದಾಗ ಹಾಡ್ತೀನಿ'.

'ಓಹ್, ಪದ್ಮಾ ಮನೆಗೆ ನಾನು ಬಂದು, ಆಗ ನೀವೂ ಇದ್ದು, ಹಾಡು ಕೇಳೋದು ಆಗೋ ಕೆಲ್ಸ ಅಲ್ಲ. ಬೇರೆ ಏನಾದ್ರೂ ಸಾಧ್ಯತೆ ಹೇಳಿ.'

'ತಿರುಗಿ ಉಡುಪಿಗೆ ಹೋಗ್ಬೇಕೇನೋ?' ಎಂದಳು ಶಾಲಿನಿ ಅವನ ಮುಖವನ್ನೆ ನೋಡುತ್ತ. ಅವನೂ ಗಹಗಹಿಸಿ ನಕ್ಕ. 'ಅಥ್ವ ಒಂದಿನ ನಾನೇ ನಿಮ್ಮನೇಗೆ ಬರ್ತೀನಿ. ಹಾಡು ಕೇಳ್ತೀನಿ' ಎಂದಾಗ ಅವಳು ಅರಳಿದಳು.

'ಓ, ಬನ್ನಿ, ಅದಕ್ಕೇನು. ನಮ್ತಂದೆ ತಾಯಿಗಳ್ನ ಇಂಟ್ರಡ್ಯೂಸ್ ಮಾಡಿಕೊಡ್ತೀನಿ. ಅವರೂ ಬೇಕಾದಷ್ಟು ಮಾತಾಡ್ತಾರೆ. ನಿಮಗೆ ಒಳ್ಳೆ ಕಂಪನಿ ಆಗ್ಬೋದು'–ಎಂದಳು.

'ನಾಡಿದ್ದು ಭಾನುವಾರ ಬೆಳಗ್ಗಿನ ಟಿಫನ್ನು ನಿಮ್ಮನೇಲೇ?' ಎಂದ ದಿವಾಕರ.

'ಓಯಸ್' ಬನ್ನಿ'–ಎಂದಳು ಶಾಲಿನಿ.

ಮಾತು ಮುಗಿಸಿ ದಿವಾಕರ ಎದ್ದು ಬ್ರೇಕ್‌ನಲ್ಲಿ ಕುಳಿತು ಕೈಬೀಸುತ್ತ ಹೋಗುವುದನ್ನೆ ನೋಡುತ್ತ ನಿಂತಳು. ದಿವಾಕರ ಅನಿರೀಕ್ಷಿತವಾಗಿ ಅವಳ ಆಲೋಚನೆಗಳಲ್ಲಿ ಸೇರಿಹೋಗಿದ್ದ. ಅಂದಿನ ತರಗತಿಗಳಲ್ಲಿ ಪಾಠದಲ್ಲಿ ಮನಸ್ಸನ್ನು ಬೆರೆಸಲು ಅವಳಿಗೆ ಸ್ವಲ್ಪ ಕಷ್ಟವೇ ಆಯಿತು.

ಸಂಜೆ ಕಾಲೇಜ್ ಮುಗಿಸಿಕೊಂಡು ಬಸ್ಸಿನಲ್ಲಿ ಕುಳಿತಿದ್ದಾಗ, ಕಿಟಕಿಯಿಂದ ತಂಗಾಳಿ ಬಂದು ಮುಖಕ್ಕೆ ಬಡಿದಾಗ, ಈ ದಿನ ದಿವಾಕರನನ್ನು ನೋಡಿ ತನ್ನ ಮನಸ್ಸೇಕೆ ಏನೇನೊ ಯೋಚಿಸುತ್ತಿದೆ, ಹೀಗೆಲ್ಲ ಏಕಾಗುತ್ತಿದೆ, ಇದೇನಿದು ಎಂದೆಲ್ಲ ಯೋಚಿಸುವಂತಾಯಿತು! ಬಹುಶಃ ತಾನು ಮೊದಲ ಬಾರಿಗೆ ಅತಿ ಹತ್ತಿರದಿಂದ ಸುಂದರ–ಮಾತುಗಾರ ಯುವಕನೊಂದಿಗೆ ಇದ್ದುದರಿಂದ ಹೀಗಾಗಿರಬಹುದು ಅನ್ನಿಸಿತು. ತನ್ನ ತಮ್ಮ, ತಮ್ಮನ ಸ್ನೇಹಿತರು, ತನ್ನ ಸಂಬಂಧದ ಹುಡುಗರು ಇವರೊಂದಿಗೆಲ್ಲ ಹರಟೆ ಹೊಡೆದಿದ್ದಾಳೆ. ಅವರಿಗೆ ಗುದ್ದಿದ್ದಾಳೆ, ತಲೆಯ ಮೇಲೆ ಮುಟುಕಿದ್ದಾಳೆ. ಆವಾಗೆಲ್ಲ ಏನೇನೂ ಅನ್ನಿಸಿರಲಿಲ್ಲ. ಆದರೆ, ಈಗ ದಿವಾಕರನ ಸಾಮಿಪ್ಯ ತನ್ನನ್ನು ಹೀಗೇಕೆ ಮಾಡುತ್ತಿದೆ?

ದಿವಾಕರನ ವ್ಯಕ್ತಿತ್ವದಲ್ಲಿ–ಮಾತುಗಾರಿಕೆಯಲ್ಲಿ ಯಾವುದೊ ಒಂದು ಮೆರುಗು ಇದೆ ಅನ್ನಿಸಿತು. ಅವನೊಂದಿಗೆ ಮಾತನಾಡುವ ಎಲ್ಲ ಹುಡುಗಿಯರಿಗೂ ಹೀಗೇ ಅನಿಸುತ್ತದೇನೊ? ಅಥವಾ ತನ್ನೊಂದಿಗೆ ಮಾತನಾಡುವಾಗ ಅವನಿಗೂ ಹೀಗೇ ಅನ್ನಿಸುತ್ತದೇನೊ?

ಹಾಗಂದುಕೊಂಡಾಗ ಅವಳ ದೇಹ ನವಿರಾಗಿ ಒಮ್ಮೆ ಕಂಪಿಸಿತು. ಅವಳ ಹೃದಯ ತನಗಿಷ್ಟವಾದ ಹಾಡುಗಳನ್ನು ಗಟ್ಟಿಯಾಗಿ ಹೇಳಿ



ಕೊಂಡಿತು. ಇವನ್ನೆಲ್ಲ ಅವನು ಕೇಳಿದ್ದರೆ ಇನ್ನೂ ಸಂತೋಷಪಡುತ್ತಿದ್ದನೇನೊ?

ಅವನು ತನ್ನ ಮನೆಗೇಕೆ ಬರುತ್ತಿದ್ದಾನೆ? ತನ್ನ ಹಾಡು ಕೇಳಲು ಬರುತ್ತಿದ್ದಾನೆಯೆ? ಅವನ ಮನಸ್ಸು ಏನೇನು ಯೋಚನೆ ಮಾಡಿದೆಯೊ? ತನ್ನ ಬಗ್ಗೆ ಅವನ ಅಭಿಪ್ರಾಯ ಹೇಗಿದೆಯೊ?

ದಿವಾಕರ ಎಲ್ಲರೊಂದಿಗೂ ಹೀಗೆಯೇ ನಡೆದುಕೊಳ್ಳಬಹುದು. ತಾನು ಇದಕ್ಕೆ ಏನೇನೊ ಅರ್ಥಗಳನ್ನು ಕಲ್ಪಿಸುತ್ತಿರಬಹುದು.

ಹೀಗಿದ್ದರೂ ಇರಬಹುದು, ಇರದಿದ್ದರೂ ಇರಬಹುದು ಎಂದೇ ಅಂದುಕೊಂಡಳು.

ದಿವಾಕರ ತಮಾಷೆಯಾಗಿ ಹೇಳಿದಂತೆ ಕಂಡಿದ್ದರೂ ಅವನು ಭಾನುವಾರ ಬೆಳಗ್ಗೆ ಅವಳ ಮನೆಗೆ ಬಂದೇಬಿಟ್ಟಿದ್ದ. ಬೆಲ್ ಆದದ್ದು ಕೇಳಿ ಶಾಲಿನಿ ಬಾಗಿಲು ತೆರೆದಾಗ—ಎದುರಿಗೆ ದಿವಾಕರನನ್ನು ಕಂಡು ಬೆಚ್ಚಿ ನಿಂತುಬಿಟ್ಟಳು. 'ಹಲೋ, ಗುಡ್ ಮಾರ್ನಿಂಗ್, ನಾನು ಬಂದಿದೀನಿ'—ಎಂದ ಅವನು ನಗುತ್ತ. 'ಓಹ್, ಬನ್ನಿ ಬನ್ನಿ'—ಎನ್ನುತ್ತ ಅವನನ್ನು ಸ್ವಾಗತಿಸಿದಳು.

ದಿವಾಕರ ಮನೆಯನ್ನೆ ನೋಡುತ್ತ ಒಳಗೆ ಬಂದು ಕುಳಿತ. ಶಾಲಿನಿಯ ತಂದೆ ಹರಿಪ್ರಸಾದ್ ಬಂದರು. 'ಪದ್ಮಾ ಫ್ಯಾಮಿಲಿ ಜೊತೆಗೆ ನಾನು ಉಡುಪಿಗೆ ಹೋಗಿದ್ನಲ್ಲ, ಅಲ್ಲಿ ಗುರುತಾದ್ರು. ಇಂಜಿನಿಯರಿಂಗ್ ಓದ್ತಿದಾರೆ...'—ಎಂದು ಶಾಲಿನಿ ತಂದೆಗೆ ಅವನನ್ನು ಪರಿಚಯಿಸಿದಳು. ಅವರಿಬ್ಬರೂ ಮಾತನಾಡುತ್ತ ಕುಳಿತರು.

ಶಾಲಿನಿ, ಅವಳ ತಾಯಿ ಜ್ಯೋತಿ ಫಲಹಾರಕ್ಕೆ ಅಣಿ ಮಾಡಿದರು. ಎಲ್ಲರೂ ಟೇಬಲ್ ಮುಂದೆ ಕುಳಿತು 'ಟಿಫನ್' ಮುಗಿಸಿದರು. ತಂದೆ—ದಿವಾಕರನ ಚರ್ಚೆ ಮುಂದುವರಿದೇ ಇತ್ತು.

ಜ್ಯೋತಿ ದಿವಾಕರನನ್ನೆ ನೋಡಿದಳು. ಹರಿಪ್ರಸಾದ್ ಅಂತೂ ಅವನ ವ್ಯಕ್ತಿತ್ವದಲ್ಲಿ ಕರಗಿಹೋದಂತಿತ್ತು. ಅವನ ಮಾತುಗಳಿಗೆ ಬೆರಗಾಗಿ ಆಗಾಗ ಸದ್ದುಮಾಡಿಕೊಂಡು ದೊಡ್ಡದಾಗಿ ನಗುತ್ತಿದ್ದರು. 'ದಿವಾಕರ್, ನೀವು ಮೆಡಿಕಲ್ ತೊಗೊಬೇಕಾಗಿತ್ತು. ನಾನು ನಿಮ್ಮನ್ನು ಒಳ್ಳೆ ಡಾಕ್ಟರ್ ಮಾಡ್ತಿದ್ದೆ'—ಎಂದು ಹರಿಪ್ರಸಾದ್ ಹೇಳಿದಾಗ—'ಇಲ್ಲ ಸಾರ್. ನಂಗೆ ಇಂಜಿನಿಯರಿಂಗ್ ತುಂಬಾ ಇಷ್ಟ. ನಂಗೆ ಈ ಪ್ರಕಾರದಲ್ಲಿ ಏನೇನೊ ಸಾಧಿಸ್ಬೇಕು ಅಂತಿದೆ'—ಎಂದ. 'ಗುಡ್, ಯೂ ಮಸ್ಟ್ ಬಿ ಆ್ಯಂಬಿಶಿಯಸ್'—ಎಂದವರು ಮೆಚ್ಚುಗೆ ಸೂಚಿಸಿದರು.

ಮಾತಿನ ನಡುವೆ ದಿವಾಕರ ಹೇಳಿದ—'ನಾನೊಬ್ಬ ಸಂಗೀತಪ್ರಿಯ, ಸಾರ್. ನಿಮ್ಮ ಡಾಟರ್‍ರು ಉಡುಪಿಯಲ್ಲಿ ಸೊಗಸಾಗಿ ಹಾಡಿದ್ರು. ಇನ್ನೊಂದ್ಸಲ ಅವರ ಹಾಡನ್ನು ಕೇಳ್ಬೇಕೂ ಅಂತ, ಅವರಿಗೆ ಹೇಳ್ಬಿಟ್ಟು ಇವತ್ತು ಬಂದಿದೀನಿ.'

ಹರಿಪ್ರಸಾದ್ ಶಾಲಿನಿಯ ಮುಖ ನೋಡಿದರು. ಶಾಲಿನಿ ಒಪ್ಪಿಗೆಯಿಂದ ತಲೆಯಾಡಿಸಿದಳು. ಜ್ಯೋತಿಗೇಕೋ ಒಂದು ರೀತಿ ಕಸಿವಿಸಿಯಾಗಿತ್ತು. ಇವನು ತನ್ನ ಮಗಳನ್ನು ನಿನ್ನೆ ಮೊನ್ನೆ ಮಾತನಾಡಿಸಿದ್ದಾನೆ. ಇವತ್ತು ಬರಲು ಒಪ್ಪಿಸಿಕೊಂಡಿದ್ದಾನೆ.

ಶಾಲಿನಿ ಹಾಡಿದಳು. ಹರಿಪ್ರಸಾದರಿಗೂ ಹಾಡೆಂದರೆ ಅಚ್ಚುಮೆಚ್ಚು. ತಲೆದೂಗುತ್ತ ಕುಳಿತುಬಿಟ್ಟರು. ಜ್ಯೋತಿಯೂ ಮಗಳ ಹಾಡುಗಾರಿಕೆಯಿಂದ ಸಂತೋಷಪಡುತ್ತಿರುವಂತಿತ್ತು. ದಿವಾಕರನಂತೂ ಯಾವುದೊ ಲೋಕದಲ್ಲಿ ತೇಲಾಡಿದ. ಅವನ ಮನಸ್ಸು ಆ ಹಾಡುಗಳ ನಡುವೆಯೂ ಏನೇನೊ ಭಾವನೆಗಳನ್ನು ಎಬ್ಬಿಸಿಕೊಂಡು ಕನಸು ಕಾಣುತ್ತಿತ್ತು.

ಹಾಡು ಮುಗಿದು ಇನ್ನೊಮ್ಮೆ ಕಾಫಿ ಆಗಿ ದಿವಾಕರ ಹೊರಟು ನಿಂತಾಗ—'ಆಗಾಗ ಬರ್‍ತಿರಿ, ದಿವಾಕರ್. ಹಾಡು ಕೇಳೋಕೆ ಮಾತ್ರಾ ಅಲ್ಲ. ನನ್ನ ಮಾತು ಕೇಳೋಕೂ ಬರ್‍ತಾ ಇರಿ. ಐ ವಿಲ್ ಬಿ ವೆರಿ ಹ್ಯಾಪಿ'—ಎಂದರು ಹರಿಪ್ರಸಾದ್. 'ಖಂಡಿತ ಬರ್‍ತೀನಿ ಸಾರ್'—ಎಂದ ದಿವಾಕರ.

ದಿವಾಕರ ಆ ಮನೆಯಿಂದ ಹೊರಟಾಗ ಏನೇನೊ ಆಸೆಗಳನ್ನು ತುಂಬಿಸಿಕೊಂಡು ಹೊರಟಿದ್ದ. ಶಾಲಿನಿ ಮರೆಯಾದರೂ ಅವನ ಹೃದಯದಲ್ಲಿ ತುಂಬಿಕೊಂಡು ಅವನ ಕಣ್ಣುಗಳೆದುರೇ ಇದ್ದಂತೆ ಅವನಿಗನ್ನಿಸಿತ್ತು.

ಶಾಲಿನಿ, ಹರಿಪ್ರಸಾದ್, ಜ್ಯೋತಿ ಅವನನ್ನು ಬೀಳ್ಕೊಟ್ಟು ಒಳಗೆ ಬಂದು ಕುಳಿತರು. 'ಗುಡ್ ಬಾಯ್. ನನಗೆ ಇವನ ಪರ್ಸನಾಲಿಟಿ ತುಂಬಾ ಇಷ್ಟವಾಯ್ತು'—ಎಂದರು ಹರಿಪ್ರಸಾದ್. ಅವರ ಆ ಮಾತಿನ ಹಿಂದೆ ಭವಿಷ್ಯದ ಆಲೋಚನೆಯೊಂದು ಮೂಡಿದ್ದಂತೆ ಖಚಿತವಾಗಿ ಜ್ಯೋತಿಗೆ ಅನ್ನಿಸಿತು.

ಶಾಲಿನಿ, ದಿವಾಕರನನ್ನು ತುಂಬಾ ಹಚ್ಚಿ

ಕೊಳ್ಳುವುದು. ಹರಿಪ್ರಸಾದ್ ಅವನನ್ನು ತುಂಬಾ ಮೆಚ್ಚಿಕೊಳ್ಳುವುದು. ತನ್ನ ಆಲೋಚನೆಗಳಿಗೆ ವಿರುದ್ಧವಾಗಿದೆ ಎಂದನ್ನಿಸಿತು ಅವಳಿಗೆ. ತನ್ನ ದೊಡ್ಡಪ್ಪನ ಮಗಳ ಮಗ ಪ್ರತೀಕ ಡಾಕ್ಟರಾಗಿ ಕ್ಲಿನಿಕ್ ತೆಗೆದು ಸಂಪಾದಿಸುತ್ತಿದ್ದಾನೆ. ಅವನಿಗೂ ಅವನ ತಂದೆತಾಯಿಗಳಿಗೂ ಶಾಲಿನಿ ಬಗ್ಗೆ ತುಂಬಾ ಆಸೆ ಇದೆ. ತನಗೂ ಆ ಸಂಬಂಧ ತುಂಬಾ ಇಷ್ಟ. ಶಾಲಿನಿಗೆ ಗಂಡನಾಗಿ ಪ್ರತೀಕ ನನ್ನು ಅನೇಕ ಸಲ ಕಲ್ಪಿಸಿಕೊಂಡು ಅವಳ ಮನಸ್ಸು ಅದಕ್ಕೆ ಒಗ್ಗಿಹೋಗಿತ್ತು.

ಮತ್ತೆ, ಪ್ರತೀಕ ಯಾವ ವಿಷಯದಲ್ಲೂ ತೆಗೆದುಹಾಕುವ ಹಾಗಿಲ್ಲ. ಬುದ್ಧಿವಂತ, ಡಾಕ್ಟರಾಗಿದ್ದಾನೆ, ದುಡಿಯುತ್ತಿದ್ದಾನೆ, ತಂದೆ ತಾಯಿ ಸ್ಥಿತಿವಂತರು, ಶಾಲಿನಿಯನ್ನು ತುಂಬಾ ಇಷ್ಟಪಡುತ್ತಿದ್ದಾರೆ.

ಅದೇ ದಿನ ಜ್ಯೋತಿ ಪ್ರತೀಕನಿಗೆ ಒಂದು ಕಾಗದ ಬರೆದು ಹಾಕಿದಳು: 'ಒಂದೆರಡು ದಿನದ ಪೂರ್ತಿ ಇಲ್ಲಿ ಬಂದು ಹೋಗು'.

ಶಾಲಿನಿ ಮತ್ತೆ ಕಾಲೇಜ್ ಚಟುವಟಿಕೆಗಳಲ್ಲಿ ಸೇರಿಹೋಗಿದ್ದಳು. ದಿವಾಕರನ ನೆನಪು ಒಂದೆರಡು ದಿನ ಕಾಡುತ್ತಿತ್ತು. ಅನಂತರ ತರಗತಿ, ಪಾಠ ಗಳು, ಗೆಳತಿಯರು, ಸಂಗೀತ ಪಾಠ ಅವಳನ್ನು ಸೆಳೆದುಕೊಂಡಿದ್ದವು.

ಒಂದು ಸಂಜೆ ಸಂಗೀತ ಪಾಠಕ್ಕೆ ಹೋಗಲು ಸಿದ್ಧಳಾಗಿ ಶಾಲಿನಿ ನಿಂತಿದ್ದಾಗಲೇ–'ಓ, ಪ್ರತೀಕ, ಬಾ ಬಾ'–ಎನ್ನುತ್ತ ತನ್ನ ತಾಯಿ ಸಂಭ್ರಮದಿಂದ ಕೂಗಿದ್ದನ್ನು ಕೇಳಿದಳು.

ಹಿಂದಿರುಗಿ ನೋಡಿದಾಗ–ತನ್ನ ತಾಯಿಯ ನಂಟ ಡಾಕ್ಟರ್ ಪ್ರತೀಕ ಬಾಗಿಲಲ್ಲಿ ಪ್ರವೇಶಿಸು ತ್ತಿರುವುದನ್ನು ಶಾಲಿನಿ ನೋಡಿದಳು. ●

(ಮುಂದಿನ...)



## ಬಹುಮಾನಿತ ಚಿತ್ರಕವನ

### *ಚಿತ್ರಕವನ ಸ್ಪರ್ಧೆ: 104*

# ಜಗದಗಲ ಏನಾದರೇನಂತೆ?

ಆಯಾಸದಿ ಕಣ್ಣುಗುಡ್ಡೆಗೆ ನೇರ ನೋಟ
ನನಗಾಗದೆ ನೋಡುವೆ ಭೂತಾಯ ಮೈಮಾಟ
ಚರ್ಮದಲಿ ಒಂದಾದ ಮೂಳೆ ಕಂಡು ನಗದೆ
ಕುತ್ತಿಗೆ ಮೇಲ ನೊಗವ ಕಿತ್ತೊಗೆವುದಿಲ್ಲ
ಎತ್ತಿದರೆ ಗೋಣು, ನಾಸಿಕದಲುರಿ
ಇದ್ದಾನಲ್ಲ ಸೂತ್ರದಾರ ಎಳೆದಾನು ಬಡಿದಾನು
ದುಡಿಯದೆ ಉಣ್ಣುವುದು ನನ್ನ ಜಾಯಮಾನವಲ್ಲ
ಕಸರತ್ತಿನ ಕಾಯಕ; ಸುಖ ನಿದ್ರೆಗೆ ದ್ವಾರ–ಕವೆ?
ಆಕಾಶದ ಉದ್ದ ಅಗಲ ಅಳೆದು
ಚಂದ್ರಲೋಕ ಹಾರಿ, ಗ್ರಹಗಳ ತೂರಿ
ಸ್ವಾರ್ಥದೊಡಲಿಗೆ ಏನೆಲ್ಲ ಮಾಡಿದಿರಿ.
ನನ್ನೊಡಲ ನೋಡಿ, ಕಾಣುವುದೆ ಮೂಳೆ
ಜೋತು ಬಿದ್ದರೂ ಸೋತು ಹೋದೇನೆ?
ಕೊರಳಿನ ಕಿಣಿಕಿಣಿ ನಾದ, ಪುಟುಪುಟು ಗೊರಸಿನ ಸ್ವಾದ
ಮೆಚ್ಚಿ ತಲೆ ತೂಗಿ ಮೈಮರೆತರೆ ಹೇಗೆ?

2

ಹೊಂಚು ಹಾಕಿ ಸಂಚು ಹೂಡಿದ ಆಕ್ರಮಣವೆ
ದೇಶದೇಶಕೂ ಯುದ್ಧದ ಭೂತವೆ
ನೀವೆ ಕಂಡುಣ್ಣುವ ವಿಜ್ಞಾನ
ನಿಮ್ಮುಸಿರ ಅಜ್ಞಾನದ ಬರಗಾಲದ ಬಿರುಕೆ
ಎಣ್ಣೆ ಬಾವಿಗೆ ಬೆಂಕಿ ಬಿದ್ದಿತೊ, ಇಟ್ಟಿರಾ!?
ಜಗದಗಲ ಏನಾದರೇನಂತೆ
ನೊಗತೊರೆದು ನಿರಾಳ ಉಸಿರಾಡೆನು ನಾನೆಂದು

● ಶ್ರೀಮತಿ ಮುರಳಿ

## ನಳಿನಿ ಕುಲಕರ್ಣಿ ಅವರ

# ಹಸ್ತಕಲಾಶಿಲ್ಪ ಸಂಸ್ಕೃತಿ

● ಎನ್ಕೆ

**ಯೋ**ಗಃ ಕರ್ಮಸು ಕೌಶಲಂ! ಇಂತಹ ಯೋಗ ಸಿದ್ಧಿ ಕುಲಕರ್ಣಿ ದಂಪತಿಗಳದು. ಶ್ರೀ ಎಚ್. ಎಸ್. ಕುಲಕರ್ಣಿ ಯಂತ್ರ ಶಿಲ್ಪಿ, ಕಲಾಶಿಲ್ಪಿ; ಅವರ ಶ್ರೀಮತಿ ಕುಶಲಕಲೆಯ ಕೈಗಾರಿಕೆಯಲ್ಲಿ ಪರಿಣತಿ, ಪರಿಪೂರ್ಣತೆ ಸಾಧಿಸಿದವರು.'Spirit of perfection and order' ಇವು ಮಹಾಸರಸ್ವತಿಯ ಲಕ್ಷಣಗಳೆಂದು ಶ್ರೀ ಅರವಿಂದರು ಹೇಳಿದ್ದಾರೆ. ಇನ್ನು, 'ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ' ಎಂಬುದು ನಮ್ಮ ಲೋಕೋಕ್ತಿ. ಹೀಗೆ ಕುಲಕರ್ಣಿ ದಾಂಪತ್ಯವೆಂದರೆ ಲಕ್ಷ್ಮೀ ಸರಸ್ವತಿಯವರ ಸಹಯೋಗ–'a marriage of Science and Art' ಎಂದು ನಾಟಕಕಾರರೊಬ್ಬರು ಹೇಳಿರುವಂತೆ.

ಬಾಟಿಕ್‌ನಲ್ಲಿ ಮೈದೋರಿದ ರಜಪೂತ ತರುಣಿ



ಯಾತನೆಯ ಬದುಕು ಒಂದು ಯಜ್ಞವಾದಾಗ ಮಾತ್ರ ಕಷ್ಟ ಜೀವನದ ಕಣ್ಣೀರಿಗೆ ಕಲ್ಲುಸಕ್ಕರೆಯ ಸವಿ. ಇಂದು ಶ್ರೀಮತಿ ನಳಿನಿ ಅವರ ಬಹುಮುಖ ಪ್ರತಿಭೆಯ ಭಾವ ಸೃಷ್ಟಿ ಅವರ ಶ್ರಮ ಜೀವನದ ಸುಗಂಧ ಕುಸುಮವಾಗಿ ಅರಳಿದೆ.

ಇವರ ಮನೆ 'ಆಶ್ರಯ', ಒಂದು ಆರ್ಟ್ ಗ್ಯಾಲರಿ ಆಗಿದೆ. ಅದರಲ್ಲಿ ಸೌ। ನಳಿನಿ ಅವರ

> **ಯಾತನೆಯ ಬದುಕು ಒಂದು ಯಜ್ಞವಾದಾಗ ಮಾತ್ರ ಕಷ್ಟ ಜೀವನದ ಕಣ್ಣೀರಿಗೆ ಕಲ್ಲುಸಕ್ಕರೆಯ ಸವಿ.**

ರಸಹಸ್ತ ಸ್ಪರ್ಶಿತವಾಗಿ ಉದ್ಭವಿಸಿದೆ 'ಆಕೃತಿ' ಎಂಬ ಅವರ ಕಲಾ ಮಂದಿರ. ಈ 'ಆಕೃತಿ'ಯಲ್ಲಿ ಸುಮಾರು ಮೂವತ್ತು ಪ್ರಕಾರಗಳ ಹಸ್ತಕಲಾ ಶಿಲ್ಪಗಳು ಕಲಿಸಲ್ಪಡುತ್ತವೆ. ಇಲ್ಲಿ ಪ್ರತಿದಿನ ಕನಿಷ್ಟ ಇಪ್ಪತ್ತು ಮಹಿಳೆಯರಿಗೆ ಬೋಧಿಸಲ್ಪಡುವ ಈ ವಿವಿಧ ಕುಶಲ ಕೈಗಾರಿಕೆಗಳ ತರಬೇತಿ ಅವರನ್ನು—ಅದರಲ್ಲೂ ಅಂಗವಿಕಲರನ್ನು, ಅನಾಥ ಅಬಲೆಯರನ್ನು—ಆರ್ಥಿಕವಾಗಿ ಸ್ವಾವಲಂಬಿಗಳಾಗಿ ಸಂಸಾರ ನೌಕೆಯನ್ನು ಸಾಗಿಸಿಕೊಂಡು ಹೋಗಲು ಸಮರ್ಥರನ್ನಾಗಿ ಮಾಡುತ್ತದೆ. ಇದುವರೆಗೆ ಸುಮಾರು 500 ಮಹಿಳೆಯರು ಈ ತರಬೇತಿಯಿಂದ ಆರ್ಥಿಕವಾಗಿ ಸ್ವಯಂಪೂರ್ಣರಾಗಿದ್ದಾರೆ.

ಸೌ। ನಳಿನಿ ಮತ್ತು ಪರಿವಾರದ ಮನೆಯೆ ಒಂದು ಕಲಾ ಪ್ರಯೋಗ ಶಾಲೆ. ಅವರ ಮಗಳು ಕು। ಆರತಿ ಮರದಿಂದ ರಾಸಾಯನಿಕ ದ್ರವ್ಯದ ಮಾಧ್ಯಮದಿಂದ ಸುಂದರ ಆಕೃತಿಗಳನ್ನು ಸೃಷ್ಟಿಸಿದ್ದಾರೆ. ಅವರ ಚಿರಂಜೀವ ತಂದೆಯಂತೆ ಎಂಜಿನಿಯರ್ (B.E.) ಆಗಿಯೂ ತಂದೆಯಂತೆಯೆ ಕಲಾಸಕ್ತ ಜೀವಿ. ಅವರ ಮನೆತನವೆ ಕಲೆಯ ಕುಲವೆಂದರೆ ತಪ್ಪಲ್ಲ; ಕಲೆಯೆ ಕುಲಕರ್ಣಿ ಮನೆತನ. ಏಕೆಂದರೆ ನಳಿನಿ ಅವರಿಗೆ ಚಿಕ್ಕಂದಿನಲ್ಲಿ ತಂದೆ, ತಂದೆಗಿಂತ ಹೆಚ್ಚಾಗಿ ಅಜ್ಜ ಮಗಳ, ಮೊಮ್ಮಗಳ ಚಿತ್ರಕಲಾ ಪ್ರತಿಭೆಗೆ ಮೆಚ್ಚಿ

ಒಂದು ಪೇಂಟಿಂಗ್



ಸಾಕಷ್ಟು ಉತ್ತೇಜನ ಕೊಟ್ಟರು. ಶಾಲಾ ವಿದ್ಯಾರ್ಥಿನಿ ನಳಿನಿಯ ಒಂದು ಜಲವರ್ಣಿಕೆ (Water Painting)ಗೆ ಬಹುಮಾನ ದೊರೆತಾಗ ಅಜ್ಜ ಮೊಮ್ಮಗಳಿಗೆ ಒಂದು ಪೇಂಟಿಂಗ್ ಬಾಕ್ಸ್ ಪ್ರಸೆಂಟ್ ಮಾಡಿದರು. ಮಧ್ಯಮ ತರಗತಿಯ ಮಳಗಿ ಮನೆತನದ ತಂದೆಗೆ ಏಳು ಜನ ಮಕ್ಕಳು! ಹೀಗಾಗಿ ಸಾದಾ ಸೀದಾ ಜೀವನ ಪರಿಸರದಲ್ಲಿ ಬೆಳೆದರು. ಆದರೂ ಪ್ರತಿಭೆಯೆಂಬುದು ಸಿರಿತನ—ಬಡತನಗಳನ್ನು ನೋಡುತ್ತದೆಯೆ? ಜಲವರ್ಣಿಕೆ, ತೈಲವರ್ಣಿಕೆಗಳಲ್ಲದೆ ಕಳಪೆ ವಸ್ತುಗಳನ್ನು ಕಲಾಕೃತಿಗಳನ್ನಾಗಿ ಮಾರ್ಪಡಿಸುವ ಮಂತ್ರಸಿದ್ಧಿ ನಳಿನಿ ಅವರ ಹಸ್ತದಲ್ಲಿ ಅಥವಾ ಹಸ್ತರೇಖೆಯಲ್ಲಿ. ಸಾದಾ ಪರಿಸ್ಥಿತಿಯಲ್ಲಿಯೆ ಪದವೀಧರೆಯಾದ ನಳಿನಿ 'ರತ್ನಂ ಸಮಾಗಚ್ಛತು ಕಾಂಚನೇನ' ಎಂಬಂತೆ ಒಂದು ಪ್ರತಿಭೆ ಇನ್ನೊಂದು ಬಹುಮುಖ ಪ್ರತಿಭೆಯ ಪಾಣಿಗ್ರಹಣ ಮಾಡಿತು. (ಸು. 1960) ಬಿ.ಇ. ಎಂಜಿನಿಯರ್ ಆದ ಶ್ರೀ ಎಚ್. ಎಸ್. ಕುಲಕರ್ಣಿ ಅವರ ಕೈ ಹಿಡಿದ ಮೇಲೆ ಸೌ। ನಳಿನಿ ಅವರ ಚಿತ್ರಕಲೆಯ ಚೈತ್ರವೆ ತೆರೆಯಿತು. ಒಂದೊಂದು ಪ್ರಕಾರದ ಚಿತ್ರಕಲೆ ಚೂತ ವೃಕ್ಷದಂತೆ ಚಿಗುರಿ ಅರಳತೊಡಗಿತು.

1960ರಲ್ಲಿ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ನಡೆಸಿದ ಚಿತ್ರಕಲಾ ಪ್ರದರ್ಶನದಲ್ಲಿ ಸೌ। ನಳಿನಿ ಅವರ ತೈಲಚಿತ್ರಕ್ಕೆ ಮೂರನೆಯ ಬಹುಮಾನ—ಪ್ರಶಸ್ತಿಗಳ ಮೊದಲನೆಯ ಮೈಲುಗಲ್ಲು. ಮುಂದೆ ಶ್ರೀ ಎಚ್. ಎಸ್. ಕುಲಕರ್ಣಿ ಅವರು 1971ರಲ್ಲಿ ಜಮ್‌ಶೆಡ್‌ಪುರದ ಟೆಲ್ಕೊ ಕಂಪೆನಿಯಲ್ಲಿ ಎಂಜಿನಿಯರ್ ಹುದ್ದೆ ಸ್ವೀಕರಿಸಿ ಅಲ್ಲಿಗೆ ಸ್ಥಳಾಂತರಿಸಿದ ಮೇಲೆ ದಂಪತಿಗಳ ಕಲಾಜೀವನದ ಮಧುಮಾಸ. ಉಭಯತರಲ್ಲಿ ಸುಪ್ತವಾಗಿದ್ದ ನಾಟ್ಯ ಕಲೆ ಕಲಕತ್ತೆಯಲ್ಲಿ ಕನ್ನಡ ನಾಟಕಗಳ ಪ್ರಯೋಗ ದ್ವಾರಾ ಹೊರಹೊಮ್ಮಿತು. ಅದೇ ಸಂದರ್ಭದಲ್ಲಿ ಸೌ। ನಳಿನಿ ಶಾಂತಿನಿಕೇತನದ ರವೀಂದ್ರ ಕಲಾ ಕ್ಷೇತ್ರದಲ್ಲಿ "ಡೆಕೊರೇಟಿವ್ ಆರ್ಟ್ಸ್ ಕೋರ್ಸ್"ನ ಎರಡು ವರ್ಷಗಳ ಸರ್ಟಿಫಿಕೇಟ್ ಕೋರ್ಸ್ ಮುಗಿಸಿದರು. "ಅದರಿಂದಾಗಿ ನನ್ನ ಕರಕುಶಲ ಕೈಗಾರಿಕೆಗೆ ಒಂದು ಭದ್ರವಾದ ಶಾಸ್ತ್ರೀಯ ತಳಹದಿ ಉಂಟಾಯಿತು" ಎಂದು



ಎಚ್. ಎಸ್. ಕುಲಕರ್ಣಿ ಮತ್ತು ಸೌ। ನಳಿನಿ

ಹೇಳುತ್ತಾರೆ—ಸೌ। ನಳಿನಿ. ಆಮೇಲೆ ಚಿತ್ರಕಲಾ ಪ್ರತಿಭೆ ಗಂಗೋತ್ರಿಯಿಂದ ಹಿಮಾಲಯದ ಕೆಳಗೆ ಧುಮುಕುವ ಗಂಗೆಯಂತೆ ವಿಧವಿಧದ ಮಾಧ್ಯಮ ಗಳನ್ನು ಹುಡುಕಿಕೊಂಡು ಬಹುರೂಪೀ ಕಲೆ ಯಾಗಿ ಆವಿಷ್ಕಾರ ಹೊಂದತೊಡಗಿತು. ಪ್ರದರ್ಶನಗಳ ಮೇಲೆ ಪ್ರದರ್ಶನಗಳು! ಪ್ರಶಸ್ತಿಗಳ ಮೇಲೆ ಪ್ರಶಸ್ತಿಗಳು! ಬಟ್ಟೆಯ ಮಾಧ್ಯಮ ದೊರಕಿದರೆ 'ಬಾಟಿಕ್ ಪೇಂಟಿಂಗ್' ಆಗುವುದು, ಅಲ್ಯೂಮಿನಿಯಂ ಅಥವಾ ತಾಮ್ರದ ಹಾಳೆಗಳು ದೊರಕಿದರೆ 'ಫಾಯಿಲ್ ಎಂಬಾಸಿಂಗ್' ಆಗಿ ವಿವಿಧ ಪೌರಾಣಿಕ ದೇವ ದೇವತೆಗಳ ಆಕೃತಿಯಾಗಿ ಉಬ್ಬುವುದು. ಥರ್ಮೊಕೋಲ್‌ನಂಥ ಪ್ಯಾಕಿಂಗ್ ಸಾಮಗ್ರಿ ದೊರಕಿದರೆ ಅದು ಪಲ್ಪ್ ಆದೀತು. ವಿವಿಧ ಬ್ರಹ್ಮ ಸೃಷ್ಟಿಯ ಜೀವ ಜೀವಂತ ವಸ್ತುಗಳಾಗಿ ಶಿಲ್ಪ ವೈವಿಧ್ಯದಲ್ಲಿ ಹುಟ್ಟುಗೊಂಡೀತು. ಮರದ ಕಟ್ಟಿಗೆಯಾದರೆ ಆ್ಯಸಿಡ್ ಮಾಧ್ಯಮದಿಂದ ನಿರಾಕಾರದಲ್ಲಿ ಸಾಕಾರವು ಮೊಗ ಪಡೆಯು ವುದು. ಕಸೂತಿ—ಹೆಣಿಗೆಗಳ ಮಾಧ್ಯಮ, ಉಣ್ಣೆ (ಲವಕರಿ ತುಣುಕುಗಳು) ರಂಧ್ರಗಳ ರಟ್ಟಿನಲ್ಲಿ ಸುಂದರ ನಾಯಿ—ಬೆಕ್ಕುಗಳಾದೀತು. ಎಲ್ಲಾ ಹೋಗಲಿ ಸಾದಾ ಇದ್ದಿಲುಪುಡಿಯ ಮಾಧ್ಯಮವು ಜೀವಂತ ಮಾನವಾಕೃತಿಗಳಾಗಿ ಅರಳೀತು. ಇನ್ನೂ ಇತರ ಕಲಾಕೃತಿಗಳೆಂದರೆ—ಮ್ಯಾಕ್ರೇಮ್ ಫೈಬರ್ ಡೆಕೊರೇಟಿವ್ಸ್, ಅಪ್ಲಿಕ್, ಅಲ್ಪನಾ, ಸಾಬೂನಿನ ಸಾಲಂಕೃತ ಆಕೃತಿಗಳು, ಹೆಂಚಿನ ಮೇಲಿನ ಆಕೃತಿಗಳು, ಕೊಬ್ಬರಿ ಗಿಡಗ, ತೆಂಗಿನ ಕರಟದ ಕೊರೆತಗಳು, ನಿಬ್ ಪೇಂಟಿಂಗ್, ಝಿಂಕ್ ಆಕ್ಸೈಡ್ ಪೇಂಟಿಂಗ್, ಒಣ ಹುಲ್ಲಿನ ಆಕೃತಿಗಳು, ಕೃತ್ರಿಮ ಬೊನ್‌ಜಾಯ್, ಗಾಜಿನ ಚೂರುಗಳ ಗೋಡೆಯ ಅಲಂಕಾರಗಳು, ರೆಕ್ಸಿನ್ ಕಟ್‌ವರ್ಕ್ ಇಷ್ಟೇ ಅಲ್ಲ ಕಸದ ಬುಟ್ಟಿಯಲ್ಲಿ ಚೆಲ್ಲಿದ ಕಳಪೆ ವಸ್ತುಗಳೆಲ್ಲಾ ಅಣು ಕಲ್ಪವೃಕ್ಷದ ತುಣುಕುಗಳಾಗಿ ಮಾರ್ಪಡುತ್ತವೆ.

ಕುಲಕರ್ಣಿ ದಂಪತಿಗಳು 78ಕ್ಕೆ ಅಹಮದಾ ಬಾದ್, ನಂತರ ದಿಲ್ಲಿ, ಆಮೇಲೆ ಮುಂಬೈ ಸುತ್ತಾಡಿ ಈಗ ಧಾರವಾಡದಲ್ಲಿ ಹಸಿರು ಪರಿಸರದ ಮಧ್ಯದಲ್ಲಿ ತಮ್ಮ ಸುಂದರ ಕಲಾ ಮಂದಿರವನ್ನು ಕಟ್ಟಿದ್ದಾರೆ. ಈ 'ಆಶ್ರಯ'ದಲ್ಲಿ, 'ಆಕೃತಿ' ಮಂದಿರದಲ್ಲಿ ಮಹಿಳಾ ವೃಂದವು ಬ್ಯಾಚ್‌ಗಟ್ಟಲೆ ತರಬೇತಿ ಹೊಂದಿ ಹೊರಬಂದು ತಮ್ಮ ಹಸ್ತ ಶಿಲ್ಪ ಸಾಧನೆಯಿಂದ ಸ್ವಯಂ ಗಳಿಕೆ ಮಾಡು ತ್ತಿದ್ದಾರೆ—ಅದರಲ್ಲಿಯೂ ದಲಿತರು, ದೀನರು, ಅಸ್ಪೃಶ್ಯರು, ಅಂಗಹೀನ ಅಂಗನೆಯರು. ಸೌ। ನಳಿನಿಯವರ ತಿಂಗಳದ ಗಳಿಕೆ ಎಷ್ಟು ಗೊತ್ತೆ? ಇಂದಿನ ಒಬ್ಬ ಸರಕಾರೀ ಗೆಜೆಟೆಡ್ ಆಫೀಸರನಷ್ಟು! ●



**ಕೆಂಗುಲಾಬಿ** (ಭಾವ ಗೀತೆಗಳ ಸಂಕಲನ). ಲೇ: ಬಿ. ಆರ್. ಲಕ್ಷ್ಮಣ ರಾವ್; ಕಿರಣ ಪ್ರಕಾಶನ, ಸಿ. ಎಸ್. ಪ್ರಿಂಟರ್ಸ್, 21 ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು – 560 004. ಬೆಲೆ: ರೂ. 16/-, 82 ಪುಟಗಳು.

ಬದುಕಿನ ಅನೇಕ ಕ್ಷಣಗಳನ್ನು ಸುಂದರವಾಗಿ, ತೀವ್ರವಾಗಿ ಕಾಣಿಸುವ ಎಪ್ಪತ್ತೈದು ಕವಿತೆಗಳಿವೆ. ಎಲ್ಲದರಲ್ಲೂ ಬಿ. ಆರ್. ಲಕ್ಷ್ಮಣ ರಾವ್ 'ಸ್ಟಾಂಪ್', ಸುಂದರ–ಆಕರ್ಷಕ. ಓದಲು, ಬಳುವಳಿಯಾಗಿ ನೀಡಲು ಚೊಕ್ಕ ಪುಸ್ತಕ.

**ಬರ ಮತ್ತು ಹತ್ತು ಕಥೆಗಳು** (ಕಥಾಸಂಕಲನ). ಲೇ: ವೀರಭದ್ರ ಕೌದಿ (ಇಂಗ್ಲಿಷ್ ಉಪನ್ಯಾಸಕರು, ಶ್ರೀಖಾಸ್ಗತೇಶ ಕಾಲೇಜ್); ಅಜೇಯ ಪ್ರಕಾಶನ, ತಾಳಿಕೋಟೆ – 586 214, ವಿಜಾಪುರ ಜಿಲ್ಲೆ. ಬೆಲೆ: ರೂ. 18/-, 106 ಪುಟಗಳು.

ಗ್ರಾಮೀಣ ಬದುಕಿನ ಸುತ್ತಲಿನ ಶೋಷಣೆ, ದಬ್ಬಾಳಿಕೆ, ನೋವು, ನಿಟ್ಟುಸಿರು, ಸೋಲು, ನಿರಾಸೆ, ಕಣ್ಣೀರು ಕಾಣಿಸುವ ಹನ್ನೊಂದು ಸಾರ್ಥಕ ಕಥೆಗಳಿವೆ.




**ಕಾಗೆಗೂಡು** (ಅನುವಾದಿತ ಕಥೆಗಳು). ಲೇ: ಕಂಬಳಿ ಆದವಾನಿ; ಕಂಬಳಿ ಪಬ್ಲಿಕೇಷನ್ಸ್, ವಿಕ್ಟೋರಿಯಾ ಪೇಟೆ, ಆದೋನಿ – 518 301, ಆಂಧ್ರಪ್ರದೇಶ. ಬೆಲೆ: ರೂ. 15/-, 91 ಪುಟಗಳು.

ವಿವಿಧ ಭಾಷೆಗಳ ಅನುವಾದಿತ ಕಥೆಗಳು ಮತ್ತು ಲೇಖಕರದೊಂದು ಸ್ವಂತ ಕಥೆ ಇದೆ.

**ಮಣ್ಣ ನೆನಪಿನ ಮೇಲೆ** (ಕವನ ಸಂಕಲನ). ಲೇ: ಜಿ. ಸುಬ್ರಾಯ ಭಟ್, ಬಕ್ಕಳ ಬಕುಲ ಪ್ರಕಾಶನ, ಬಕ್ಕಳ – 581 336, ಶಿರಸಿ (ಉ.ಕ.). ಬೆಲೆ: ರೂ. 10/-, 62 ಪುಟಗಳು.

ನಲವತ್ತನಾಲ್ಕು ಬದುಕನ್ನು ಮೀಟಿನೋಡುವ ಕವಿತೆಗಳಿವೆ. ಕನ್ನಡದಲ್ಲಿ 'ಘಜಲ್' ಗೀತೆಗಳನ್ನು ರಚಿಸುತ್ತಿರುವ ಯುವಕವಿಯ ಚೊಚ್ಚಲು ಸಂಕಲನ.

**ಭಾಸನ ಏಕಾಂಕ ನಾಟಕಗಳು** ಲೇ: ಪ್ರೊ। ಬಿ. ಚಂದ್ರಶೇಖರ್; ಬೆಲೆ: ರೂ. 15/-.

ಮಹಾಭಾರತ ಯುದ್ಧದ ಐದು ನಿರ್ಣಾಯಕ ಘಟ್ಟಗಳನ್ನು ಕಾಣಿಸುವ ಸೊಗಸಾದ ಐದು ಏಕಾಂಕ ನಾಟಕಗಳ ಸಂಕಲನ. ಹಿರಿಯ ರಂಗ ನಿರ್ದೇಶಕ ಪ್ರೊ। ಬಿ. ಚಂದ್ರಶೇಖರ್ ಅವರ ಸಮರ್ಥ ಅನುವಾದ.

**ಉತ್ಸವ** (ಕಥಾಸಂಕಲನ). ಲೇ: ವೇಣುಗೋಪಾಲ ಸೊರಬ; ಬೆಲೆ: 20/-, 159 ಪುಟಗಳು.

ಕವಿ, ವಿಮರ್ಶಕ ವೇಣುಗೋಪಾಲ ಸೊರಬ ಅವರ ಭಿನ್ನ ಕಥೆಗಾರಿಕೆಯ ಹನ್ನೆರಡು




ಕಥೆಗಳ ಸಂಕಲನ.

—ಮೇಲಿನೆರಡು ಪುಸ್ತಕಗಳ ಪ್ರಕಾಶಕರು: ಭಾಗ್ಯಲಕ್ಷ್ಮೀ ಪ್ರಕಾಶನ, 87, 3ನೆ ಕ್ರಾಸ್, 4ನೆ ಬ್ಲಾಕ್, ಬನಶಂಕರಿ 3ನೆ ಸ್ಟೇಜ್, 3ನೆ ಫೇಸ್, ಬೆಂಗಳೂರು – 560 085.



**ಅನಂತರ** (ರೂ. 36/-, 280 ಪುಟಗಳು)

**ಪರಮಾರ್ಥ** (ರೂ. 28/-, 212 ಪುಟಗಳು).

**ಇತಿಹಾಸದ ಮೊಗಸಾಲೆಯಲ್ಲಿ** (ರೂ. 40/-, 242 ಪುಟಗಳು).

ವನಶ್ರೀ ಪ್ರಕಾಶನದ ಮೂರು ಪುಸ್ತಕಗಳು, ಉಜಿರೆ – 574 240. ಲೇಖಕರು: ಕೆ. ಟಿ. ಗಟ್ಟಿ.

ಚಿಂತನೆಗೆ ಹಚ್ಚುವ ಕೃತಿಗಳು. ಅವರದೇ ಮುನ್ನುಡಿಗಳು ಉಪಯುಕ್ತವಾಗಿವೆ. ಕನ್ನಡ ಕಾದಂಬರಿಪ್ರಿಯರು ಅಗತ್ಯವಾಗಿ ಓದಬೇಕಾದವು. ಜನಪ್ರಿಯ ಕಾದಂಬರಿಕಾರರೆನಿಸಿರುವ ಕೆ. ಟಿ. ಗಟ್ಟಿ ಆಳವಾಗಿ–ಭಿನ್ನವಾಗಿ ಬರೆಯುವಂಥವರು.

**ಬುಗ್ಗೆ** (ಹನಿಗವನಗಳ ಸಂಕಲನ). ಲೇ: ಜರಗನಹಳ್ಳಿ ಶಿವಶಂಕರ್; ಬೆಲೆ: ರೂ. 12/-, 72 ಪುಟಗಳು.

ಸೊಗಸಾಗಿ ಓದಿಸಿಕೊಂಡು ಹೋಗುವ, ಬದುಕಿನ ಎಲ್ಲವನ್ನೂ ಕಿರಿದರಲ್ಲಿ ಕಾಣಿಸುವ ಪ್ರಯತ್ನ.

**ಸೃಷ್ಟಿ** (ಕವನ ಸಂಕಲನ). ಲೇ: ವಿ. ಮಲ್ಲಿಕಾರ್ಜುನಯ್ಯ; ಬೆಲೆ: ರೂ. 12/-, 36 ಪುಟಗಳು.

ಬದುಕಿನ ಆಗುಹೋಗುಗಳನ್ನು ಕುತೂಹಲದಿಂದ, ತೀವ್ರ ಭಾವನೆಗಳಿಂದ ಕಾಣಿಸುವ ಮೂವತ್ತಕ್ಕೂ ಹೆಚ್ಚು ಸುಂದರ ಕವಿತೆಗಳಿವೆ.

**ದಾರಿ ಮತ್ತು ಆಕಾಶ** (ಕವನ ಸಂಕಲನ). ಲೇ: ಸ. ರಘುನಾಥ; ಬೆಲೆ: ರೂ. 10/-, 56 ಪುಟಗಳು.

ಅರ್ಥಪೂರ್ಣವಾಗಿ, ಗಂಭೀರವಾಗಿ ಓದಿಸಿಕೊಂಡು ಹೋಗುವ ಐವತ್ತಕ್ಕೂ ಹೆಚ್ಚು ಕವಿತೆಗಳಿವೆ. ಕಾಂತಾವರ ಕನ್ನಡ ಸಂಘದ ಪಟೇಲ್ ಪುನರೂರು ವಾಸುದೇವರಾವ್ ಟ್ರಸ್ಟಿನ 1991ರ ಸಾಲಿನ ಕವಿಮುದ್ದಣ ಕಾವ್ಯ ಪುರಸ್ಕೃತ ಕೃತಿ.

—ಮೇಲಿನ ಮೂರೂ ಪುಸ್ತಕಗಳು: ಶುಭದ ಪ್ರಕಾಶನ, ಜರಗನಹಳ್ಳಿ, ಜೆ. ಪಿ. ನಗರ ಅಂಚೆ, ಬೆಂಗಳೂರು – 560 078.




**ನೂರು ಹನಿಗವನಗಳು.** ಲೇ: ಎಚ್. ಡುಂಡಿರಾಜ್; ಲಿಪಿ ಪ್ರಕಾಶನ, ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ– ಬೆಂಗಳೂರು – 560 004. ಬೆಲೆ: ರೂ.10/-, 56 ಪುಟಗಳು.

ವಿಶೇಷ ಮೊನಚಿನ–ವಿಡಂಬನೆ ಲೇಪದ ಒಂದು ನೂರು ಹನಿಗವನಗಳು ಬದುಕಿನ ಸಹಜ ಪ್ರವೃತ್ತಿಗಳನ್ನು ನಗೆಯ ಮೂಲಕ–ಚುಚ್ಚು ಚಟಾಕಿಗಳಿಂದ ಕಾಣಿಸಿವೆ. ಸೊಗಸಾದ ಸ್ವಾರಸ್ಯ ಹನಿಗಳು.

**ಪ್ರಮದ** (ಕವನ ಸಂಕಲನ). ಲೇ: ವಸಂತ ಕಲ್‌ಬಾಗಲ್; ಜೇನುಗೂಡು ಪ್ರಕಾಶನ, 'ಮಾಧುರಿ', 40, ಶ್ರೀರಾಮ

ಮಂದಿರ ರಸ್ತೆ, ಬಸವನಗುಡಿ, ಬೆಂಗಳೂರು – 560 004. ಬೆಲೆ: ರೂ. 16/-, 88 ಪುಟಗಳು.

ಕವಯಿತ್ರಿಯೊಬ್ಬರ ಚೊಚ್ಚಲ ಕೃತಿ. ಸಹಜವಾಗಿ–ಮುಕ್ತವಾಗಿ ಭಾವನೆಗಳನ್ನು ಐವತ್ತು ಕವಿತೆಗಳಲ್ಲಿ ಕಾಣಿಸಿದ್ದಾರೆ.




**ದೇವರು ದೊಡ್ಡವನು** (ಹಾಸ್ಯಲೇಖನಗಳ ಸಂಕಲನ). ಲೇ: ಕೃಷ್ಣಸುಬ್ಬರಾವ್; ಸುಕೃತ ಪ್ರಕಾಶನ, 100/2/28 ಶಕ್ತಿಗಣಪತಿ ನಗರ, ಕಮಲಾನಗರ, ಬೆಂಗಳೂರು – 570 079 ಬೆಲೆ: ರೂ. 20/-, 87 ಪುಟಗಳು.

ಹದಿನೇಳು ಸ್ವಾರಸ್ಯ ನಗೆಲೇಖನಗಳಿವೆ. ಚೆನ್ನಾಗಿ ಓದಿಸಿಕೊಳ್ಳುವ ಅನುಭವ ಚಿತ್ರಗಳು.



**ನಕ್ಕು ನಗಿಸೋಣ** (ನಗೆಹನಿಗಳ ಸಂಕಲನ). ಲೇ: ಕೋ. ಲ. ರಂಗನಾಥ ರಾವ್; ಗುರುರಾಜ ಪ್ರಕಾಶನ, ಎಫ್–134, ಎಚ್.ಆರ್.ಪಿ. ಕಾಲೋನಿ, ಗೊರೂರು – 573 120, ಹಾಸನಜಿಲ್ಲೆ. ಬೆಲೆ: ರೂ.6/-, 32 ಪುಟಗಳು.

ಆಗಾಗ ಮತ್ತು ಯಾವಾಗ ಬೇಕಾದರೂ ಓದಬಹುದಾದ ಒಂದುನೂರು ನಗೆಹನಿಗಳ ಸಂಗ್ರಹ.

**ತುಂಬೆ ಹೂ** (ಹನಿಗವನಗಳು). ಲೇ: ಕಮಲಾಮೂರ್ತಿ; ಕಮಲ್ ಪ್ರಕಾಶನ, ಕೆಸವಿನ ಮನೆ, ಹನಿಯ ಅಂಚೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ–577 418. ಬೆಲೆ: ರೂ. 15/-, 54 ಪುಟಗಳು.

ಚಿಂತನೆಗೆ ಹಚ್ಚುವ, ನಗೆ ತರಿಸುವ, ನೂರೆಂಟು ಕಿರುಗವಿತೆಗಳಿವೆ.

**ಒಂದ್ನಿಮಿಷ ನಗ್ತೀರಾ?** (ವಿಡಂಬನೆ). ಲೇ: ವಿ. ಬಾಲಕೃಷ್ಣ ಶಿರ್ವ; ಗೌತಮ ಪ್ರಕಾಶನ, ಕಟಪಾಡಿ, ದ.ಕ. ಬೆಲೆ: ರೂ.5/-, 26 ಪುಟ.

## ಪ್ರಕಾಶಕರಿಗೆ – ಲೇಖಕರಿಗೆ ಕೋರಿಕೆ

ಈ ಅಂಕಣದಲ್ಲಿ ಕಾಣಿಸಲು ನಿಮ್ಮ ಪ್ರಕಾಶನದ ಒಂದು ಅಥವ ಎರಡು ಮುಖ್ಯವಾದ ಪ್ರಕಟಣೆಗಳನ್ನು (ಒಂದೊಂದು ಪ್ರತಿ ಸಾಕು) ಕಳುಹಿಸಿಕೊಡಿ.

ದಯವಿಟ್ಟು ಈಚೆಗೆ ಪ್ರಕಟವಾದ (ಅಕ್ಟೋಬರ್ 1991 ಅನಂತರ) ಪುಸ್ತಕಗಳನ್ನು ಮಾತ್ರ ಕಳುಹಿಸಿ. ಹಳೆಯವು ಬೇಡ.

ಈ ವಿಳಾಸಕ್ಕೆ ತಲುಪಿಸಿ–

**ಪುಸ್ತಕಗಳು (ಪಂಚಕಜ್ಜಾಯ)**<br>
**ತುಷಾರ**<br>
**ಎನ್ 201, ನಾರ್ಥ್ ಬ್ಲಾಕ್, ಫ್ರಂಟ್ ವಿಂಗ್**<br>
**ಮಣಿಪಾಲ ಸೆಂಟರ್,**<br>
**47, ಡಿಕನ್‌ಸನ್ ರೋಡ್,**<br>
**ಬೆಂಗಳೂರು – 560 042.**



## ಇದು ಏನು?

ಉದ್ದನೆ ಮರದಲಿ
ಕೆಂಪನೆ ಹಣ್ಣು।
ಇದಕೋ ಇಹುದು
ಒಂದೇ ಕಣ್ಣು॥

ಗೊಂಚಲಿನಲ್ಲಿ
ಸೇರುತಲಿಹುದು।
ಒಣಗುತ ಬರಲು
ಬೇಡಿಕೆಯಿಹುದು॥

ಅಜ್ಜನ ಜೊತೆಯಲಿ
ಇದ್ದೇ ಇಹುದು।
ಕವಳವ ಮೆಲುವೊಡೆ
ಹೊರಗಡೆ ಬಹುದು॥

ಇದು ಏನೆಂಬುದ
ಚೆಣ್ಣನೆ ಹೇಳು।
ಅರಿಯದೆ ಹೋದರೆ
ನನ್ನಲಿ ಕೇಳು॥

● "ಬಾಲಮಿತ್ರ" ಮುಳಿಯ

ಉತ್ತರ: ಅಡಿಕೆ

## ಗುಬ್ಬಿ ಹಾರಿತು

ಪುಕ್ಕ ಬಿಡಿಸುತ
ಗುಬ್ಬಿ ಹಾರಿತು
ರೆಕ್ಕ ಬಡಿಯುತ ತೇಲಿತು.

ಕಾಳ ಕಡೆಗೆ
ಕಣ್ಣು ಅರಳಿಸಿ
ನೋಡಿ ಗಕ್ಕನೆ ಇಳಿಯಿತು

ಕೊಕ್ಕಿನಲ್ಲಿ
ಕಾಳು ಹೆಕ್ಕಿ
ಮರಿಯ ನೆನೆದು ಸಾಗಿತು

ಗೂಡು ಸನಿಹ
ಹಾರಿ ಬಂದು
ಮರಿಗೆ ಗುಟುಕು ನೀಡಿತು

ಮರಿಯ ಚಿಂವ್ ಚಿಂವ್
ಹಾಡುಪಾಡಿಗೆ
ಮುದದಿ ಕೂಡಿ ನಲಿಯಿತು

● ಎಂ.ಎಚ್. ಸಿದ್ದೇಶ್ವರಯ್ಯ





# ಪಂಚತಂತ್ರದ ಕಥೆಗಳು

● ಪ್ರೊ| ಜಿ. ವೆಂಕಟಸುಬ್ಬಯ್ಯ

## ಮಿತ್ರ ಭೇದದ ಕಥೆಗಳು

ಕಾಡಿನ ರಾಜ ಸಿಂಹ ಪಿಂಗಳಕನಿಗೆ ಎಲ್ಲೊ ದೂರದಲ್ಲಿ ಹೆದರಿಕೆ ಹುಟ್ಟಿಸುವಂಥ ಶಬ್ದ ಬರುತ್ತಿದೆ ಎಂದು ಚಿಂತೆ ಆಗಿತ್ತು. ಆಗ ನರಿ ದಮನಕ ಸಿಂಹರಾಜನಿಗೆ, ಹುಲಿ-ನರಿ ಕಥೆಯನ್ನು ಹೇಳಿದ್ದನ್ನು ನೀವು ಹಿಂದಿನ ತಿಂಗಳು ಓದಿದಿರಲ್ಲವೇ? ನರಿಯನ್ನು ತಿನ್ನಲು ಅದರ ಗುಹೆಗೆ ಬಂದ ಹುಲಿಯನ್ನು ಜಾಣತನದಿಂದ ತಿಳಿದುಕೊಂಡು ಅಪಾಯದಿಂದ ತಪ್ಪಿಸಿಕೊಂಡ ನರಿಯ ಕಥೆ ಅದು.

ಕಾಡಿನ ರಾಜ ಸಿಂಹ ಪಿಂಗಳಕನಿಗೆ ಈ ಕಥೆ ಕೇಳಿಯೂ ಶಬ್ದದ ಹೆದರಿಕೆ ಇನ್ನೂ ಹೋಗಿರದಿರುವುದನ್ನು ನೋಡಿ ನರಿ ದಮನಕ ಸಿಂಹರಾಜನಿಗೆ ಇನ್ನೊಂದು ಕಥೆ ಹೇಳಿತು:



### ನರಿ ಮತ್ತು ಭೇರಿ

ಒಂದು ದೊಡ್ಡ ಕಾಡು. ಅದರಲ್ಲಿ ಒಂದು ಅಂಜುಬುರುಕ ನರಿ ಇತ್ತು. ಒಂದು ದಿನ ಅದು ತನಗೆ ಬೇಕಾದ ಆಹಾರವನ್ನು ಹುಡುಕಿಕೊಂಡು ಕಾಡಿನಲ್ಲೆಲ್ಲ ಸುತ್ತಾಡಿತು. ಇದನ್ನು ನೋಡಿ ನರಿಯ ಸ್ನೇಹಿತನಾದ ಕಾಗೆ ಆಕಾಶದಲ್ಲಿ ಹಾರಾಡಿಕೊಂಡು ಬಂದು ಹೀಗೆ ಹೇಳಿತು– 'ಅಲ್ಲಿ ಕಾಣುವ ನದೀ ತೀರದಲ್ಲಿ ಇಬ್ಬರು ರಾಜರು ಯುದ್ಧ ಮಾಡಿ ಅನೇಕ ಸೈನಿಕರು ಸತ್ತು ಬಿದ್ದಿದ್ದಾರೆ. ಹೋಗು, ಬೇಕಾದಷ್ಟು ಆಹಾರ ಸಿಗುತ್ತದೆ.'

ನರಿ ಸಂತೋಷದಿಂದ ಅಲ್ಲಿಗೆ ಓಡಿತು. ಆದರೆ ಅಲ್ಲೆಲ್ಲೊ ಒಂದು ಕಡೆ 'ಢಬ್ ಢಬ್' ಎನ್ನುವ ಯಾವುದೋ ಒಂದು ಭಯಂಕರ ಶಬ್ದವಾಯಿತು. ಆಗಾಗ ಈ ಶಬ್ದ ಕೇಳಿಸುತ್ತಿತ್ತು. ನರಿಗೆ ತುಂಬಾ ಹೆದರಿಕೆಯಾಯಿತು. ಅಲ್ಲಿ ನಿಲ್ಲದೆ ಹೆದರಿ ವಾಪಸ್ಸು ಓಡಿ ಬಂದು ಕಾಗೆಯ ಮುಂದೆ ಉಸಿರುಸಿರು ಬಿಡುತ್ತಾ ನಿಂತಿತು. ಏನು ನರಿರಾಯ ಏನಾಯ್ತು, ಯಾಕೆ ಹೀಗೆ ಹೆದರಿಕೊಂಡು ಬಂದಿದೀಯಾ? ಎಂದು ಕಾಗೆ ಕೇಳಿತು. 'ಅಲ್ಲಿ ಸೈನಿಕರು ಸತ್ತು ಬಿದ್ದಿದ್ದಾರೆ ಎಂದು ಹೋದರೆ ಎದೆ ನಡುಗುವಂಥ ಭಯಂಕರ ಶಬ್ದ ಕೇಳಿಸಿತು. ಹೆದರಿ ಓಡಿಬಂದೆ' ಎಂದಿತು ನರಿ.



ಅಲ್ಲಿ ಇದ್ದ ಇನ್ನೊಂದು ನರಿ—'ಯಾವುದೋ ಶಬ್ದಕ್ಕೆ ಹೀಗೆಲ್ಲ ಹೆದರುತ್ತಾರೆಯೇ? ಬಾ, ಹೋಗಿ ನೋಡಿ ಬರೋಣ' ಎಂದಿತು. ಎರಡು ನರಿಗಳೂ ಆ ನದೀ ದಡದತ್ತ ನಡೆದವು.

ಅಲ್ಲಿ ಒಂದು ಮರದ ಹತ್ತಿರ ದೊಡ್ಡ ನಗಾರಿಯೊಂದು ಬಿದ್ದಿತ್ತು. ಜೋರಾಗಿ ಗಾಳಿ ಬೀಸಿದಾಗ ಆ ಮರದ ದಪ್ಪ ಕೊಂಬೆ ನಗಾರಿಗೆ ಬಡಿದು ದೊಡ್ಡ ಶಬ್ದವಾಗುತ್ತಿತ್ತು. ಗಾಳಿ ಇಲ್ಲದಾಗ ನಿಶ್ಶಬ್ದ.

ಆಗ ಆ ಇನ್ನೊಂದು ನರಿ ನಕ್ಕು—'ವಿಷಯ ಏನೆಂದು ತಿಳಿದುಕೊಳ್ಳದೆ ಏನೇನೊ ಅಂದುಕೊಂಡು ಬಿಡಬಾರದು' ಎಂದು ಹೇಳಿ ಅಂಜುಬುರುಕ ನರಿಯನ್ನು ಹಾಸ್ಯಮಾಡಿತು.

ಈ ಕಥೆಯನ್ನು ಹೇಳಿ ನರಿ ದಮನಕ ಸಿಂಹರಾಜ ಪಿಂಗಳಕನನ್ನು ಸಮಾಧಾನ ಪಡಿಸಿತು. 'ಏನೊ ಇದೆ, ನಾನು ಹೋಗಿ ನೋಡಿಕೊಂಡು ಬಂದು

ನಿಮಗೆ ತಿಳಿಸುತ್ತೇನೆ. ನೀವು ಹೆದರಬೇಡಿ' ಎಂದಿತು. ಸಿಂಹರಾಜನಿಗೆ ಇದು ಸರಿ ಎನಿಸಿತು. ನರಿ ಹೊರಟಿತು.

(ಮಕ್ಕಳೆ, ಇಲ್ಲೊಂದು ವಿಷಯ ನೀವು ತಿಳಿದುಕೊಳ್ಳಬೇಕು; 'ಯಾವುದೇ ವಿಷಯವನ್ನಾಗಲೀ ಕಣ್ಣಿನಿಂದ ನೋಡದೇ, ಸರಿಯಾಗಿ ತಿಳಿದುಕೊಳ್ಳದೆ, ಪರೀಕ್ಷಿಸದೆ ಏನೊ ಒಂದು ನಿರ್ಧಾರಕ್ಕೆ ಬಂದು ಬಿಡಬಾರದು. ತಿಳಿಯಿತೇ?)

ಈ ಹಿಂದೆ ಕಾಡಿಗೆ ಬಂದ ವ್ಯಾಪಾರಿಯೊಬ್ಬ ತನ್ನ ಒಂದು ಎತ್ತು ಸಂಜೀವಕನನ್ನು ಕಾಡಿನಲ್ಲೆ ಬಿಟ್ಟು ಹೊರಟು ಹೋಗಿದ್ದು, ಎತ್ತು ಸಂಜೀವಕ ಕಾಡಿನ ಹುಲ್ಲು ಮೇದು, ನೀರು ಕುಡಿದು ಮೈಕೈ ತುಂಬಿಕೊಂಡು, ಕಾಡೆಲ್ಲ ಅದರುವಂತೆ ಗುಟುರು ಹಾಕುತ್ತಿದ್ದುದನ್ನು ನೀವು ಓದಿದ್ದೀರಿ (ತುಷಾರ–ಫೆಬ್ರವರಿ ಸಂಚಿಕೆ). ಸಿಂಹ ಹೆದರಿದ್ದು ಸಂಜೀವಕನ ಗುಟುರಿಗೆ.

ಸಿಂಹರಾಜ ಕಳುಹಿಸಿದ ನರಿ ದಮನಕ ಈ ಸಂಜೀವಕ ಎನ್ನುವ ಎತ್ತನ್ನು ಹುಡುಕಿಕೊಂಡು ಬಂದಿತು.

ಸಂಜೀವಕ ಒಂದು ಕೊಬ್ಬಿದ ಎತ್ತು, ಸಾಧು ಪ್ರಾಣಿ ಎನ್ನುವುದು ನರಿ ದಮನಕನಿಗೆ ಬಹು ಬೇಗ ತಿಳಿದು ಹೋಯಿತು. ಅದನ್ನು ಮಾತನಾಡಿಸಿ ಸ್ನೇಹ ಮಾಡಿಕೊಂಡಿತು. 'ಕಾಡಿನರಾಜ ಸಿಂಹ ಪಿಂಗಳಕ ತುಂಬಾ ಶಕ್ತಿಶಾಲಿ. ಬಾ, ನಿನ್ನನ್ನು ರಾಜರ ಹತ್ತಿರ ಕರೆದುಕೊಂಡು ಹೋಗುತ್ತೇನೆ'–ಎಂದು ಹೇಳಿತು.

ಇಬ್ಬರು ಸಿಂಹದ ಹತ್ತಿರ ಬಂದರು. ಎತ್ತು, ಸಿಂಹ ಹಾಯಾಗಿ ಮಾತಾಡಿಕೊಂಡು ತುಂಬಾ ಸ್ನೇಹಿತರಾದರು.

ಸಿಂಹ ಪಿಂಗಳಕ ಆಹಾರಕ್ಕಾಗಿ ತುಂಬಾ ಸಾಧು ಪ್ರಾಣಿಗಳನ್ನು ಕೊಲ್ಲುತ್ತಿರುವುದನ್ನು ನೋಡಿ ಎತ್ತು ಸಂಜೀವಕ- 'ಹೀಗೆ ಪ್ರಾಣಿಗಳನ್ನು ಸುಮ್ಮ ಸುಮ್ಮನೆ ಕೊಲ್ಲಬಾರದು. ಇದು ಹಿಂಸೆ ಆಗುತ್ತದೆ. ನಿಮಗೆ ಬೇಕಾಗುವಷ್ಟು ಆಹಾರ ಮಾತ್ರ ಸಂಪಾದಿಸಬೇಕು' ಎಂದು ಬೋಧಿಸಿತು. ಸಿಂಹ ಹಾಗೆಯೇ ಮಾಡತೊಡಗಿತು.

ಸಿಂಹ ತುಂಬಾ ಪ್ರಾಣಿಗಳನ್ನು ಕೊಲ್ಲದಿದ್ದುದರಿಂದ ನರಿ ದಮನಕನಿಗೆ ಸರಿಯಾಗಿ ಆಹಾರ ಸಿಗದಂತಾಯಿತು.

ಕಾಡಿನಲ್ಲಿದ್ದ ನರಿಗಳೆಲ್ಲ ಬಂದು ಸಿಂಹರಾಜನಿಗೆ ತಮಗೆ ಸರಿಯಾಗಿ ಆಹಾರ ಸಿಕ್ಕದಿರುವುದನ್ನು ಹೇಳಿ–'ನೀವು ಹೆಚ್ಚು ಪ್ರಾಣಿಗಳನ್ನು ಕೊಲ್ಲಬೇಕು'–ಎಂದು ಹೇಳಿದರೂ ಸಿಂಹರಾಜ ಒಪ್ಪಲಿಲ್ಲ.

ಈ ಎತ್ತು ಸಂಜೀವಕನಿಂದಲೇ ಹೀಗಾಗಿರುವುದು, ಸಿಂಹ-ಎತ್ತು ಸ್ನೇಹವನ್ನು ಮುರಿದರೆ ಮಾತ್ರ ಎಲ್ಲವೂ ಸರಿಹೋಗುತ್ತದೆ ಎಂದು ನರಿ ದಮನಕ ನಿರ್ಧರಿಸಿತು.

ಉಪಾಯವೊಂದನ್ನು ಯೋಚಿಸಿತು. 'ಕಾಗೆ ನಾಗರಹಾವನ್ನು ಕೊಂದ ಹಾಗೆ' ಮಾಡಬೇಕು ಎಂದುಕೊಂಡಿತು.

'ಕಾಗೆ ನಾಗರ ಹಾವನ್ನು ಕೊಂದದ್ದು ಹೇಗೆ'?

ಮುಂದಿನ ತಿಂಗಳು ಓದಿ ತಿಳಿದುಕೊಳ್ಳಿ.



# ಚೀನಾದ ಪುರಾಣ ಕಥೆಗಳು

## ಸ್ವಭಾವಕ್ಕೆ ತಕ್ಕ ಸ್ವಾಗತ

ದೂರ ಸಾಗರದ ಹಕ್ಕಿಯೊಂದು ಹಾರುತ್ತ ಹಾರುತ್ತ ಹಾದಿ ತಪ್ಪಿ 'ಲೂ' ರಾಜ್ಯದ ರಾಜಧಾನಿ ಸೇರಿತು. ಪಕ್ಕ ಸೋತು ರಾಜಮಹಲ ಮೇಲೆ ಬಂದು ಕುಳಿತಿತು.

ಲೂ ರಾಜನು ಹಕ್ಕಿ ಮಹಲ ಮೇಲೆ ಬಂದಿಳಿದುದು ಶುಭಸೂಚಕವೆಂದು ಭಾವಿಸಿದನು. ಇಂಥ ದುರ್ಲಭ ಅತಿಥಿಯನ್ನು ರಾಜಮರ್ಯಾದೆಯೊಂದಿಗೆ ಸ್ವಾಗತಿಸಬೇಕೆಂದು—ಮಂತ್ರಿಗಳಿಗೆ ಆದೇಶವಿತ್ತನು. ಕೇಳುವದೇನು! ರಾಜಧಾನಿಯ ಸರ್ವ ಸಂಗೀತಗಾರರೆಲ್ಲ ಹಕ್ಕಿಗೆ ಸಂಗೀತ ಕೇಳಿಸಲು ಸಂಗೀತ ಸಭೆ ಏರ್ಪಡಿಸಿದರು. ನರ್ತಕಿಯರು ನರ್ತನಗೈದರು. ಅಡುಗೆ ಭಟ್ಟರು ಐವತ್ತಾರು ತರದ ಪಕ್ವಾನ್ನ ತಯಾರಿಸಿದರು.

ಪಾಪ! ಹಕ್ಕಿಗೇನು ಗೊತ್ತು ಇಷ್ಟೆಲ್ಲ ಸಂಭ್ರಮ ತನ್ನ ಸ್ವಾಗತಕ್ಕಾಗಿ ಎಂದು! ಇದೆಲ್ಲ ಕೋಲಾಹಲದಿಂದ ಗಾಬರಿಯಾಗಿ ಒಂದು ಮೂಲೆಯಲ್ಲಿ ಮುದುಡಿ ಕುಳಿತಿತು. ಹೊನ್ನ ತಟ್ಟೆಯಲ್ಲಿ ಮೃಷ್ಟಾನ್ನ ಬಡಿಸಿ ತಿನ್ನಲು ಇಟ್ಟರು. ಆಳು ಹೋಳುಗಳೆಲ್ಲ ಅದನ್ನು ಇಳಿಸಲು ಕರೆದು ಕರೆದು ಸುಸ್ತಾದರು. ಹಕ್ಕಿ ಅವರೆಡೆಗೆ ನೋಡಲಿಲ್ಲ. ಒಂದು ಗುಟುಕು ನೀರನ್ನೂ ಕುಡಿಯಲಿಲ್ಲ. ಹಾರಿ ಹೊರಟರೆ ಏನೋ ಎಂದು ನೋಡುತ್ತ ಕುಳಿತಿತು.

ವಿಶ್ರಾಂತಿ ಪಡೆದು ಮೂರು ದಿನಗಳ ಮೇಲೆ ಹಾರಿ ಹೋಯಿತು. ಇದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಆಶ್ಚರ್ಯ ಪಡುವುದೇನಿದೆ? ರಾಜನು ಅದೂ ತನ್ನಂತೆ ರಾಜನೇ ಇರಬೇಕೆಂದು ಭಾವಿಸಿ ಸ್ವಾಗತ-ಸತ್ಕಾರ ಮಾಡಲು ಆಜ್ಞಾಪಿಸಿದ್ದನು. ಅದೊಂದು ಪಕ್ಷಿ! ಪಕ್ಷಿಯ ಸ್ವಾಗತ ಪಕ್ಷಿಯ ಸ್ವಭಾವವನ್ನರಿತು ಮಾಡಿದ್ದಲ್ಲಿ ಅದು ಸ್ವೀಕರಿಸಬಹುದಿತ್ತು.





## ಗೋಡೆಯ ಬಿರುಕು

ಸಾಂಗ ರಾಜ್ಯದಲ್ಲಿ ಒಬ್ಬ ಶ್ರೀಮಂತನಿದ್ದನು. ಒಮ್ಮೆ ಭಾರೀ ಮಳೆ ಸುರಿಯಿತು. ಅವನ ಮನೆಯ ಗೋಡೆ ನೀರು ಹಿಡಿಯಿತು. ಒಂದೆರಡು ದಿನಗಳಲ್ಲಿ ಬಿರುಕುಬಿಟ್ಟಿತು. ಅದನ್ನು ಕಂಡ ಅವನ ಮಗ–'ಅಪ್ಪ, ಒಂದೆರಡು ದಿನಗಳಲ್ಲಿ ಬಿರುಕನ್ನು ಮುಚ್ಚದಿದ್ದರೆ ಅದರೊಳಗಿಂದ ಕಿಂಡಿ ಕೊರೆದು ಕಳ್ಳರು ಮನೆಯಲ್ಲಿ ಹೊಕ್ಕದ್ದೇ ತಿಳಿಯುವುದಿಲ್ಲ' ಎಂದ.

ಮಧ್ಯಾಹ್ನದಲ್ಲಿ ಅಕಸ್ಮಾತ್ತಾಗಿ ಅಲ್ಲಿಂದ ಹಾಯ್ದು ಹೋಗುತ್ತಿದ್ದ ನೆರೆಮನೆಯವನೂ ಶ್ರೀಮಂತನಿಗೆ ಇದೇ ಸಲಹೆ ನೀಡಿದನು.

ಸಂಯೋಗವೆಂದರೆ ಅದೇ ರಾತ್ರಿ ನಿಜವಾಗಿಯೂ ಕಳ್ಳರು ಶ್ರೀಮಂತನ ಮನೆಗೆ ಕನ್ನಹಾಕಿ ಸಾಕಷ್ಟು ಧನ-ದೌಲತ್ತನ್ನು ಕೊಳ್ಳೆ ಹೊಡೆದು ಹೋದರು.

ಹೊತ್ತು ಹೊರಡುತ್ತಲೇ ಶ್ರೀಮಂತನಿಗೆ ಈ ವಿಷಯ ತಿಳಿಯುತ್ತಲೇ ಸೂಚನೆ ಕೊಟ್ಟ ಮಗನನ್ನು ಪ್ರಶಂಸಿಸಿದನು. ಅದೇ ಸೂಚನೆ ಕೊಟ್ಟ ನೆರೆಮನೆಯವನ ಮೇಲೆ ಸಂಶಯಪಟ್ಟು ಕಳವು ಮಾಡಿದವನು ಅವನೇ ಎಂದು ಗ್ರಹಿಸಿದನು.

ಸಲಹೆ ಒಂದೇ! ಆದರೆ... ಅರ್ಥ!



## ಹಠವಾದಿ

ಚ್ಞೂ ರಾಜ್ಯದ ರಾಜಧಾನಿಯಲ್ಲಿ ಒಬ್ಬ ಮಹಾಶಯರು. ಅವರಿಗೆ ಅಲ್ಲ (ಹಸಿ ಶುಂಠಿ) ಎಲ್ಲಿ ಹುಟ್ಟುತ್ತಿದೆ ಗೊತ್ತಿರಲಿಲ್ಲ. ಮಾವು-ಬೇವುಗಳಂತೆ ಗಿಡದ ಮೇಲೆ ಬೆಳೆಯುತ್ತಿರಬಹುದೆಂದು ಅವರ ಎಣಿಕೆ.

ಒಂದು ದಿನ ಯಾರೋ ಒಬ್ಬರು 'ಅಲ್ಲ' ಗಿಡದ ಮೇಲೆ ಬೆಳೆಯುವುದಿಲ್ಲ ನೆಲದಲ್ಲಿ ಬೆಳೆಯುತ್ತದೆ ಎಂದು ಹೇಳಿದರು.

ಆ ಮಹಾಶಯರು ಅವನನ್ನು ಕೆಂಗಣ್ಣಿನಿಂದ ನೋಡಿದರು. 'ವ್ಹಾ! ಹಣ್ಣು-ಕಾಯಿ ನೆಲದೊಳಗೆ ಬೆಳೆಯುತ್ತದೆ ಎಂದರೆ ಯಾರಾದರೂ ನಕ್ಕಾರು' ಎಂದ.

ಎಷ್ಟು ಹೇಳಿದರೂ ಕೇಳದೆ ಅವನೊಡನೆ ಪಂಥ ಕಟ್ಟಿದರು—'ನೀವು ಹೇಳುವುದೇ ನಿಜವಿದ್ದರೆ ನಗರದ ಹತ್ತು ಪ್ರತಿಷ್ಠಿತ ಜನರನ್ನು ಕೇಳೋಣ. ಒಂದು ವೇಳೆ ಅವರು ನಿನ್ನ ಮಾತನ್ನೇ ಒಪ್ಪಿಕೊಂಡರೆ ನನ್ನ ಒಂದು ಕತ್ತೆಯನ್ನು ಕಾಣಿಕೆ ಕೊಡುವೆ' ಎಂದರು.

ಇಬ್ಬರೂ ಕೂಡಿ ಹತ್ತಾರು ಜನರನ್ನು ಕೇಳಲಾಗಿ ಎಲ್ಲರೂ 'ನಿಜ. ಇವರ ಮಾತೇ ಸರಿ. ಅಲ್ಲ ನೆಲದೊಳಗೇ ಬೆಳೆಯುತ್ತದೆ' ಎಂದು ಹೇಳಿದರು.

'ಸರಿ' ಆ ಮಹಾಶಯರೆಂದರು. 'ನಾನು ಸೋತೆ. ಪಂಥ ಕಟ್ಟಿದಂತೆ ನನ್ನ ಕತ್ತೆಯನ್ನು ನಿನಗೆ ಕೊಡುವೆ. ಇನ್ನು ಈ ಕತ್ತೆಯ ಮೇಲೆ ನಿನ್ನ ಹಕ್ಕಿದೆ. ಇದನ್ನು ಒಯ್ಯಬಹುದು. ಆದರೆ ಒಂದು ಮಾತು. ನಾನು ನಿನ್ನ ವಿಚಾರವನ್ನು ಒಪ್ಪಿಕೊಂಡಿದ್ದೇನೆಂದು ತಿಳಿಯಬೇಡ. ನನ್ನ ತಿಳುವಳಿಕೆಯಲ್ಲಿ ಅದು ಗಿಡದ ಮೇಲೆಯೇ ಬೆಳೆಯುತ್ತದೆ ಎಂಬ ನಂಬುಗೆ ನನಗಿದೆ' ಎಂದರು.



## ಬೆರಳು ಬೇಕು



ಬಹಳ ದಿನಗಳ ನಂತರ ಗೆಳೆಯರಿಬ್ಬರ ಭೆಟ್ಟಿಯಾಯಿತು. ಅವರಲ್ಲಿ ಒಬ್ಬ ಶ್ರೀಮಂತನಾಗಿದ್ದ. ದೇವರಂತೆ ಚಮತ್ಕಾರ-ಪವಾಡ ಮಾಡುತ್ತೇನೆಂದು ಹೇಳಿಕೊಳ್ಳುತ್ತಿದ್ದ.

ಶ್ರೀಮಂತ ಗೆಳೆಯನಿಗೆ ಬಡಗೆಳೆಯನ ಕತೆ ಕೇಳಿ ಕನಿಕರ ಹುಟ್ಟಿತು. ಕೂಡಲೇ ಬೀದಿಯ ಬದಿಯಲ್ಲಿ ಬಿದ್ದ ಒಂದು ಇಟ್ಟಂಗಿ ತುಂಡಿನ ಕಡೆಗೆ ಬೆರಳು ಮಾಡಿದನು. ಆ ಕ್ಷಣವೇ ಆ ಇಟ್ಟಂಗಿ ಬಂಗಾರದ ಗಟ್ಟಿಯಾಯಿತು. ಅದನ್ನೆತ್ತಿ ಬಡ ಗೆಳೆಯನಿಗೆ ಕಾಣಿಕೆ ಕೊಟ್ಟನು. ಬಡ ಗೆಳೆಯನಿಗೆ ಇದರಿಂದ ತೃಪ್ತಿಯಾಗಲಿಲ್ಲ. ಇದನ್ನರಿತು ಇನ್ನೊಂದು ಅದಕ್ಕಿಂತ ದೊಡ್ಡ ಬಂಗಾರದ ಗಟ್ಟಿ ಸೃಷ್ಟಿಸಿಕೊಟ್ಟನು. ಅದನ್ನು ತೆಗೆದುಕೊಂಡೂ ಅವನು ಸಂತುಷ್ಟನಾಗಿ ಕಾಣಲಿಲ್ಲ. 'ಹಾಗಾದರೆ ನಿನಗೇನು ಬೇಕು?' ಎಂದು ದೇವಪುರುಷನು ಕೇಳಿದನು.

'ನನಗೆ ನಿನ್ನ ಬೆರಳು ಬೇಕು' ಎಂದ ಬಡಗೆಳೆಯ ದುರಾಶೆಯಿಂದ. ●





# ತುಷಾರಣ್ಣನ ಪತ್ರ

ಪ್ರಿಯ ಪುಟಾಣಿಗಳಿರಾ, ಹ್ಯಾಗಿದ್ದೀರಿ? ಸಂತೋಷದಿಂದ ಕಾಗದ ಬರೆದಿದ್ದೀರಿ. ಬೇಕಾದಷ್ಟು ಸಲಹೆ-ಸೂಚನೆಗಳನ್ನು ಈ ಸಲ ಕೊಟ್ಟುಬಿಟ್ಟಿದ್ದೀರಿ. 'ತುಷಾರ'ದ ಬಾಲಪ್ರಪಂಚ ತುಂಬಾ ಮೆಚ್ಚುಗೆಯಾಗಿದೆ ಎಂದು ಬರೆದಿದ್ದೀರಿ.

ಮೊದಲು ಪತ್ರ ಬರೆದವರ ಒಂದಿಷ್ಟು ಹೆಸರುಗಳನ್ನು ಹೇಳಿಬಿಡುತ್ತೇನೆ:

ಸೋಮವಾರಪೇಟೆಯಿಂದ ಜಿ. ಮೋಹನದಾಸ್, ತಾಳಿಕೋಟೆಯಿಂದ ಎಸ್. ಎ. ಕುಲಕರ್ಣಿ, ಮಂಡ್ಯದಿಂದ ವಿನಯಕೃಷ್ಣ ಕೆಕ್ಕಡ, ಬೆಂಗಳೂರಿನಿಂದ ವಿಜಯಶ್ರೀ ಅಡ್ಡಂಗಡಿ, ರಘುನಂದನ್ ಎ. ಜೋಶಿ, ರೇಖ ಎನ್ ('ಟೂ' ಏನೂ ಬೇಕಾಗಿಲ್ಲ, ನೀನು ಆಸೆಪಟ್ಟದ್ದನ್ನು ಬಾಲಪ್ರಪಂಚದಲ್ಲಿ ಆಗಾಗ ಕಾಣಿಸುತ್ತೇನೆ), ಬಿ. ಪಿ. ಸೌಮ್ಯ, ಕುಡ್ಲೂರಿನ ಮಕ್ಕಳು ಎ. ದಯಾನಂದ, ಕೆ. ಆರ್. ರುದ್ರಪ್ಪ, ಎನ್. ರುದ್ರೇಶ್, ಎ. ಬಸವರಾಜ್, ಕೆ. ಎಂ. ಶ್ರುತಿ, ದಕ್ಷಿಣ ಕನ್ನಡ ಜಿಲ್ಲೆಯ ಪ್ರವೀಣ್‌ಕುಮಾರ್, ಭಾಸ್ಕರ ಆಚಾರ್ಯ, ಮನೋಜ ಆಚಾರಿ, ಕೃಷ್ಣಕುಮಾರ್, ಎಡ್ವಿನ್ ಮೆಂಡೋನ್ಸಾ— ನೀವೆಲ್ಲಾ ಒಂದೇ ರೀತಿ ಅಕ್ಷರದಲ್ಲಿ ಒಂದೇ ರೀತಿ ಬರೆದಿದ್ದೀರಿ. ಒಬ್ಬೊಬ್ಬರು ಒಂದೊಂದು ರೀತಿ ಬರೆಯಬಹುದಿತ್ತಲ್ಲ?, ಮಂಜಬೆಟ್ಟುನಿಂದ ಸುರೇಖ ಮತ್ತು ಸುಜಾತ ಎಸ್. ಸೆಟ್ಟಿ, ಮೈಸೂರಿನಿಂದ ಸಿ. ಎಂ. ದೀಪ, ಗುಲಬರ್ಗಾದಿಂದ ಸಂಕೇತ. ರ. ಕರ್ಜಗಿ ಕುಮೇರಿ—ಕೊಕ್ಕರ್ಣೆಯಿಂದ ಸುರೇಖಾ ನಾಯಕ್ (ನಿನ್ನ ಅಪ್ಪ-ಅಮ್ಮ ಬುದ್ಧಿವಂತರು), ಉಳವಿಯಿಂದ ಅಕ್ಷಯ. ಆರ್. ಕಾರಂತ, ಪೆರುವಾಯಿಯಿಂದ ಬಾಲಸುಬ್ರಹ್ಮಣ್ಯ, ಮೈಸೂರಿನಿಂದ ಎನ್. ಶ್ರೀನಿಧಿ, ಅಥಣಿಯಿಂದ ಪೂರ್ಣಿಮಾ.

ಇನ್ನು— ನಿಮಗೇನು ಸ್ಪರ್ಧೆ ಬೇಕು ಎಂದು ಕೇಳಿದ್ದಕ್ಕೆ, ಒಬ್ಬೊಬ್ಬರು ಒಂದೊಂದು ಸಲಹೆ ಕೊಟ್ಟಿದ್ದೀರಿ. 'ನಮ್ಮ ಬುದ್ಧಿಶಕ್ತಿಗೆ ಛಾಲೆಂಜ್ ಮಾಡುವಂತಹ ಮತ್ತು ಯಾವುದಾದರೂ ವಿಷಯವನ್ನು ಅರಿಯುವಂತಹ ಸ್ಪರ್ಧೆಯನ್ನು ಇಡಬೇಕೆಂದು ನನ್ನ ಅನಿಸಿಕೆ'— ಎಂದು ಬೆಂಗಳೂರು ಮಿತ್ರಾ ಪ್ರೌಢಶಾಲೆಯ ವಿಜಯಶ್ರೀ ಅಡ್ಡಂಗಡಿ ಸೊಗಸಾದ ಸಲಹೆ ನೀಡಿದ್ದಾಳೆ.

'ಇದನ್ನೇ ಸರಿ' ಅಂದುಕೊಂಡು ನಾನು ನಿಮಗೊಂದು ಸ್ಪರ್ಧೆ ನೀಡಲೇ?

'ಕಾರಂತಜ್ಜನ ಹಾಗೆ ಕರ್ನಾಟಕದಲ್ಲಿ ಸಾಹಿತಿ ಅಜ್ಜಂದಿರು, ಅಜ್ಜಿಯರು ಯಾರ‍್ಯಾರು ಇದ್ದಾರೆ? ಅವರು ಯಾವ ಊರಿನವರು, ಈಗ ಎಲ್ಲಿ ವಾಸವಾಗಿದ್ದಾರೆ?'

ಬೇಕಾದರೆ ದೊಡ್ಡವರನ್ನು ಕೇಳಿ, ಒಂದು ಪೋಸ್ಟ್ ಕಾರ್ಡಿನಲ್ಲಿ ಬರೆದು ತಿಳಿಸಿ. ಪರೀಕ್ಷೆ ಸಮಯ ಬೇರೆ, ದೊಡ್ಡ ಪಟ್ಟಿ ಮಾಡುತ್ತ, ತಲೆಕೆಡಿಸಿಕೊಂಡು ಕುಳಿತುಬಿಡಬೇಡಿ, ಮತ್ತೆ!

5 ಎಪ್ರಿಲ್ ತಾರೀಖಿನೊಳಗೆ ಈ ಕೆಳಕಾಣಿಸಿದ ವಿಳಾಸಕ್ಕೆ ಬರೆಯಿರಿ:

**ತುಷಾರಣ್ಣ (ಬಾಲಪ್ರಪಂಚ)**
**ತುಷಾರ ಮಾಸ ಪತ್ರಿಕೆ**
**ಪ್ರೆಸ್ ಕಾರ್ನರ್, ಮಣಿಪಾಲ-576 119, ದ.ಕ.**

ನಿಮ್ಮ ಪ್ರೀತಿಯ, ತುಷಾರಣ್ಣ



# ಗುಡ್ಡದ ಭೂತ

ಮುಂಬಯಿಯ ಬ್ಯಾಂಕೊಂದರಲ್ಲಿ ಇಪ್ಪತ್ತೈದು ವರ್ಷ ದುಡಿದು ನಿವೃತ್ತನಾದ ಗಿರಿಯಪ್ಪ ತನ್ನ ಒಬ್ಬಳೇ ಮಗಳ ಜತೆ ಹುಟ್ಟೂರಿಗೆ ಬರುತ್ತಾನೆ. ಹಳೆಕಾಲದ ಮನೆಯೊಂದನ್ನು ಕಡಿಮೆ ಕ್ರಯಕ್ಕೆ ಕೊಂಡುಕೊಂಡು ತನ್ನ ನಿವೃತ್ತ ಜೀವನವನ್ನು ಸುಖವಾಗಿ ಕಳೆಯಬಯಸುತ್ತಾನೆ. ಆದರೆ, ಆ ಮನೆ ಪ್ರವೇಶಿಸಿದ ಮಾರನೆ ದಿನದಿಂದ ಒಬ್ಬೊಬ್ಬರೇ ನೆರೆಹೊರೆಯವರು ಬಂದು ಗುಡ್ಡದ ಭೂತದ ಕತೆ ಹೇಳುತ್ತಾರೆ. ಆ ಮನೆಯಲ್ಲಿ ಈಚೆಗೆ ನಾಲ್ಕೈದು ಒಕ್ಕಲಾಯಿತು, ಯಾರು ಬಂದರೂ ಒಂದೆರಡು ತಿಂಗಳಿಗಿಂತ ಹೆಚ್ಚು ಉಳಿಯುವುದಿಲ್ಲ, ಅಮಾವಾಸ್ಯೆಯ ಹೊತ್ತಿಗೆ ಭೂತದ ಉಪದ್ರ ಜಾಸ್ತಿ ಎಂದೆಲ್ಲಾ ಬೆದರಿಸುತ್ತಾರೆ. ಗಿರಿಯಪ್ಪ ಹೆದರಿ ಕಂಗಾಲಾಗುತ್ತಾನೆ. ಮಗಳು ರತ್ನ ಮುಂಬೈಯಲ್ಲಿ ಹುಟ್ಟಿ ಬೆಳೆದವಳಾದ್ದರಿಂದ ಇವನ್ನೆಲ್ಲ ನಂಬುವುದಿಲ್ಲ. ಆದರೂ ಅವಳೂ ಆಲೋಚಿಸುವಂತೆ ಕೆಲವು ಘಟನೆಗಳು ನಡೆಯುತ್ತವೆ.

ಆಗಲೇ ಅವಳ ಮುಂಬಯಿಯ ಸಹಪಾಠಿ ಶ್ರೀನಿವಾಸ ಬರುತ್ತಾನೆ. ಅವನು ಅಮಾವಾಸ್ಯೆಯ ರಾತ್ರಿಯೇ ಭೂತವನ್ನು ಎದುರಿಸುವ ಸಾಹಸ ಮಾಡುತ್ತಾನೆ. ಭೂತವನ್ನು ಎದುರಿಸುವ ಅವನ ಪ್ರಯತ್ನಕ್ಕೆ ಅಂಧಶ್ರದ್ಧರಾದ ಊರಿನ ಜನ ಪ್ರತಿಭಟಿಸುತ್ತಾರೆ.

ಕೊನೆಗೂ ಭೂತದ ವಿಷಯವನ್ನು ಬಹಿರಂಗಪಡಿಸುವ ಕೆಲಸ ಆಗುತ್ತದೆ.

ನಂಬಿಕೆಗಳು, ರೆಕ್ಕೆಪುಕ್ಕ ಕಟ್ಟಿ ಹಾರಾಡುವ ಕಥೆಗಳು ಇವಕ್ಕೆ ಕನ್ನಡಿ ಹಿಡಿಯುವ ಈ ಧಾರಾವಾಹಿ ದಕ್ಷಿಣ ಕನ್ನಡದ ಪರಿಸರದಲ್ಲಿ, ಸ್ಥಳೀಯ ಕಲಾವಿದರೊಂದಿಗೆ, ಅಲ್ಲಿಯ ಜಾನಪದ ಹಾಡು–ಕುಣಿತ–ಸಂಸ್ಕೃತಿ ಕಾಣಿಸುವಂತೆ ತಯಾರಾಗಿದೆ. ಇದೇ ಹೆಸರಿನ ಒಂದು ಯಶಸ್ವಿ ತುಳು ನಾಟಕವನ್ನಾಧರಿಸಿ ಇದು ರಚಿತವಾಗಿದೆ.

---

ಲೇಖಕ–ನಿರ್ಮಾಪಕ–ನಿರ್ದೇಶಕ : ಸದಾನಂದ ಸುವರ್ಣ
ಕಲೆ ಮತ್ತು ತಾಂತ್ರಿಕ ನಿರ್ದೇಶನ : ಗಿರೀಶ್ ಕಾಸರವಳ್ಳಿ
ಪ್ರತಿ ಸೋಮವಾರ ಸಂಜೆ ಏಳು ಘಂಟೆಗೆ ಪ್ರಸಾರ



# ಕನಸಿನ ಲೋಕ

ತನ್ನ ಹಳ್ಳಿಗೆ ಚಲನಚಿತ್ರ ನಿರ್ಮಾಣ ತಂಡವೊಂದು ಚಿತ್ರೀಕರಣಕ್ಕೆ ಬಂದಾಗ ನೀರು ಪಾಲಾಗಲಿದ್ದ ನಾಯಕಿಯನ್ನು ಕಾಪಾಡಿದ ಹಳ್ಳಿ ಹೈದ ವೆಂಕಟಪ್ಪ ತಾನೇ ಒಂದು ಸಿನಿಮಾ ನಿರ್ಮಿಸಬೇಕೆಂದು ಬಯಸುತ್ತಾನೆ. ಇದಕ್ಕಾಗಿ ತಂದೆಯೊಂದಿಗೆ ವಾದಮಾಡಿ ಆಸ್ತಿಯಲ್ಲಿ ಪಾಲುಪಡೆದು ಪಟ್ಟಣಕ್ಕೆ ಬರುತ್ತಾನೆ. ಇವನು ಕಾಪಾಡಿದ್ದ ಸೂಪರ್‌ಸ್ಟಾರ್ ನಾಯಕಿ ರಮ, ವೆಂಕಟಪ್ಪನೊಂದಿಗೆ ನಟಿಸಲು ತಾನು ಒಪ್ಪಿದ್ದೇನೆ ಎಂದಾಗ ಎಲ್ಲೆಲ್ಲೂ ಸುದ್ದಿಯಾಗುತ್ತದೆ. ಹಳ್ಳಿಯ ಬಸಕ್ಕ ಬೆಪ್ಪಾಗುತ್ತಾಳೆ.

ಚಿತ್ರೀಕರಣ ಪ್ರಾರಂಭವಾಗುತ್ತದೆ. ಖಳನಟ ನಾಗಪ್ಪ ಯಾವುದೊ ಬೇಸರದಿಂದ ಕೋಪಗೊಳ್ಳುತ್ತಾನೆ. ನಾಯಕಿ ರಮಾ ಹೊಸರೀತಿಯಲ್ಲಿ ಯೋಚಿಸುತ್ತಾಳೆ. ಕ್ಯಾಮೆರಾಮ್ಯಾನ್ ಕುಮಾರ್, ವೆಂಕಟಪ್ಪನನ್ನು ದೂರುತ್ತಾನೆ.

ನಾಯಕಿ ರಮಾ ಕ್ಯಾಮೆರಾಮ್ಯಾನ್‌ನ ಹಿಡಿತದಲ್ಲಿ ಸಿಕ್ಕಿ ನರಳುವಂತೆ ಆಗುತ್ತದೆ. ಯಾರೂ ನಿರೀಕ್ಷಿಸದ ಘಟನೆಯೊಂದು ನಡೆದುಹೋಗುತ್ತದೆ. ವೆಂಕಟಪ್ಪ ಯಾವ ಯಾವುದಕ್ಕೊ ಕಾರಣನಾಗುವಂತಾಗಿ ಆರೋಪಿಯ ಸ್ಥಾನದಲ್ಲಿ ನಿಲ್ಲಬೇಕಾಗಿ ಬರುತ್ತದೆ.

ವೆಂಕಟಪ್ಪ ಇವನ್ನೆಲ್ಲ ಮೆಟ್ಟಿ ನಿಂತು, ಸಾಧನೆಯ ಹೆಜ್ಜೆಹಾಕಿ, ಹಳ್ಳಿಯೇ ಚೆನ್ನ ಎಂದುಕೊಳ್ಳುವಂತಾಗುವ ಕಾಲವೂ ಬರುತ್ತದೆ.

---

ಕಥೆ–ಚಿತ್ರಕಥೆ–ಸಂಭಾಷಣೆ–ನಿರ್ದೇಶನ : ನಾಗೇಂದ್ರಕುಮಾರ್ ಜೈನ್
ನಿರ್ಮಾಪಕ : ಎಸ್. ವಿ. ಇಸ್ಲೂರ್
ಪ್ರತಿ ಶುಕ್ರವಾರ ಸಂಜೆ ಏಳು ಘಂಟೆಗೆ ಪ್ರಸಾರ



# ನಿಮ್ಮ ರಾಶಿಫಲ

(ಜನ್ಮದಿನಕ್ಕನುಗುಣವಾಗಿ)

● ಟೈನಿ

**ಮಾರ್ಚ್ 22ರಿಂದ ಏಪ್ರಿಲ್ 20:**

ಆತಂಕಿತ ದಿನಗಳು ಎದುರಿಗಿವೆ. ಉದ್ಯೋಗ ರಂಗದಲ್ಲಿ 7 ಮತ್ತು 18ರ ನಡುವೆ ಆಶ್ಚರ್ಯಕರ ಬೆಳವಣಿಗೆಗಳಾಗಬಹುದು. ಕೌಟುಂಬಿಕವಾಗಿ ನೆಮ್ಮದಿಯ ದಿನಗಳು, ಶುಭ ಸಮಾರಂಭದ ಸಾಧ್ಯತೆಯೂ ಇದೆ. ಸಾಮಾಜಿಕ ಬದುಕಿನಲ್ಲಿ ಎತ್ತರಕ್ಕೇರಬಹುದು. ಆರ್ಥಿಕವಾಗಿ ಯಾವುದೇ ತಾಪತ್ರಯ ಕಾಡದು, ವಿಲಾಸಿ ವಸ್ತುಗಳನ್ನೂ ಕೊಳ್ಳಬಹುದು, ಚರ್ಚೆಯಿಂದ ಲಾಭ ನಿಮಗಾಗ ಬಹುದು. ವೈಯಕ್ತಿಕ ಆರೋಗ್ಯದ ಬಗ್ಗೆ ಸ್ವಲ್ಪ ಎಚ್ಚರವಿರಲಿ.

**ಏಪ್ರಿಲ್ 21ರಿಂದ ಮೇ 21:**

ವ್ಯಾವಹಾರಿಕರಂಗದಲ್ಲಿ ಮತ್ತು ಜೀವನ ಗತಿಯ ಮುನ್ನಡೆಯಲ್ಲಿ ಕೈಗೆ ಬಂದದ್ದನ್ನು ಬಾಯಿಗೆ ತರಲು ಯೋಚಿಸುವಂತಾಗಬಹುದು. ಸ್ವಲ್ಪದರಲ್ಲೆ ಅವಕಾಶ ವಂಚಿತರಾಗುವ ಸಾಧ್ಯ ತೆಯೂ ಇದೆ. ಆದರೆ ಕೌಟುಂಬಿಕವಾಗಿ ನೆಮ್ಮ ದಿಯ ದಿನಗಳಿವು. ಯೋಗ್ಯ ವಯಸ್ಕರಿಗೆ ವಿವಾಹಯೋಗವಿದೆ. ಮನೆಗೆ ಹೊಸಬರ ಸೇರ್ಪಡೆ ಮತ್ತು ಮನೆ ಯಾ ಭೂಮಿ ಕೊಳ್ಳುವಿಕೆ ಬಗೆಗಿನ ಮಾತುಕತೆಗಳು ಯಶಸ್ವಿಯಾಗಿ ಮುನ್ನಡೆಯಬಹುದು. ಮನೆಮಂದಿಯ ಆರೋಗ್ಯದ ಬಗ್ಗೆ ಎಚ್ಚರವಿರಲಿ.

**ಮೇ 22ರಿಂದ ಜೂನ್ 21:**

ಚೇತರಿಕೆಯ, ಒಂದು ಬಗೆಯ ನಿರಾಳ ದಿನಗಳಿವು. ವ್ಯಾವಹಾರಿಕರಂಗದಲ್ಲಿ ಮತ್ತು ಜೀವನಗತಿಯಲ್ಲಿ ಪ್ರಾಮುಖ್ಯ ಬದಲಾವಣೆ ಗಳಾಗಬಹುದು. 6ರಿಂದ 22ರ ನಡುವೆ ಮನೆಯಲ್ಲೂ ಮಹತ್ತರ ಘಟನೆಯೊಂದೂ ಜರುಗಬಹುದು. ಆರ್ಥಿಕ ಬೆಳವಣಿಗೆಗಳೂ ನಿಮಗನುಕೂಲವಾಗಬಹುದು. ತಡೆಹಿಡಿಯಲ್ಪಟ್ಟ ಹಣವೂ ನಿಮ್ಮ ಕೈಸೇರಬಹುದು, ಬ್ಯಾಂಕ್ ಸಾಲವೂ ಸಿಗಬಹುದು. ಹೊಸ ಗೆಳೆತನ ಮತ್ತು ಸಹವರ್ತಿಗಳ ಲಾಭವೂ ಇಂಬು ನಿಮಗಾಗ ಬಹುದು.

**ಜೂನ್ 22ರಿಂದ ಜುಲೈ 23:**

ಜೀವನಗತಿಯಲ್ಲಿ ಅನಿರೀಕ್ಷಿತ ಬೆಳವಣಿಗೆ ಗಳು, ನೌಕರಿರಂಗದಲ್ಲಿ, ಮನೆಯಲ್ಲಿ ಆಶ್ಚರ್ಯ ಕರ ಏರಿಳಿತಗಳಾಗಬಹುದು. ಹೊಸ ಅನುಭವ ಗಳು, ದಿಢೀರ್ ಪ್ರವಾಸಗಳು, ಭೇಟಿಯ ಅವಕಾಶಗಳು, ಆರ್ಥಿಕವಾಗಿ ಬಳಲಿಕೆ, ಆತ್ಮೀಯರೊಬ್ಬರ ಅನಾರೋಗ್ಯ–ಇವೆಲ್ಲದರ ಸಾಧ್ಯತೆಯಿದೆ. ಆದರೆ ನೀವು ಎಲ್ಲ ಸಮಸ್ಯೆ ಗಳನ್ನೂ ಯಶಸ್ವಿಯಾಗಿ ನಿಭಾಯಿಸುವಿರಿ. ಅಲ್ಲದೆ ಕೆಲವು ಬಗೆಗಳಲ್ಲಿ ಅದೃಷ್ಟವೂ ನಿಮ್ಮ ಪರವಾಗಿರುವುದನ್ನು ಕಾಣುವಿರಿ.

**ಜುಲೈ 24ರಿಂದ ಆಗಸ್ಟ್ 21:**

ಆರ್ಥಿಕ ವ್ಯವಹಾರ ಮತ್ತು ಆರೋಗ್ಯ– ಇವೆರಡರಲ್ಲೂ ಹೆಚ್ಚಿನ ಮುಂಜಾಗ್ರತೆ ವಹಿಸಿ. ಆತ್ಮೀಯರೊಂದಿಗಿನ ವ್ಯವಹಾರದಲ್ಲೂ ಎಚ್ಚರ ವಿರಲಿ. ಜೀವನಗತಿಯ ನಡೆಯಲ್ಲಿ ಚಟುವಟಿ ಕೆಯ, ಮುನ್ನಡೆಯ ದಿನಗಳು. ಕೊನೆಯರ್ಧ ಮಾಸದಲ್ಲಿ ಕೌಟುಂಬಿಕವಾಗಿಯೂ ಸಂತಸದ ಬದುಕು. ವ್ಯವಹಾರ ಬಗೆಗಿನ ದೂರ ಪ್ರವಾಸ ಗಳಲ್ಲಿ ಯಶಸ್ಸು ಸಾಧಿಸುವಿರಿ. ಸಾಮಾಜಿಕ ಬದುಕಿನಲ್ಲೂ ನಿರಾಳ ಮುನ್ನಡೆ. ಪತ್ರಿಕೋದ್ಯಮಿ ಗಳಿಗೆ, ರಾಜಕೀಯರಂಗದಲ್ಲಿರುವವರಿಗೆ, ಕಲಾವಿದರಿಗೆ ಇವು ಒಳ್ಳೆಯ ದಿನಗಳು.

**ಆಗಸ್ಟ್ 22ರಿಂದ ಸೆಪ್ಟಂಬರ್ 21:**

ಜೀವನಗತಿಯಲ್ಲಿ ಮತ್ತು ವ್ಯಾವಹಾರಿಕ ರಂಗದಲ್ಲಿ ಇಂದು ನಿಶ್ಚಿತ ನೆಲೆಯಾಗುವ ಸಾಧ್ಯತೆ

ಅಧಿಕವಾಗಿದೆ. ಮನೆಯ ಪರಿಸ್ಥಿತಿಯಲ್ಲೂ ಸ್ವಲ್ಪ ಹಿನ್ನಡೆಯಾದರೂ ಬಳಿಕ ಎಲ್ಲವೂ ಸರಿಹೋಗುವುದು. ಸಾಮಾಜಿಕ ಬದುಕಿನಲ್ಲಿ ಹೆಚ್ಚಿನ ಜನಪ್ರಿಯತೆ ಸಾಧಿಸುವಿರಿ. ದೂರದಲ್ಲಿರುವವರಿಂದಲೂ ಸಕಾಲಿಕ ನೆರವು ದೊರೆಯಬಹುದು. ಕೊಡು–ಕೊಳ್ಳುವಿಕೆಯಲ್ಲೂ ಲಾಭಗಳಿಸುವಿರಿ. ಆಶ್ಚರ್ಯಕರ ಮತ್ತು ಆಘಾತದ ಸುದ್ದಿ ಕೇಳುವ ಸಂಭವವೂ ಇದೆ.

**ಸೆಪ್ಟಂಬರ್ 22ರಿಂದ ಅಕ್ಟೋಬರ್ 23:**

ಯಾವುದೇ ವ್ಯವಹಾರದಲ್ಲಿ ದುಡುಕಿ ದಿಢೀರ್ ನಿರ್ಧಾರ ಕೈಗೊಳ್ಳದಿರಿ. ಪ್ರತಿಯೊಂದು ಹೆಜ್ಜೆಯಿಡುವ ಮೊದಲೂ ಎರಡೆರಡು ಬಾರಿ ಯೋಚಿಸಿ. ನೌಕರಿರಂಗದಲ್ಲೂ ಹೇಳಿಕೊಳ್ಳುವಷ್ಟು ನಿರಾಳ ಮುನ್ನಡೆ ಸಾಧ್ಯವಾಗದು. ಪರಿಸರವನ್ನು ಅವಲೋಕಿಸಿ ಜಾಗರೂಕರಾಗಿ ಮುಂದಡಿಯಿಡಿ. ಮನೆಯಲ್ಲಿ ಹೇರಳ ಖರ್ಚಿನ ಜವಾಬ್ದಾರಿಯೂ ನಿಮ್ಮ ಮೇಲೆಯೇ ಬೀಳಬಹುದು, ಆದರೆ ಆರ್ಥಿಕವಾಗಿ ಹೆಚ್ಚಿನ ತಾಪತ್ರಯವಾಗದು.

**ಅಕ್ಟೋಬರ್ 24ರಿಂದ ನವೆಂಬರ್ 21:**

ಇಂದು ಅದೃಷ್ಟ ನಿಮಗನುಕೂಲವಾಗಿದೆ ಎನ್ನುವುದನ್ನು ಮರೆಯದಿರಿ. ನೌಕರಿಯಲ್ಲಿ ಬದಲಾವಣೆ, ಸಂದರ್ಶನದಲ್ಲಿ ಯಶಸ್ಸು, ಮನೆಗೆ ಹೊಸಬರ ಸೇರ್ಪಡೆ—ಈ ಮಾಸದ ಪ್ರಮುಖ ಘಟನೆಗಳಾಗಬಹುದು. ಸಂತಸದ ರಜಾದಿನದ ಯೋಜನೆ ಹಮ್ಮಿಕೊಳ್ಳಬಹುದು. ಕೆಲವರಿಗೆ ಉದ್ಯೋಗರಂಗದಲ್ಲಿ ಮಹತ್ತರ ಬದಲಾವಣೆಯ ಸಾಧ್ಯತೆಯೂ ಇದೆ. ಮನೆಯಲ್ಲಿ ನಿರಾಳ ಮುನ್ನಡೆ, ಸಂತಸದ ಸಮಾರಂಭವೂ ನಡೆಯಬಹುದು.

**ನವೆಂಬರ್ 22ರಿಂದ ಡಿಸೆಂಬರ್ 21:**

ವೈಯಕ್ತಿಕ ಪ್ರಗತಿಗೆ ಇದು ಯೋಗ್ಯ ಕಾಲ. ನೌಕರಿರಂಗದಲ್ಲೂ ಯಶಸ್ವೀ ಮುನ್ನಡೆ ಸಾಧಿಸುವಿರಿ. ದೀರ್ಘಕಾಲದ ಕನಸುಗಳನ್ನು ಸಾಕಾರಗೊಳಿಸಲೂ ಯತ್ನಿಸಬಹುದು. ಆದಾಯ ಮೂಲಗಳೂ ಹೆಚ್ಚಬಹುದು. ಕೌಟುಂಬಿಕವಾಗಿಯೂ ನೆಮ್ಮದಿಯ ದಿನಗಳು, ವಿಶೇಷ ಸಮಾರಂಭವೊಂದರ ಸಾಧ್ಯತೆಯೂ ಇದೆ. ಪ್ರಶಾಂತ ಪರಿಸರದಲ್ಲಿ ರಜಾದಿನ ಕಳೆವ ಯೋಗ ವಿದೆ.

**ಡಿಸೆಂಬರ್ 22ರಿಂದ ಜನವರಿ 20:**

ದೈನಂದಿನ ಬದುಕಿನಲ್ಲಿ ಒಂದು ಬಗೆಯ ಹೊಸತನ, ಅನುಕೂಲಕರ ವಾತಾವರಣ ಸೃಷ್ಟಿಯಾದಂತೆ ನಿಮಗೆ ಭಾಸವಾಗಬಹುದು. ಉದ್ಯೋಗರಂಗದಲ್ಲೂ ಯಾಂತ್ರಿಕ ಬೆಳವಣಿಗೆಗಳು. ಕೌಟುಂಬಿಕ ಬದುಕಿನಲ್ಲೂ ಯಶಸ್ವಿಯಾಗಿ ಮುನ್ನಡೆಯುವಿರಿ. ಕೆಲವರಿಗೆ ಅನಾರೋಗ್ಯ ಕಾಡಬಹುದು. ಸಂಬಂಧಿಯೋರ್ವರ ಬಗ್ಗೆ ಆಘಾತಕರ ಸುದ್ದಿ ಬರಬಹುದು. ಕೊಡು–ಕೊಳ್ಳುವಿಕೆಯಲ್ಲಿ ಸ್ವಲ್ಪ ಎಚ್ಚರದಿಂದಿರಿ. ಆರ್ಥಿಕವಾಗಿಯೂ ಯಾವುದೇ ತಾಪತ್ರಯ ಕಾಡದು.

**ಜನವರಿ 21ರಿಂದ ಫೆಬ್ರವರಿ 19:**

ಅನುಕೂಲಕರ ಬೆಳವಣಿಗೆಗಳಿಂದಲೇ ಮಾಸವನ್ನು ಆರಂಭಿಸುವಿರಿ. ಹಿಂದಿನ ಯತ್ನಗಳು ಈಗ ಫಲ ನೀಡಬಹುದು. ಜೀವನ ಗತಿಯಲ್ಲಿ ಮತ್ತು ಕೌಟುಂಬಿಕ ಬದುಕಿನಲ್ಲಿ ಮಹತ್ತರ ಬದಲಾವಣೆಗಳಾಗಬಹುದು. ನೌಕರಿರಂಗದಲ್ಲೂ ವರ್ಗಾವಣೆಯ–ಭಡ್ತಿಯ ಸಾಧ್ಯತೆ ಅಧಿಕವಾಗಿದೆ. ವೈಯಕ್ತಿಕ ಬದುಕಿನಲ್ಲೂ ಹಲವಾರು ಏರಿಳಿತಗಳು ಸಂಭವಿಸಬಹುದು. ಒಬ್ಬಂಟಿಗಳಿಗೆ ವಿವಾಹ ಯೋಗ ಇದೆ. ಸಾಮಾಜಿಕವಾಗಿಯೂ ಹೆಚ್ಚಿನ ಜನಪ್ರಿಯತೆ ಗಳಿಸುವಿರಿ.

**ಫೆಬ್ರವರಿ 20ರಿಂದ ಮಾರ್ಚ್ 21:**

ನಿಮ್ಮ ಹಲವಾರು ಕನಸುಗಳು ಇಂದು ನನಸಾಗಬಹುದು, ಹೊಸ ಆಶಯಗಳೂ ಸ್ಪಷ್ಟ ರೂಪ ತಾಳಬಹುದು. ದೀರ್ಘ ಕಾಲದಿಂದ ಕಾಯುತ್ತಿದ್ದ ಸುದ್ದಿಯೊಂದು ಮೊದಲರ್ಧ ಮಾಸದಲ್ಲಿ ನಿಮಗೆ ಬರಬಹುದು. ಕೌಟುಂಬಿಕ. ಅಗತ್ಯಗಳೂ ಹೆಚ್ಚಬಹುದು. ಆದರೆ ನೀವದನ್ನು ಯಶಸ್ವಿಯಾಗಿ ತಮ್ಮದನ್ನಾಗಿಸಿಕೊಳ್ಳುವಿರಿ. 10ರಿಂದ 23ರ ನಡುವೆ ಉದ್ಯೋಗರಂಗದಲ್ಲೂ ವಿಶೇಷ ಬೆಳವಣಿಗೆಗಳಾಗಬಹುದು. ●

ಕಾದಂಬರಿ

# ರಂಗನ ಅವತಾರ

● ಯಜ್ಞಾವತಿ ಕೇಶವ್ ಕಂಗೆನ್
'ಇಂದಿರಾನಗರ',
ಹ್ಯೊಗೆಬಜಾರ್, ಮಂಗಳೂರು

ನವರಾತ್ರಿ ಹಬ್ಬ, ಬಂತೆಂದರೆ ಸಾಕು ವೇಷಗಳ ಹಾವಳಿ ಪ್ರಾರಂಭವಾಯಿತೆಂದೇ ಲೆಕ್ಕ. ಅದರಲ್ಲೂ ದೊಡ್ಡವರ ದೊಡ್ಡ ವೇಷಕ್ಕಿಂತ ಚಿಕ್ಕವರ ಚಿಲ್ಲರೆ ವೇಷದ ಕಾಟವೇ ಹೆಚ್ಚೆನ್ನ ಬಹುದು. ಮಸಿಯನ್ನೋ ಬಣ್ಣದ ಚಾಕನ್ನೋ ಗುದ್ದಿ ಪುಡಿ ಮಾಡಿ ಮುಖ, ಮೈಗೆಲ್ಲಾ ಮೆತ್ತಿ ಕೊಂಡು, ಸಿದ್ದಿ, ಚಟ್ನಿ, ರೊಟ್ಟಿ ವೇಷವೆಂದು ದಿನಕ್ಕೊಂದು ಹೆಸರಿನಿಂದ ಬಂದು ಬಂದು ಪೀಡಿಸುವುದು ಇವರ ಹವ್ಯಾಸ. ಇಂಥವರಿಗೆಲ್ಲಾ ಹಣ ಕೊಡುವಾಗ ಗೊಣಗುವುದು ಕೆಲವರ ಅಭ್ಯಾಸ. ಹಾಗೆಂದು ನೋನಯ್ಯಣ್ಣನ ಸಾರ್ದುಲ (ಶಾರ್ದೂಲ) ಮುತ್ತಪ್ಪಣ್ಣನ ಪಿಲಿತ್ಯಾಸ (ಹುಲಿವೇಷ) ಕಿಟ್ಟಪ್ಪಣ್ಣನ ಸಿರಿಯಾಸ (ಸ್ತ್ರೀ ವೇಷ)ಗಳಂತಹ ಹೆಸರುವಾಸಿ ತಂಡಗಳನ್ನು ಕರೆದು ಆಡಿಸಿ ಗತ್ತು ತೋರಿಸುವವರೂ ಇಲ್ಲ ವೆಂದಿಲ್ಲ.

**ಬದುಕಲು ಬೇರೆ ಮಾರ್ಗ ಹುಡುಕದೆ ಬಣ್ಣದ ಗೀಳು ಹತ್ತಿದ ರಂಗ ಮೊದಲು ರಂಗಪ್ರವೇಶ ಮಾಡಿದಾಗ 'ದಂತಭಗ್ನ'ವಾಯಿತು. ಆದರೆ, ಅದೇ ನಾಟಕದ ವೇಷ ಅವನ ಬದುಕಿಗೊಂದು ತಿರುವನ್ನೂ ಕೊಟ್ಟುಬಿಡಬೇಕೇ?**

ಅಂದು ದಸರೆಯ ಕೊನೆಯ ದಿನ. ಅವರು ಇವರು ಎನ್ನದೆ ಎಲ್ಲರಿಗೂ ವೇಷ ಧರಿಸಿ ನಾಲ್ಕು ಕಾಸು ಗಳಿಸುವಾಸೆ. ಸೀರೆ, ರವಿಕೆ ತೊಟ್ಟು ಕೈಯಲ್ಲಿ ಹಿತ್ತಾಳೆ ತಂಬಿಗೆ ಹಿಡಿದು ಬಳುಕುತ್ತಾ ಬಂದ ಒಬ್ಬ ಹಾಲಿನ ವೇಷಧಾರಿ. ಅವನ ಉಡುಗೆಯನ್ನೇ ದಿಟ್ಟಿಸುತ್ತಿದ್ದಳು ಗಂಗಕ್ಕನ ಸೊಸೆ ರತ್ನ! ಬೆಳಗ್ಗೆ ತಾನು ಒಗೆದು ಒಣಹಾಕಿ ರುವ ಬಟ್ಟೆಗಳು ಕಾಣೆಯಾಗಿದ್ದು ಇದೀಗ ಅವೆರಡೂ ಇವನ ಮೈಮೇಲೆ ಹೇಗೆ ಬಂತು? ಎನ್ನುವುದೇ ಅವಳ ಅಚ್ಚರಿಗೆ ಕಾರಣ. ರತ್ನಳ ಮುಖದಲ್ಲಿದ್ದ ಬೆರಗನ್ನು ಕಂಡ ವೇಷದವನು ನಸುನಗುತ್ತಾ ಬಳಿ ಬಂದು,

"ಹಾಲಿನ ದುಡ್ಡು ಕೊಡಿಯಮ್ಮಾ ಹೊತ್ತಾಗಿ ಹೋದ್ರೆ ನನ್ಗಂಡ ಬೈತಾನೆ" ಎಂದು ವೈಯಾರ ವಾಗಿ ನುಡಿದು ಅವಳ ಜಡೆ ಹಿಡಿದೆಳೆದನು. ಒಡನೆ ವೇಷ ನೋಡಲು ಸುತ್ತುವರಿದವರೆಲ್ಲ "ಹೋ..." ಎಂದು ಜೋರಾಗಿ ನಗಬೇಕೆ? ಅವಮಾನದೊಂದಿಗೆ ಅಪರಿಚಿತನ ಅಧಿಕ ಪ್ರಸಂಗತನ ರತ್ನಳನ್ನು ಕೆರಳಿಸಿತು. ದೊಡ್ಡದಾಗಿ ಕಣ್ಣು ಬಿಟ್ಟ ಅವಳು,

"ಏಯ್... ನಡೀತೀಯೋ ಇಲ್ಬೋ ಇಲ್ಲಿಂದ? ಬಂದಿದ್ದೇನೋ ಹತ್ತು ಪೈಸೆ ಭಿಕ್ಷೆ ಗಾದ್ರೂ ಎಷ್ಟೊಂದು ಸೊಕ್ಕೋ ನಿನಗೆ?" ಎಂದಾಗ ನೆರೆದವರ ನಡುವೆ ಮತ್ತೊಮ್ಮೆ



ನಗುವಿನ ಅಲೆ ಎದ್ದಿತು.

"ಹೇ... ರತ್ನಕ್ಕ ಚಂಡಿ ಬೈರಾಸ್! ಏನಕ್ಕಾ ನೀನು ರಂಗಣ್ಣನನ್ನೇ ಬೈತಿದ್ದೀಯಲ್ಲಾ?" ನೆರೆಮನೆಯ ವಿಶ್ವನೆಂದಾಗ ರತ್ನ ಬೆರಗಾದಳು. ಕ್ಷಣ ಹೊತ್ತು ಹೆಣ್ಣು ವೇಷದ ಗಂಡನನ್ನೇ ನೋಡಿದಳು. ಅವನು ಕಣ್ಣು ಮಿಟುಕಿಸಿದಾಗ ಮತ್ತೊಂದು ಘಳಿಗೆಯೂ ಅಲ್ಲಿ ನಿಲ್ಲಲಾರದೆ ನಾಚಿ ಒಳಗೋಡಿದಳು. ಎಲ್ಲರಿಗೂ ಈ ಪ್ರಸಂಗ ಬಲು ಮೋಜೆನಿಸಿತು.

ಹೆತ್ತ ತಾಯಿ ಕಡೆಗೆ ಕೈಹಿಡಿದ ಹೆಂಡತಿಯೂ ಗುರುತಿಸಲಾರದಂತಿರುವ ತನ್ನ ಉಡುಪನ್ನು ಕಳಚುವ ಮೊದಲು ಒಂದು ಫೋಟೋ ತೆಗೆಸ ಬೇಕು ಎಂದೆನಿಸಿತು ರಂಗನಿಗೆ. ಚೌರಿ ಕೂದಲಿ ನಿಂದ ಹೆಣೆದಿದ್ದ ಎರಡು ಜಡೆಗಳನ್ನು ಎದೆಯ ಮೇಲಿಂದ ಇಳಿಬಿಟ್ಟು, ಕಣ್ಣಿಗೆ ಕಪ್ಪು ಕನ್ನಡಕ ವನ್ನಿಟ್ಟು, ಕೈಯಲ್ಲಿ ತಂಬಿಗೆ ಹಿಡಿದು ರಂಗ ಫೋಟೋಗೆ ಫೋಸ್ ಕೊಟ್ಟ.

"ಅರರೆ...! ಇದೆಂತದು ಮಾರಾಯ! ಥೇಟ್ ಹುಡುಗಿಯಂತೆ ಕಾಣ್ತೆಯಲ್ಲೋ ನೀನು? ಏನು ಚೆಂದದ ಮೈಕಟ್ಟಪ್ಪಾ ನಿಂದು? ಅಂತೂ ನಾಟಕದಲ್ಲಿ ಹೆಣ್ಣು ಪಾರ್ಟು ಮಾಡಲು ನೀನು ಲಾಯಕಿದ್ದೀ ನೋಡು" ಫೋಟೋ ಕಂಡ ಗೆಳೆಯರ ಮೆಚ್ಚಿಕೆ ಕೇಳಿ ಉಬ್ಬಿಹೋದ ರಂಗ.

ಮೊದಲೇ ಅವನು ನಾಟಕ, ಬಯಲಾಟದ ಖಯಾಲಿ ಉಳ್ಳವನು. ಆಗಾಗ ಅದರ ಹಾಡು, ಸಂವಾದಗಳನ್ನು ಗೆಳೆಯರೆದುರು ಹಾಡಿ, ಅಭಿನಯಿಸಿ ಅವರನ್ನು ಖುಶಿಪಡಿಸುತ್ತಲೂ ಇದ್ದನು. ಇಂದು ಅವರೆಲ್ಲರ ಹೊಗಳಿಕೆ ಅವನನ್ನು ನಾಟಕಕ್ಕೆ ಸೇರಲು ಪ್ರೇರೇಪಿಸಿ ದಂತಾಯಿತು. ಮನದಲ್ಲಿ ಆಸೆ ಆಸಕ್ತಿಯೂ ಚಿಗುರೊಡೆಯತೊಡಗಿತು.

ಜಾತ್ರೆ, ಉತ್ಸವಗಳಿಗೆಂದೇ ಹುಟ್ಟಿಕೊಂಡಿದ್ದ ನಾಟಕದ ತಂಡ ಒಂದು ಮಂಗಳಾದೇವಿ ದೇವಸ್ಥಾನದ ಪಕ್ಕದಲ್ಲೇ ಚಪ್ಪರ ಕಟ್ಟಿ ಕೊಂಡಿತ್ತು. ಇದು ರಂಗನ ಆತುರಕ್ಕೆ ಅನು ಕೂಲವೇ ಆಯಿತೆನ್ನಬೇಕು. ಮತ್ತೆ ತಡಮಾಡದ ಅವನು ಭಾವಚಿತ್ರದೊಂದಿಗೆ ಬಂದು ತಂಡದ ಯಜಮಾನನನ್ನು ಭೇಟಿಯಾದನು. ನಾಟಕದಲ್ಲಿ ಪಾರ್ಟು ಮಾಡಲು ತನಗೂ ಅವಕಾಶ ಕೊಡ ಬೇಕೆಂದು ಕೇಳಿಕೊಂಡನು. ಇರುವ ನಟರಿಗೇ ಸಂಬಳ ಕೊಡಲು ನಾನು ಪೇಚಾಡುತ್ತಿದ್ದರೆ ಇದೊಂದು ಪೀಡೆ ಎಲ್ಲಿಂದ ಬಂತಪ್ಪಾ ಎಂದು ಮನದಲ್ಲೇ ಕುದಿದ ಯಜಮಾನ.

"ಹೋಗಯ್ಯಾ ಹೋಗೋಗು ಕೆಲ್ಸ-ಗಿಲ್ಸ ವೇನೂ ಇಲ್ಲಿ ಖಾಲಿ ಇಲ್ಲ" ಎನ್ನುತ್ತಿದ್ದಂತೆ ರಂಗ ನೀಡಿದ್ದ ಭಾವಚಿತ್ರವನ್ನತ್ತ ಎಸೆದನು.



"ಸದ್ಯ ಸಂಬ್ಳ ಗಿಂಬ್ಳ ಕೊಡದಿದ್ರೂ ಪರ್ವಾಗಿಲ್ಲ ಸ್ವಾಮಿ. ಒಂದೂಟ, ಕಾಫಿ ಕೊಟ್ರೂ ಸಾಕು. ಕಲಾಮಾತೆಯ ಸೇವೆ ಮಾಡಿಕೊಂಡು ನಿಮ್ಮೊಡ ನಿದ್ದುಬಿಡ್ತೇನೆ" ತನ್ನಾಸೆಯನ್ನು ತೋಡಿ ಕೊಂಡನು. ತಕ್ಷಣ ನಾರ್ಣಪ್ಪಯ್ಯನ ಮನ ಹರ್ಷದಿಂದ ಹಿಗ್ಗಿತು. ಸದಾ ಸಾಲದಲ್ಲಿ ಮುಳುಗಿರುತ್ತಿದ್ದ ಅವನು ಇಂತಹ ಪುಕ್ಕಟೆ ಕಲಾವಿದರಿಗೆ ಮೊದಲ ಸ್ಥಾನ ನೀಡುತ್ತಿದ್ದನು. ಆದರೂ ತನ್ನ ಅಶಕ್ತತೆಯನ್ನು ತೋರ್ಪಡಿಸದೆ,

"ಎಲ್ಲಿ? ಇಲ್ಲಿ ತಾ ನಿನ್ನ ಫೋಟೋವನ್ನು" ರಂಗನ ಕೈಲಿದ್ದುದನ್ನು ಪಡೆದನು. ತಿರುಗಿಸಿ ಮುರುಗಿಸಿ ದೂರ, ಹತ್ತಿರ ಹಿಡಿದು ಅದನ್ನು ಪರಿಶೀಲಿಸುವವನಂತೆ ನಟಿಸಿದನು. ಬಳಿಕ ಮುಖದ ಗಂಭೀರತೆಯನ್ನು ಸಡಿಲಿಸುತ್ತಾ "ದುಡ್ಡು ಕಾಸಿಗಿಂತ ಕಲೆಗೆ ಬೆಲೆ ಕೊಡುತ್ತಿರುವ ನಿನ್ನಂತಹ ಕಲಾವಿದರನ್ನು ಆದರಿಸದಿದ್ದಲ್ಲಿ ಕಲಾಮಾತೆ ನನಗೆ ಮುನಿಯದಿರುವಳೇನಪ್ಪಾ? ಸ್ಸ...ರಿ ನಿನ್ನದೊಂದು ಎಡ್ರಾಸ್ ಕೊಟ್ಟುಬಿಡು. ಮತ್ತೆಲ್ಲಾ ಮುಂದಕ್ಕೆ ತಿಳಿಸುವೆನು" ಇಷ್ಟು ಹೇಳಿ ರಂಗನಿಗಾಗಿ ಒಂದು ಸೀಟನ್ನು ತನ್ನ ಮನದಲ್ಲಿ

ಕಾದಿರಿಸಿಕೊಂಡನು ನಾಟಕದ ನಾರ್ಣಪ್ಪಯ್ಯ.

ದಸರೆ ಮುಗಿದೊಡನೆ ಕಾಸರಗೋಡಿನಲ್ಲಿ ಕ್ಯಾಂಪ್ ಹೂಡಿತು ನಾಟಕದ ತಂಡ. ಇಷ್ಟರಲ್ಲಿ ಸಂಬಳ ಸಾಲದೆನ್ನುವ ಅಸಮಾಧಾನದಿಂದ ಒಬ್ಬೊಬ್ಬರಾಗಿ ನಟರೆಲ್ಲರೂ ಹೊರಟು ಹೋಗಿದ್ದರು. ಮತ್ತೆ ಅಲ್ಲಿ ಉಳಿದವರೆಂದರೆ ನಾರ್ಣಪ್ಪಯ್ಯನ ಅಳಿಯ ಮಹಾಬಲ ಮತ್ತು ಇನ್ನಿಬ್ಬರು ಗಂಡು ಮಕ್ಕಳು ಮಾತ್ರ. ನಾಟಕ ನಿಲ್ಲಿಸಿಬಿಟ್ಟರೆ ಹೊಟ್ಟೆಗೆ ಹಿಟ್ಟಿಲ್ಲ. ಕಟ್ಟಿ ಕೊಳ್ಳೋಣವೆಂದರೆ ಸಾಕಷ್ಟು ಮಂದಿ ನಟರಿಲ್ಲ. ಇಂತಹ ಸಂದಿಗ್ಧತೆಯಲ್ಲಿ ಸಿಲುಕಿದ್ದ ನಾರ್ಣಪ್ಪಯ್ಯನಿಗೆ ಕೂಡಲೇ ರಂಗನ ಜ್ಞಾಪಕ ಬಂದುದು ಸಹಜವೆ.

ತಂತಿ ಬಂದಾಗ ಎಂದಿನಂತೆ ರಂಗ ಊರ ಮುಂದಿನ ಮುರುಕು ಮಂಟಪದೊಳಗೆ ಇಸ್ಪೀಟಿ ನಾಟದಲ್ಲಿ ಮಗ್ನನಾಗಿದ್ದ. ಶಂಭಟ್ರ ಮಗ ಶಿವಣ್ಣ, ಗೂಡಂಗಡಿಯ ಮುದರನ ತಮ್ಮ ವಿಠಲ, ಗುಡ್ಡೆಮನೆಯ ಸುಂದರನಂತಹ ನಿರುದ್ಯೋಗಿ ಯುವಕರೇ ರಂಗನ ಪ್ರಾಣ ಹಾಗೂ ಇಸ್ಪೀಟು ಮಿತ್ರರಾಗಿದ್ದರು. ಇವರಲ್ಲಿ ಎರಡು ವರ್ಷ ಹೈಸ್ಕೂಲು ಮೆಟ್ಟಲೇರಿದವನೆಂದರೆ ಶಿವಣ್ಣನೊಬ್ಬನೆ.

ಪೇದೆಯಿಂದ ತಂತಿ ಓದಿಸಿ ವಿಷಯ ತಿಳಿದ ತಾಯಿ, ಮಗನಿಗೆ ಸುದ್ದಿ ಮುಟ್ಟಿಸಲೆಂದು ಓಡೋಡಿ ಬಂದಳು. ವಿದ್ಯೆಯ ಮಹತ್ವವನ್ನರಿಯದ ಗಂಗಕ್ಕನ ಏಕಮಾತ್ರ ಪುತ್ರ ಮೂರನೇ ತರಗತಿಗೆ ಶಾಲೆ 'ಒಲ್ಲೆ'ನೆಂದಾಗ ಅವನಿಗೆ ಅಡ್ಡಿ ಮಾಡದೆ ಮುದ್ದು ಮಾಡಿದ್ದಳು ತಾಯಿ. ಬಾಲ್ಯ ಕಳೆದು ಚಿಗುರುಮೀಸೆ ಮೂಡಿದರೂ ವಿದ್ಯೆ, ಉದ್ಯೋಗವಿಲ್ಲದ ಮಗ, ಉಂಡಾಡಿಯಾದಾಗ ಗಂಗಕ್ಕನಿಗೆ ತನ್ನ ತಪ್ಪಿನ ಅರಿವಾಯಿತು. ಪಶ್ಚಾತ್ತಾಪ, ಅಸಹಾಯಕತೆ ಅವಳನ್ನು ಬಾಧಿಸಿದಾಗ ಮಗನ ಗೆಳೆಯರನ್ನು ಕಂಡೊಡನೆ ಕೆಂಡವಾಗತೊಡಗಿದಳು. "ಅಪ್ಪಾ... ರಂಗಣ್ಣಾ ನಿನ್ನ ವಯಸ್ಸಿನ ಹುಡುಗರೆಲ್ಲ ಬರವು ಸರವು ಕಲ್ತು ಕೈತುಂಬಾ ಗಳಿಸುತ್ತಿದ್ದರೂ ನಿಂಗೆ ಮಾತ್ರ ಮುಕ್ಕಾಲೂ ಸಂಪಾದನೆ ಇಲ್ಲವಲ್ಲೋ ಮಗಾ? ಹೋಗಲಿ ಬಿಡು ನೀನು ರಾತ್ರಿ ಸಾಲೆಗಾದರೂ ಸೇರಿ ಇದ್ದೆ ಬುದ್ದಿ ಕಲ್ತುಕೊಳ್ತಿಯೇನಪ್ಪಾ?"

"ಹೋಗಮ್ಮ ನೀನೊಬ್ಬಳು! ಈ ನಿನ್ನ ಸಾಲೆ-ಗೀಲೆ ಎಲ್ಲ ಯಾರಿಗೆ ಬೇಕು? ನಿಂಗೆ ಬೇಕಿದ್ರೆ ಹೋಗಲ್ಲಾ ಯಾರು ಬೇಡಾಂತಾರೆ?"

"ಹಾಗಲ್ವೋ ಮಗಾ ಇದ್ಯೆ, ಉದ್ಯೋಗ ಇಲ್ಲದವರಿಗೆ ಯಾರು ಹೆಣ್ಣು ಕೊಡ್ತಾರೆ ಹೇಳು? ನಿನಗೋ ಎರಡೂ ಇಲ್ಲವಲ್ಲಾ? ಅಂದ್ಮೇಲೆ ನಿಂಗೆ ಮದುವೆಯಾಗೋದಾದ್ರೂ ಹೇಗೆ? ನಂಗೆ ಸೊಸೆ ಬರೋದಾದ್ರೂ ಹೇಗೆ?"

"ಇದೊಳ್ಳೆ ತಮಾಷೆಯಾಯ್ತಲ್ಲಾ ನಿಂದು? ಅಪ್ಪ ಏನು ಸಾಲೆ ಕಲ್ತು ಕೆಲ್ಸ ಮಾಡಿಯೇ ನಿನ್ನನ್ನು ಮದ್ವೆಯಾದ್ದೆ? ಅದೆಲ್ಲ ಏನೂ ಇಲ್ದಿದ್ರೂ ನಿನ್ನಪ್ಪ ನನ್ನಪ್ಪನಿಗೆ ಹೆಣ್ಣು ಕೊಡ ಲಿಲ್ವೆ? ನೀನು ಸೊಸೆಯಾಗಿ ಬಂದಿಲ್ವೆ?" ತನ್ನ ಮಾತನ್ನೇ ತನಗೆ ಹಿಂದಿರುಗಿಸಿದಾಗ ತಾಯಿಯ ಬಾಯಿ ಕಟ್ಟಿಹೋಯಿತು. ಇದ್ದ ವಿಷಯವನ್ನೇ ಅವನು ನಕ್ಕು ನುಡಿದಿದ್ದರೂ ಅವಳ ಮನ ನೊಂದಿತ್ತು.

ಹೆಂಡತಿಯ ಕಾಲ್ಗುಣದಿಂದಾದರೂ ಮಗ ದಾರಿಗೆ ಬಂದಾನು ಎನ್ನುವ ಆಸೆಯಿಂದ ತನ್ನ ಬಳಗದ ಹುಡುಗಿಯನ್ನೇ ಸೊಸೆಯಾಗಿ ತಂದಳು. ಆದರೇನು ಓಟೆಗೆ ಹಾಕಿದ ನಾಯಿಯ ಬಾಲದಂತೆ ರಂಗ ದಿನಾ ಆಟದಲ್ಲೇ ರಂಗಾಗುತ್ತಿದ್ದ.

"ರಂಗಾ... ಲೋ ರಂಗಣ್ಣಾ... ಬಾರೋ ಇಲ್ಲಿ ತಂತಿ ತಕೊಳ್ಳು ಬಾ" ಅಷ್ಟು ದೂರದಿಂದಲೇ ಕೂಗಿದಳವಳು. ರಂಗ ಗಡಬಡಿಸಿ ಆಟ ಬಿಟ್ಟು ಮೇಲೆದ್ದ. ಗಂಗಕ್ಕನ ಬಾರೀ ಮೋಕೆಯ ಮಗನಾದರೂ ಅವನು ತಾಯಿಯ ಬಾಯಿಗೆ ಹೆದರುತ್ತಿದ್ದ. ಆದರೆ ಈಗ ವಿಷಯ ತಿಳಿದು ಕುಣಿದಾಡಿದ. "ಇಂದು ಸಂಜೆ ಐದರ ಗಾಡಿಗೆ ನೀನು ಕಾಸರಗೋಡಿಗೆ ಹೊರಟುಬಿಡಪ್ಪ. ಸುಕ್ರಾರ ಆದ್ದರಿಂದ ಇವತ್ತು ದಿನವೂ ಒಳ್ಳೇದಿದೆ" ಮಗನನ್ನು ಅವಸರ ಪಡಿಸಿದಳು ಗಂಗಕ್ಕ. ಗೆಳೆಯರ ಸಂಗದಿಂದ ಆದಷ್ಟೂ ಬೇಗ ಅವನು ದೂರವಿರಲಿ ಎನ್ನುವುದೇ ಅವಳ ಆಶಯವಾಗಿತ್ತು.

"ಚ್ಯಾ ಚ್ಯಾ! ಇವತ್ತೊಂದಿನ ಇದ್ದು ನಾಳೆ ಬೆಳಗಿನ ಗಾಡಿಗೆ ಅವನು ಹೊರಟರಾಗದೆ ಗಂಗಕ್ಕಾ?"

"ಯಾಕೆ? ಇಲ್ಲೇನಿದೆ ಅವನಿಗೆ ಅಂತ ರಾಜಕಾರ್ಯ?"

"ರಾತ್ರಿ ಮಾರಿಗುಡಿಯಲ್ಲಿ ತಾಲಮದ್ದಲೆ

ಇದೆಯಲ್ಲಾ..."

"ಮದ್ವಲೆಯೋ ಗಿದ್ವಲೆಯೋ ಮೊದ್ಲು ಅವನ ಹೊಟ್ಟೆಬಟ್ಟೆಗೊಂದು ನೆಲೆಯಾಗಲಿ ಉಳಿದುದೆಲ್ಲ ಆಮೇಲೆ." ಇರುವ ಒಬ್ಬ ಮಗನೂ ತಂದೆಯ ಹಾದಿಯನ್ನು ತುಳಿಯದಿರಲಿ ಎನ್ನುವ ಹಂಬಲ ಅವಳಿಗೆ.

ಬೀದಿ ಬಸವನಂತಿದ್ದ ಗಂಗಕ್ಕನ ಗಂಡ ಮಹಾಲಿಂಗನಿಗೆ 'ಕೋಳಿಕಟ್ಟ'ದ್ದೊಂದು ಹುಚ್ಚು. ಸದಾ ಬಗಲಲ್ಲೊಂದು ಹುಂಜ ಹೊತ್ತು ಅಂಕ ಆಯನಗಳಲ್ಲಿ ಹಾಜರಾಗುತ್ತಿದ್ದ ಅವನನ್ನು 'ಕೋರಿ ಮಾಲಿಂಗ' ಎಂದೇ ಕರೆಯುತ್ತಿದ್ದರು ಊರವರೆಲ್ಲ. "ಕಟ್ಟದ ಕೋಳಿಗೆ ಬಾಲು ಕಟ್ಟುವುದರಲ್ಲೂ ಮಾಲಿಂಗನ್ನೆ ಬಾರೀ ಬಿರ್ಸೆ" ಎಂದೂ ಎಲ್ಲರಿಂದ ಹೊಗಳಿಸಿಕೊಂಡಿದ್ದನವನು. ಉದ್ದಕ್ಕೆ ತಕ್ಕ ತೋರವಿದ್ದು ದುಡಿಯಲು ಮೈಬಗ್ಗದ ಇವನನ್ನು 'ಕದ್ರದ ತಟ್ಟಿರಾಯೆ', 'ಕಾರಂಜದ ಕಲ್ಲಡ್ಡೆ' ಎಂದೂ ಹಿಂದಿನಿಂದ ಜನರಾಡಿಕೊಳ್ಳುತ್ತಿದ್ದರು. ಗೆದ್ದ ಕೋಳಿಯಷ್ಟೆ ಅವನ ಅಪರೂಪದ ಸಂಪಾದನೆಯಾಗುತ್ತಿತ್ತು.

"ಕುಡ್ಲದ ಪೊನ್ನು ಬ್ಯಾಡವೇ ಬ್ಯಾಡ"ವೆಂದು ಧಿಮಾಕು ತೋರಿಸಿದ್ದ ಮಾಲಿಂಗನೂ ಕಡೆಗೆ ತೆಳ್ಳಗೆ ಬೆಳ್ಳಗೆ ಜಿರಳೆಯಂತಿದ್ದ ಗಂಗಳನ್ನು ಮನಸಾರೆ ಮೆಚ್ಚಿದ್ದ. ಮದುವೆಯಾದ ಹೊಸತರಲ್ಲೊಮ್ಮೆ ಅಳಿಯ ಮಗಳನ್ನು ತಮ್ಮ ಊರಿನ ನ್ಯಾಮ (ಜಾತ್ರೆ)ಕ್ಕೆ ಕರೆಯಲೆಂದು ನಾಲ್ಕು ದಿನದ ಮೊದಲೇ ಬಂದಿದ್ದ ಗಂಗಳ ತಂದೆ ಸಂಕಪ್ಪ. ಮಾವನ ಬಲವಂತಕ್ಕೆ ಈ ಹೊಸ ಅಳಿಯನಾದರೂ ಬೀಗದಿರುವನೆ?

"ಚ್ಛಾ ಈಗಿನಿಂದಲೇ ಬರಬೇಕೆಂದರೆ ನನಗೆಲ್ಲಿದೆ ಮಾವ ಪುರ್ರೊತ್ತು? ನಿಮ್ಮಗಳು ಹೊರಡುವಂತಿದ್ದರೆ ನನ್ನಿಂದೇನೂ ಅಡ್ಡಿ ಇಲ್ಲ. ಹಾಗೂ ನಾನು ಬರಲೇಬೇಕಾದರೆ ದೊಡ್ಡ ಬಂಡಿಯ ದಿನ ಬಂದರಾಯ್ತಲ್ಲಾ?" ನಯವಾಗಿ ತನ್ನ ಬಿಂಕ ತೋರಿಸಿದ್ದ ಮಾಲಿಂಗ. "ಸರಿ" ಎಂದ ಮಾವ ಮಗಳೊಂದಿಗೆ ಹೊರಟು ನಿಂತ.

ದೊಡ್ಡ ಬಂಡಿಯ ದಿನ ಸಂಜೆಯಾಗುತ್ತಲೇ ಮಾಲಿಂಗ ಸಿಂಗಾರಾಗತೊಡಗಿದ. ಬಾವಿಕಟ್ಟೆ ಬಳಿ ಹೋಗಿ ಎರಡು ಕೊಡಪಾನ ನೀರು ಸೇದಿ ಸ್ನಾನದ ಶಾಸ್ತ್ರ ತೀರಿಸಿದ. ಹೆಂಡತಿ ಒಗೆದು ಮಡಚಿಟ್ಟಿದ್ದ ದಟ್ಟ ಹಸಿರು ಬಣ್ಣದ ಮುಂಡು,




ಹಳದಿ ಗೀಟುಗೀಟಿನ ಜುಬ್ಬ ಧರಿಸಿ ಹೆಗಲ ಮೇಲೊಂದು ತೋರ್ತ್ ಹಾಕಿಕೊಂಡ. ಮೊಳದುದ್ದಕ್ಕೆ ಬೆಳೆದಿದ್ದ ತಲೆ ಜುಟ್ಟನ್ನು ಬಾಚಿ ಬಿಗಿದು ಗಂಟು ಹಾಕಿದ. ಕಿವಿಯಲ್ಲಿ ತೂಗುತ್ತಿದ್ದ ಕೆಂಪುಕಲ್ಲಿನ ಒಂಟಿಯನ್ನೊಮ್ಮೆ ಮುಟ್ಟಿ ನೋಡಿದ ಮಾಲಿಂಗ ಬೀಡಿ ಬಾಯಿಗಿರಿಸಿ ಬೀದಿಗಿಳಿದನು.

ಕೊನೆಯ ದಿನದ ಜಾತ್ರೆಯಾದುದರಿಂದ ಸಿಂಗರಿಸಿದ್ದ ಬಂಡಿ (ತೇರು) ಸಾನದ (ದೈವಸ್ಥಾನ) ಆವರಣದೊಳಗೆ ನಿಂತಿತ್ತು. ಎದುರಿನ ಗದ್ದೆಯಲ್ಲಿ ಸಾಲು ಸಾಲಾಗಿ ಸಂತೆಯ ಸಾಮಾನುಗಳು ತುಂಬಿತ್ತು. ಬ್ಯಾಂಡು, ಜೈನುಂಡೆಯ ಸದ್ದಿನೊಂದಿಗೆ ಉಂಡೆ, ಚಕ್ಕುಲಿ, ತಂಬ್ಬೆಗುಲ್ಲ ಮಿಠಾಯಿಕಡ್ಲೆ ಮಾರುವವರ ಗದ್ದಲ ಜೋರೆ ನಡೆದಿತ್ತು. ಇತ್ತ ಕಡೆಯಿಂದ ಎಣ್ಣೆಯಲ್ಲಿ ಕರಿದ ತಿಂಡಿಯ ಪರಿಮಳ ಮೂಗಿಗೆ ಬಡಿಯುತ್ತಿತ್ತು. ಅತ್ತ ಹೋದ ಮಾಲಿಂಗ ಮಡದಿಗಾಗಿ ಎರಡು ಕಟ್ಟ ಬಿಸಿ ಬಿಸಿ ಗೆಣಸಿನ ಪೋಡಿ ಕಟ್ಟಿಸಿಕೊಂಡ. ಜನಜಂಗುಳಿಯ ನಡುವಿನಿಂದ ಹಾದುಹೋಗುತ್ತಿದ್ದ ಅವನಿಗೆ ಸಂತೆಯ ಸೊಡವನ್ನು ನೋಡುತ್ತಿದ್ದಂತೆ ಬಾಯಾರಿಕೆಯಾಗತೊಡಗಿತು. ಬೀಡಾ, ಬೀಡಿ ಅಂಗಡಿಯವನು 'ಕುಂ...ಯ್' ಎಂದು ಒಡೆದು ಕೊಟ್ಟ ಬಣ್ಣದ ನೀರಿದ್ದ ಬಾಟಲಿಯನ್ನು ಬಾಯಿ

ಗಿರಿಸಿದ್ದನಷ್ಟೆ, ಅಷ್ಟರಲ್ಲಿ ಜೂಜಿನ ಹುಂಜವನ್ನು ಕಂಕುಳಲ್ಲಿರಿಸಿಕೊಂಡು 'ಬಲ್ಪೆತಿಮಾರ್' ಗದ್ದೆ ಗಿಳಿಯುತ್ತಿದ್ದ ಪೂವಪ್ಪ ಎದುರಾಗಬೇಕೆ? ಬಾಯಲ್ಲಿದ್ದ ಸೋಡದ ನೀರನ್ನು ನುಂಗುವಷ್ಟೂ ವ್ಯವಧಾನವಿಲ್ಲದ ಮಾಲಿಂಗ, ಅಂಗಡಿಯವನಿಗೆ ಕಾಸು ಕೊಡುವುದನ್ನು ಮರೆತು ಬಾಟ್ಲಿ ಯೊಂದಿಗೇ ಓಡಿದನವನು ಪೂವಪ್ಪನೊಡನಿದ್ದ ಹುಂಜದ ಬಳಿಗೆ. ದುಡ್ಡು , ಬಾಟ್ಲಿ ಎರಡೂ ಕೈತಪ್ಪಿ ಹೋಗುತ್ತಿರುವುದನ್ನು ಕಣ್ಣಾರೆ ಕಂಡ ಅಂಗಡಿಯವನು ಕಂಗಾಲಾಗದಿರುವನೆ? ಮತ್ತೆ ತಡಮಾಡದ ಅವನು ಕಾಲಿಗೆ ತೊಡರುವಂತಿದ್ದ ಪಂಚೆಯನ್ನು ಎರಡೂ ಕೈಗಳಿಂದ ಮೇಲೆತ್ತಿ ಕೊಂಡವನೆ, "ಓ.... ಅನ್ನ... ಓ.... ಅನ್ನಾ... ಇದು ಯಂತ ಬ್ಯಾರ ನಿಮ್ಮದು?" ಎನ್ನುತ್ತ ಮಾಲಿಂಗನ ಹಿಂದಿನಿಂದ ಓಡೋಡಿ ಬಂದನು.

"ಅರರೆ! ಮಾಲಿಂಗನ್ನೆ! ಬಾರೀ ಅಪ್ಪೂರ್ಪ ಆಗಿದ್ದೀಯಲ್ಲಾ? ಇದೇನು ನೀನಿಲ್ಲಿ? ಓ... ಮಾಮಿಲ್ಲದ ತಮ್ಮನಕ್ಕೆ (ಅತ್ತೆ ಮನೆಯ ಔತಣ) ಬಂದದ್ದೋ? ಸರಿ, ಸರಿ, ತಕೊಳ್ಳು ದ್ಯಾವೆರೆ ಗಂಧಪುರ್ಸದ" ಪೂವಪ್ಪನೆಂದ ಮಾಲಿಂಗನ ಭೇಟಿಯಾದ ಸಂತೋಷದಲ್ಲಿ. ಅವನು ನೀಡಿದ ಗಂಧಪ್ರಸಾದವನ್ನು ಉದ್ದಕ್ಕೆ ನಾಮದಂತೆ ಹಣೆಯಲ್ಲಿ ಎಳೆದುಕೊಂಡು ಅದರೊಂದಿಗಿದ್ದ ಹೂವನ್ನು ಕಿವಿಯ ಹಿಂಬದಿಯಲ್ಲಿ ಸಿಕ್ಕಿಸಿ ಕೊಳ್ಳುತ್ತಾ ಮಾಲಿಂಗನೆಂದ: "ನೋಡು ಪೋಪನ್ನಾ ಯಂತದೇ ಹೇಳು ಈ ಕೋಲ, ನ್ಯಾಮದಲ್ಲಿ ಬ್ಯಾಂಡ್, ವಾದೆ, ಬೆಡಿ, ಗರ್ನಲ್ ಏನೇ ಇದ್ದರೂ 'ಕೋರ್ದ ಕಟ್ಟ' ಒಂದಿಲ್ಲದಿದ್ದರೆ ಅದನ್ನೊಂದು ಜಾತ್ರೆ ಅಂತಾರಾ? ಏನಂತೀ ನೀನು?"

"ಚ್ಯಾ... ಮತ್ತೆ? ಹೌದಪ್ಪಾ ಕೋರ್ದ ಕಟ್ಟ ಒಂದಿದ್ದಲ್ಲಿ ಆ ಜಾತ್ರೆಯ ಚೆಂದವೇ ಬೇರೆ." ಮಾತನಾಡುತ್ತಿದ್ದಂತೆ ಪೋಡಿಯ ಕಟ್ಟನ್ನು ಕಿಸೆಗೆ ತುರುಕಿಸಿದ ಮಾಲಿಂಗ ಗೆಳೆಯನ ಹುಂಜವನ್ನು ತಾನೆತ್ತಿಕೊಂಡ. ಪೂವಪ್ಪ ತಾನು ಉಟ್ಟಿದ್ದ ಪಂಚೆಯ ಬಲಭಾಗವನ್ನು ಪಕ್ಕಕ್ಕೆ ಸರಿಸಿ ಒಳಚಡ್ಡಿಯ ಜೇಬಿನಿಂದ ಎಲೆಅಡಿಕೆಯ ಕಟ್ಟನ್ನು ಹೊರ ತೆಗೆದ. ಇಬ್ಬರೂ ಅಡಿಕೆ ಹೋಳನ್ನು ಬಾಯಿಗೆ ಎಸೆದುಕೊಂಡು ವೀಳ್ಯದೆಲೆಗೆ ಸುಣ್ಣ ಹಚ್ಚಿದರು.

ಕಾಲಿಗೆ ಹಗ್ಗ ಬಿಗಿಸಿಕೊಂಡಿದ್ದ ಹುಂಜಗಳ ಸೈನ್ಯ ಕಾದಾಟಕ್ಕಾಗಿ ಕಾಯುತ್ತಾ ರಣರಂಗದ (ಗದ್ದೆಯ) ಅಂಚಿನಲ್ಲಿ ಅತ್ತಿತ್ತ ಸರಿದಾಡು ತ್ತಿದ್ದವು ಠೀವಿಯಿಂದ ತಲೆ ಎತ್ತಿ. ಕೊಬ್ಬಿದ ಕೋಳಿಗಳನ್ನು ಕಂಡ ಮಾಲಿಂಗನ ಮೈ ನಿಂತಲ್ಲೇ ರೋಮಾಂಚನಗೊಂಡಿತು. ಜೂಜಿನ ಹುಂಜ ಗಳ ಆಕರ್ಷಣೆಗೆ ಒಳಗಾದ ಅವನು ಮಾವ, ಮಡದಿ ಜಾತ್ರೆ ಊಟ ಎಲ್ಲವನ್ನೂ ಮರೆತ. ಪಂಚೆಯನ್ನು ಮಡಚಿ ಮೊಣಕಾಲಿನ ಮೇಲೆ ಎತ್ತಿ ಕಟ್ಟಿದ. ಹೆಗಲಲ್ಲಿದ್ದ ತೋರ್ತನ್ನು ಮುಂಡಾಸಿ ನಂತೆ ತಲೆಗೆ ಸುತ್ತಿಕೊಂಡ. ಈ ಏರ್ಪಾಡುಗಳೆಲ್ಲ ಮುಗಿದೊಡನೆ ಗೆಳೆಯರಿಬ್ಬರೂ ಉತ್ಸಾಹದಿಂದ



ಜೂಜಿನ ಕಣಕ್ಕೆ ಇಳಿದರು.

ಹೊತ್ತು ಮುಳುಗಿ ಕತ್ತಲಾದರೂ ಕೋಳಿ ಅಂಕದ ಹುಮ್ಮಸ್ಸಿದ್ದವರಿಗೆ ಇನ್ನೂ ಪಂದ್ಯ ಕಟ್ಟುವ ಆಸೆ. ಸರಿ, ಅಲ್ಲಿ ಇಲ್ಲಿಂದ ಗ್ಯಾಸ್ ಲೈಟೂ ಬಂತು. ಅಂಕದ ಕಣಕ್ಕೆ ಇನ್ನಷ್ಟು ರಂಗೇರಿತು. ತನ್ನ ಹುಂಜ ಗೆದ್ದಿತೆನ್ನುವ ಸಂತೋಷಕ್ಕಾಗಿ ಮಾಲಿಂಗನಿಗೊಂದಿಷ್ಟು ಗಮ್ಮತ್ತು ಮಾಡಬೇಕೆನಿಸಿತು. "ಬ್ಯಾ... ಬ್ಯಾಡಪ್ಪಾ ಬ್ಯಾಡ" ಎನ್ನುತ್ತಲೇ ಮಾಲಿಂಗ ಪೂವಪ್ಪನೊಂದಿಗೆ ಗಡಂಗ್‌ನಲ್ಲಿ 'ಡಿಂಗ್' ಆದ. ಬಳಿಕ ಗೆಳೆಯನನ್ನು ಬೀಳ್ಕೊಂಡ ಅವನು ಅಮಲಿನ ಗುಂಗಿನಲ್ಲಿ ತೂರಾಡುತ್ತಾ 'ಕಟ್ಟೆಪುಣಿ'ಯ ಮೇಲಿನಿಂದ ಹಾದು ಬರುತ್ತಿದ್ದ. ನಾಲ್ಕು ಹೆಜ್ಜೆ ಇರಿಸಿದ್ದನೋ ಇಲ್ಲವೋ ಅಷ್ಟರಲ್ಲೇ ಆಯತಪ್ಪಿ ದೊಪ್ಪೆಂದು ಬಿದ್ದುಬಿಟ್ಟ, ಗದ್ದೆಯಲ್ಲಿ. ಮೇಲೇಳಲೂ ತಾಕತ್ತಿಲ್ಲದೆ ಏನೇನೋ ಒದರುತ್ತಾ ಹೊರಳಾಡುತ್ತಾ ಕೊನೆಗೂ ಬಿದ್ದಲ್ಲೇ ನಿದ್ದೆ ಹೋದ.

ಕೋರ್ರೊಟ್ಟಿ, ನೀರ್ದೆಲ್ಲವು (ಕೋಳಿಪಲ್ಯ, ರೊಟ್ಟಿ ಮತ್ತು ನೀರುದೋಸೆ) ಮಾಡಿಟ್ಟು ಎರಡು ಕುಪ್ಪಿ ಕಲಿ (ಕಳ್ಳು)ಯನ್ನು ತರಿಸಿ ಅಳಿಯನ ಬರವನ್ನು ಕಾದದ್ದೇ ಬಂತು ಅವನ ಅತ್ತೆ, ಮಾವ. ಮುದ್ದಿನ ಒಬ್ಬಳೇ ಮಗಳ ಗಂಡ ಎನ್ನುವ ಅಭಿಮಾನ ಅವರಿಗೆ. ಗಂಡನ ಭುಜಕ್ಕೆ ಭುಜ ತಾಗಿಸಿಕೊಂಡೇ ಜಾತ್ರೆಯಲ್ಲಿ ತಾನು ಸುತ್ತಾಡಬೇಕು. ಅಸೂಯೆಗೊಳ್ಳುವ ಗೆಳತಿಯರ ಮುಖ ನೋಡಿ ಸಂತೋಷಪಡಬೇಕು ಎಂದೆಲ್ಲಾ ಯೋಚಿಸಿದ್ದ ಗಂಗ ಸಾಯಂಕಾಲವೇ ಮುಖ ತೊಳೆದು ತಲೆ ಬಾಚಿ ಮುಡಿ ತುಂಬಾ ಅಬ್ಬೊಲಿ, ಸ್ಯಾಮತಿಗೆ ಹೂ ಮುಡಿದು ಅಲಂಕಾರ ಮಾಡಿಕೊಂಡಿದ್ದಳು. ಹೊಸ ಸೀರೆಯುಟ್ಟು ಈ ಹೊಸ ಮದುವಣಗಿತ್ತಿ ಗಂಡನನ್ನು ಕಾದು, ಕಾದು ಕತ್ತು ನೋಯಿಸಿಕೊಂಡದ್ದೂ ಆಯಿತು. ಕೊನೆಗೆ ಊಟವನ್ನೂ ಮಾಡದೆ ಬರಿ ನೆಲದಲ್ಲಿ ಅಳುತ್ತಾ ಮಲಗಿದಳು.

ಬೆಳಗಾದರೂ ಮೇಲೇಳಲು ಮನಸ್ಸಿಲ್ಲದೆ ಗಂಡನ ಬಗ್ಗೆ ಯೋಚಿಸುತ್ತಾ ಬಿದ್ದುಕೊಂಡಿದ್ದಳು. ಅಷ್ಟರಲ್ಲಿ ಓಡೋಡಿ ಬಂದಳು ಅವಳ ಗೆಳತಿ ಸಂಪ.

"ಗಂಗಾ—ಇದೆಂತದೆ ಮಾರಾಯ್ತಿ ನಿನ್ಗಂಡನ ಕತೆ?"

"ಏನೆ? ಏನಾಯ್ತು? ಹೇಳಿ ಬೇಗ" ಗೆಳತಿಯ ಮಾತಿನಿಂದ ಗಾಭರಿಯಾದ ಗಂಗ ಮಲಗಿದಲ್ಲಿಂದ ತಟ್ಟನೆದ್ದು ಕುಳಿತಳು.

"ಏನ್ ಹೇಳ್ಲಿ ನಂಗೆ ನಾಲ್ಗೆಯೇ ಬರೋದಿಲ್ಲಪ್ಪ."

"ಮತ್ಯಾಕೆ ಇಲ್ಲಿ ಬಂದೆ? ನನ್ನ ಹೊಟ್ಟೆ ಉರಿಸೋದಕ್ಕಾ? ಹೇಳ್ತಿಯಾದ್ರೆ ಹೇಳು."

"ಮತ್ತೇನಿಲ್ಲೆ ನಮ್ಮನೆಗೆ ನಿನ್ನೆ ತುಂಬಾ ಜನ ನೆಂಟ್ರು ಬಂದಿದ್ರಲ್ಲಾ ಅವ್ರಿಗೆಲ್ಲ ಚಾ ಮಾಡ್ಲಿಕ್ಕೆ ಹಾಲು ಬೇಕಿತ್ತೂಂತ ಅಚ್ಚಕ್ಕನ ಮನೆಗೋಗ್ತಿದ್ದೆ. ಆಗ ಗದ್ದೆ ಕಣಿಯಲ್ಲಿ ಯಾರೋ ಮಲಗಿದ್ದ ಹಾಗಿತ್ತು ನೋಡು, ಯಾರಪ್ಪಾ ಈ ಪುಣ್ಯಾತ್ಮಾ ಎಂದು ಬಗ್ಗಿ ನೋಡಿದ್ರೆ ಅದು ನಿನ್ಗಂಡನೇ ಆಗಿಬೇಕೆ? ಛೆ ಕುಡ್ದು ಬೋದವಿಲ್ಲದಂತೆ ಬಿದ್ದಿದ್ದಾರೆ. ಪಾ... ಪ ನನಗಂತೂ ನಿನ್ನನ್ನು ನೋಡಿ ಎಷ್ಟು ಸಂಕ್ಟ ಆಗ್ತಿದೆ ಗೊತ್ತಾ?" ಗಂಗಳಿಗಿಂತ ಹಿರಿಯಳಾಗಿದ್ದು ಇನ್ನೂ ಕನ್ಯೆಯಾಗಿರುವ ಸಂಪ ತನ್ನ ಸಂಕಟವನ್ನು ಈ ರೀತಿ ವ್ಯಕ್ತಪಡಿಸಿ ತೃಪ್ತಿಗೊಂಡಳು. ನಾಚಿಕೆ ಅವಮಾನ ತಾಳಲಾರದ ಗಂಗಳ ಕಂಗಳಿಂದ ಗಂಗಾ ಪ್ರವಾಹವೇ ಹರಿದು ಬಂತು.

ಬೆಳಗಿನ ತಂಗಾಳಿ ಮೈ ಸೋಂಕಿದಾಗ ಮಾಲಿಂಗನ ಅಮಲೂ ಇಳಿದಿತ್ತು. ಅವನ ಜೇಬಿನಲ್ಲಿದ್ದ ಪೋಡಿಯ ಕಟ್ಟು ಕೆಳಗೆ ಬಿದ್ದು ಚೆಲ್ಲಾಪಿಲ್ಲಿಯಾಗಿತ್ತು. ತಿಂಡಿಗೆ ಮುತ್ತಿದ ಕಾಗೆಗಳ ಹಿಂಡು ಕರ್ಕಶವಾಗಿ ಅರಚುತ್ತಿದ್ದವು. ಮೆಲ್ಲನೆ ಕಣ್ಣು ತೆರೆದ ಮಾಲಿಂಗನಿಗೆ ಈಗ ತನ್ನ ಇರುವಿಕೆಯ ಅರಿವಾಯಿತು. ಅಸ್ತವ್ಯಸ್ತವಾಗಿದ್ದ ಉಡುಪನ್ನು ಸರಿಪಡಿಸಿಕೊಳ್ಳುತ್ತಾ ತಟಕ್ಕನೆ ಮೇಲೆದ್ದನು. ಬೇಗಬೇಗನೆ ಬಟ್ಟೆ ಜಾಡಿಸಿ ಧೂಳು ಕೊಡವಿಕೊಂಡನು. ಮತ್ತೊಂದು ಕ್ಷಣವೂ ಅಲ್ಲಿ ನಿಲ್ಲಲಾರದೆ ದಾಪುಗಾಲು ಹಾಕುತ್ತಾ ನಡೆದು ಬಿಟ್ಟನು ತನ್ನ ಊರಿನತ್ತ.

ಇತರರಂತೆ ತನ್ನ ಗಂಡನೂ ಸಂಪಾದಿಸಿ ಸಂಸಾರದ ಭಾರ ಹೊರುವನೆಂಬ ಭರವಸೆಯನ್ನು ಕಳಕೊಂಡಳು ಗಂಗ. ಆದಾಯಕ್ಕೆ ಬೇರೆ ದಾರಿಯೂ ಕಾಣದಾದಾಗ ತವರಿನಿಂದ ಅಟ್ಟಿಸಿಕೊಂಡು ಬಂದಿದ್ದ ಹಸುವನ್ನೇ ನೆಚ್ಚಿಕೊಳ್ಳಬೇಕಾಯಿತು. ಹಾಲು ಮಾರಿದ ಹಣದಲ್ಲಿ ದಿನಕ್ಕೊಂದು ಕಟ್ಟು ಬೀಡಿ ಮತ್ತು ಕಳ್ಳು ಕುಡಿ

ಯಲು ಧುಡ್ಡು ಕೊಡದಿದ್ದಲ್ಲಿ ಅವಳು ಬಚ್ಚಿಡುತ್ತಿದ್ದ ಪುಡಿಕಾಸಿಗೆ ಕೈ ಕೊಡುತ್ತಿದ್ದ ಮಾಲಿಂಗ. ಅಂಥ ಸಮಯದಲ್ಲೆಲ್ಲಾ ಕೆರಳುತ್ತಿದ್ದ ಗಂಗ— "ಒಟ್ಟಾರೆ ನನ್ನ ತಂದೆ ತಾಯಿಗೆ ಬುದ್ಧಿ ಇಲ್ಲ. ನಿಮ್ಮಂಥ ಕಲ್ಲೆದೆಯವರಿಗೆ ಹೆಣ್ಣು ಕೊಡುವ ಬದಲು ಆ ಗಡಾಯಿಗಲ್ಲಿಗೆ ಕಟ್ಟುತ್ತಿದ್ದರೂ ನಾನಿಂದು ಸುಃಖವಾಗಿರುತ್ತಿದ್ದೆ." ಮಾತಿನಲ್ಲೇ ಅವನನ್ನು ಚುಚ್ಚುತ್ತಿದ್ದಳು. ಹೆಂಡತಿಯ ಬೈಗುಳ ಕೇಳಿ ಕೇಳಿ ಸಾಕಾಗಿದ್ದ ಮಾಲಿಂಗ ಒಂದು ದಿನ ಅವಳ ಬೆಂಡೋಲೆಯನ್ನೇ ಹಾರಿಸಿ ಮನೆಯಿಂದ ಪರಾರಿಯಾಗಿದ್ದ. 'ಪೀಡೆ ಕಳೆಯಿತು' ಎಂದುಕೊಂಡು ಸುಮ್ಮನಿದ್ದಳೇ ಹೊರತು ಅವನನ್ನು ಹುಡುಕಿಸಿ ಕರೆತರುವ ಗೋಜಿಗೆ ಹೋಗಲಿಲ್ಲ ಅವಳು.

"ಏನೆ ಗಂಗಾ ಗಂಡನನ್ನು ಓಡಿಸಿಯೇ ಬಿಟ್ಟೆಯಲ್ಲಾ ತಾಯಿ, ಯಂತ ಮನಸೆ ನಿಂದು?" ಹೀಗೆಂದು ಯಾರಾದರೂ ಅವಳನ್ನು ಕೆಣಕಿದ್ದಲ್ಲಿ—

"ಹೌದು... ಇಂತ ಗಂಡ ಇದ್ದರೇನು ಇಲ್ಲದಿದ್ದರೇನು? ಕೈ ಹಿಡಿದವಳಿಗೊಂದು ಮಂಜೆಟ್ಟಿ ತೂಕದ ಬಂಗಾರ್ ಪದ್ದೆಯಿ ಮಾಡಿಸಿ ಹಾಕುವಷ್ಟು ಗತಿ ಇಲ್ಲದಿದ್ದರೂ ನನ್ನಪ್ಪ ಕೊಟ್ಟಿದ್ದ ತಟ್ಟಿ ಪೊಟ್ಟನ್ನೂ ಕದ್ಬೊಯ್ಯುವುದೆ? ಥೂ.... ನಾಚ್ಗೆಯಾದ್ರೂ ಆಗ್ಲಿಲ್ವೆ ಈ ಗಂಡ್ಸಿಗೆ? ಮದುವೆಗೆ ಮೊದ್ಲು ದೊಡ್ಡ ದೊರ್ಸಾಂದಿಯ (ದೊರೆಸಾನಿ) ಹಾಗಿದ್ದೆ ನಾನು ಗೊತ್ತಾ? ಈಗ ನೋಡಿ ನನ್ನ ಅನೆಬರ" ಅಂಗಳದಲ್ಲಿ ನಿಂತು ಊರಗಲ ಬಾಯಿ ತೆರೆದು ತನ್ನ ಹೊಟ್ಟೆಯ ಉರಿಯನ್ನು ಕಾರುತ್ತಿದ್ದಳು. ಅವಳ ನೋವನ್ನು ಅರ್ಥಮಾಡಿಕೊಳ್ಳದವರು 'ಘಟವಾಣಿ ಗಂಗಕ್ಕ' ಎನ್ನುವ ಬಿರುದು ನೀಡಿದರು. ಮೊದಲೇ ವಕ್ರಬುದ್ಧಿಯವರನ್ನು ಕಂಡರಾಗದ ಅವಳು ಕಂಡತುಂಡವಾಗಿ ಅವರನ್ನು ಖಂಡಿಸುತ್ತಿದ್ದು 'ಹಿಡಿಂಬೆ' ಎಂದೂ ಪ್ರಚಾರದಲ್ಲಿದ್ದಳು. ಆದರೆ ಇದೆಲ್ಲವನ್ನು ಕೇಳಿಸಿಕೊಂಡಿದ್ದರೂ ಅವಳು—"ಅಂಡೆಯ ಬಾಯಿಯನ್ನಾದರೂ ಕಟ್ಟಿಯೇನು, ದೊಂಡೆಯ ಬಾಯಿ ಕಟ್ಟಲಾದೀತೆ ನನ್ನಿಂದ? ಏನೋ ಬ್ಯಾನೆ ಬ್ಯಾಸರ ಅರಿಯದವರು ಹೀಗಂದ ಮಾತ್ರಕ್ಕೆ ನಾನ್ಯಾಕೆ ಮಂಡೆ ಬಿಸಿ ಮಾಡಿಕೊಳ್ಳಲಿ?" ಎನ್ನುವಳು. "ಹರೆಯದ ಹೆಣ್ಣು ಯಾಕೆ ಒಬ್ಬಂಟಿಗಳಾಗಿರಬೇಕು?" ಎಂದ ವೃದ್ಧ ತಾಯಿ ತಂದೆ ಮಗಳನ್ನು ತಮಲ್ಲಿಗೆ ಕರೆಸಿಕೊಂಡರು. ಒಂದು ವರ್ಷದ ಮಗು ರಂಗನೊಂದಿಗೆ ಬಂದ ಗಂಗ ತವರಿನ ನೆಲದಲ್ಲಿ ತನ್ನೆಲ್ಲ ನೋವನ್ನು ಮರೆತಳು. ಮತ್ತೆ ನಾಲ್ಕಾರು ವರ್ಷ ಕಳೆಯುವಷ್ಟರಲ್ಲಿ ಅವಳ ಹೆತ್ತವರೂ ಅಗಲಿ ಹೋದರು.

ತರುಣ ಮಗ ಈಗ ತನ್ನ ಸಮಕ್ಕೆ ಬೆಳೆದು ನಿಂತಿದ್ದರೂ ಗಂಗಕ್ಕನ ದುಡಿಮೆಗೆ ವಿಶ್ರಾಂತಿ ಎಂಬುದೇ ದೊರೆಯಲಿಲ್ಲ. ಕಾಸರಗೋಡಿಗೆ ಹೊರಟಿದ್ದ ರಂಗ ತನ್ನ ಬಟ್ಟೆ ಬರೆಯನ್ನಿರಿಸಿದ್ದ ಕೈಚೀಲ ಎತ್ತಿಕೊಳ್ಳಲೆಂದು ಕೋಣೆಯೊಳಗೆ ಬಂದ. ಅವನನ್ನು ಪಕ್ಕಕ್ಕೆ ಕರೆದ ರತ್ನ— "ಮುಂದಿನ ಸಾರಿ ಊರಿಗೆ ಬರುವಾಗ ನನಗೊಂದು ವಾಚು ತನ್ನಿ" ಎಂದು ಪಿಸುಗುಟ್ಟಿದಳು. "ಸರಿ" ಎಂದ ರಂಗ ಹೊರಗೆ ಬರುವಷ್ಟರಲ್ಲಿ "ಅಪ್ಪಾ ರಂಗಣ್ಣಾ ಕೈಗೆ ಸಂಬಳ ಬಂದಾಕ್ಷಣ ಅಡ್ಡಾದಿಡ್ಡಿ ಖರ್ಚು ಮಾಡಿ ಬಿಡಬೇಡಪ್ಪಾ. ನಿನ್ನ ನೌಕರಿ ಬಗ್ಗೆ ಹೇಳಿಕೊಂಡಿರುವ ಹರಕೆಗಳೇ ಸಾಕಷ್ಟಿವೆ. ಖರ್ಚಿಗಾಗುವಷ್ಟನ್ನು ಉಳಿಸಿಕೊಂಡು ಮಿಕ್ಕಿದ್ದನ್ನು ಇಲ್ಲಿಗೆ ಕಳಿಸಿಕೊಡು ಮಗಾ." ತಾಯಿ ಹೇಳಿದಾಗ ಅದಕ್ಕೂ ಸಮ್ಮತಿಸಿದ. ಬಗ್ಗಿ ಅವಳ ಕಾಲು ಮುಟ್ಟಿ ನಮಸ್ಕರಿಸಿ ಮನೆಯಿಂದ ಹೊರಟನು ಹೊಸ ಹುರುಪಿನಿಂದ.

ಎಲ್ಲೋ ಪರದೇಶಕ್ಕೆ ಹೊರಟವನನ್ನು ಬೀಳ್ಕೊಡಲು ಬಂದಂತೆ ರೈಲು ನಿಲ್ದಾಣದಲ್ಲಿ ಅವನ ಗೆಳೆಯರೆಲ್ಲ ನೆರೆದಿದ್ದರು. ಆದರೆ ಅವರೆಲ್ಲರ ಮುಖವೂ ಮಂಕಾಗಿತ್ತು. ಶಿವಣ್ಣನ ಕೈಯಲ್ಲಿದ್ದ ವಾಚು ಕಂಡೊಡನೆ ಮಡದಿ ಹೇಳಿದ ಮಾತು ಜ್ಞಾಪಕವಾಯಿತು ರಂಗನಿಗೆ. ಒಡನೆ ಅವನು ಬರಿದಾಗಿದ್ದ ತನ್ನ ಕೈಯನ್ನು ನೋಡಿಕೊಂಡ. ನಾಟಕ ಕಂಪೆನಿ ಸೇರಲು ಹೊರಟಿರುವ ತನ್ನಲ್ಲಿ ಕೈಗಡಿಯಾರ ಇಲ್ಲದಿರುವುದು ಕೊರತೆ ಎನಿಸಿತು.

"ಒಂದು ನಾಕು ದಿವಸ ಮಟ್ಟಿಗೆ ನಿನ್ನ ವಾಚು ಕೊಡ್ತೀಯಾ ಶಿವಣ್ಣಾ?"

"ಅರೆ! ಕೆಟ್ಟು ಹೋಗಿರುವ ಇದರಿಂದ ನಿನಗೇನು ಪ್ರಯೋಜನವಾದೀತು ಮಾರಾಯ? ಇದನ್ನು ರಿಪೇರಿಗೆ ಕೊಡಲೆಂದೇ ನಾನು ಕಟ್ಟಿಕೊಂಡಿರುವುದು." ಸಂದರ್ಭ ಸಾಧಕ ಶಿವಣ್ಣನೆಂದಾಗ ಗಂಟೆ ನೋಡಲೂ ಬಾರದ ರಂಗ

ಅದನ್ನು ನಿಜವೆಂದೇ ನಂಬಿದ. ರೈಲು ಹೊರಡುವ ಸೂಚನೆ ನೀಡಿದಾಗ ಒಬ್ಬೊಬ್ಬರೇ ರಂಗನನ್ನು ತಬ್ಬಿಕೊಂಡರು. ಎಲ್ಲರೂ ಕೈ ಬೀಸುತ್ತಿದ್ದಂತೆ ಚಲಿಸಲು ಪ್ರಾರಂಭಿಸಿದ ರೈಲು ಧಾವಿಸುತ್ತಾ ಹೋಗಿ ಮರೆಯಾಯಿತು.

ಕಾಸರಗೋಡಿನ ಪೇಟೆಯ ನಡುವೆ ನಾಟಕದ ಚಪ್ಪರವೇರಿಸಿದ್ದ ನಾರ್ಣಪ್ಪಯ್ಯ, ಅಂದು ಪೌರಾಣಿಕ ನಾಟಕ 'ಶಾಕುಂತಲಾ'ವನ್ನು ಆಡಲಿರುವರೆಂದು ಪ್ರಚಾರ ಪಡಿಸಿದ್ದ. ರಾತ್ರಿ ಒಂಬತ್ತಕ್ಕೆ ಪ್ರಾರಂಭವಾಗಬೇಕಾಗಿದ್ದ ನಾಟಕ ಪರದೆ ಗಂಟೆ ಹತ್ತೂವರೆಯಾದರೂ ಮೇಲೇರದಿದ್ದಾಗ ಟಿಕೇಟು ಕೊಂಡು ಕುಳಿತಿದ್ದವರೆಲ್ಲ ಕುಪಿತರಾದರು. ಗುಸು ಗುಸು ಮಾತು ಗಲಭೆಗೆ ದಾರಿಯಾಗುತ್ತಿದ್ದಾಗ ನಾರ್ಣಪ್ಪಯ್ಯ ವೇದಿಕೆಯ ಮೇಲೇರಿ ಬಂದ.

"ಕಲಾಭಿಮಾನಿಗಳೆಲ್ಲ ನಮ್ಮನ್ನು ಕ್ಷಮಿಸಬೇಕು. ಊರಿಗೆ ಹೋಗಿರುವ ನಮ್ಮ ನಾಟಕದ ಪ್ರಮುಖ ನಟರೆಲ್ಲ ಈಗಷ್ಟೇ ಮರಳಿ ಬಂದು ಮೇಕಪ್ ಹಾಕಿಕೊಳ್ಳುತ್ತಿದ್ದಾರೆ. ಅದರಿಂದ ತಾವೆಲ್ಲರೂ ದಯವಿಟ್ಟು ಶಾಂತಚಿತ್ತರಾಗಿದ್ದು ಈಗಾಗಲೇ ಪ್ರಾರಂಭವಾಗಲಿರುವ ನಾಟಕವನ್ನು ನೋಡಿ ಆನಂದಿಸಬೇಕು ಎಂದು ನಿಮ್ಮೆಲ್ಲರೊಡನೆ ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ." ಸಂದರ್ಭೋಚಿತವಾಗಿ ಕೈ ಮುಗಿದು ಕ್ಷಮೆಯಾಚಿಸುವ ನಟನೆ ಮಾಡಿ ಹೇಗೂ ಆ ಸಂದಿಗ್ಧತೆಯಿಂದ ತಾತ್ಕಾಲಿಕವಾಗಿ ಪಾರಾದನು. ಗದ್ದಲ ಅಡಗಿದ್ದರೂ ಸಭಿಕರ ಪಿಸುಪಿಸು ನಡೆದಿತ್ತು.

ಪತಿಗೃಹಕ್ಕೆ ಹೊರಟಿರುವ ಶಕುಂತಲೆಯನ್ನು ಬೀಳ್ಕೊಡುವ ಸನ್ನಿವೇಶ. ಇದರಲ್ಲಿ ಸಾಕು ತಂದೆಯ ಶೋಕಪೂರಿತ ಮೂಕ ಅಭಿನಯದ ಪಾತ್ರವನ್ನು ಸಂದರ್ಭಕ್ಕನುಸಾರವಾಗಿ ರಂಗನಿಗಿತ್ತನು ನಾರ್ಣಪ್ಪಯ್ಯ. ಕಣ್ವ ಋಷಿಯ ವೇಷಧಾರಿ ರಂಗ ಕಾವಿ ಬಟ್ಟೆಯನ್ನುಟ್ಟು, ನೀಳ ಗಡ್ಡ ಜಟಾಧಾರಿಯಾಗಿ ಮುಖಕ್ಕೆ ಬಣ್ಣ ಬಳಿಯಲೆಂದು ಕಾತರಿಸುತ್ತಿದ್ದಾಗ–

"ನಿನ್ನ ಮುಖಕ್ಕೇನೂ ಮೇಕಪ್ಪಿನ ಆವಶ್ಯಕತೆ ಇಲ್ಲಪ್ಪಾ, ಹಣೆ ತೋಳುಗಳಿಗೆಲ್ಲಾ ಬಿಳಿ ನಾಮ ಎಳೆದರಷ್ಟೇ ಸಾಕು." ಸಾಧ್ಯವಾದಷ್ಟೂ ಸಾಮಗ್ರಿಗಳನ್ನು ಉಳಿತಾಯ ಮಾಡುವ ಉದ್ದೇಶವಿದ್ದ ನಾರ್ಣಪ್ಪಯ್ಯನೆಂದಾಗ ರಂಗ ನಿರಾಶೆಯಿಂದ ಕುಗ್ಗಿ ಹೋದ. ಬಣ್ಣದ ಬದುಕನ್ನು ಬಯಸಿ




ಏನು! ಈ ಆಫೀಸಿನಲ್ಲಿ ಉದ್ಯೋಗ ಸಿಕ್ಕಿದೆ, ಇವತ್ತೇ ಬಂದು ಜಾಯಿನ್ ಆಗೂಂತ ನಿನಗೆ ಟೆಲಿಗ್ರಾಂ ಬಂತಾ?

ಬಂದವನಾದರೂ ತನ್ನ ಅಭಿಲಾಷೆಯನ್ನು ತೋರ್ಪಡಿಸಿಕೊಳ್ಳಲಾರದೆ ಯಜಮಾನ ಹೇಳಿದಂತೆ ಅಲ್ಲಲ್ಲಿ ಬಿಳಿನಾಮ ಎಳೆದುಕೊಂಡ. ಕೈಯಲ್ಲಿ ದಂಡ ಹಾಗೂ ರುದ್ರಾಕ್ಷಿ ಮಾಲೆ ಹಿಡಿದು ತನ್ನ ಸರದಿಗಾಗಿ ಕಾಯುತ್ತಾ ಪರದೆಯ ಮರೆಯಲ್ಲಿ ತುದಿಗಾಲಲ್ಲಿ ನಿಂತ. ಇನ್ನೊಂದು ಪಕ್ಕದಲ್ಲಿ ತಬಲೆ ಮತ್ತು ಹಾರ್ಮೋನಿಯಂನ್ನು ಬಟ್ಟೆಯಲ್ಲಿ ಬಿಗಿದು ಕೊರಳಿಗೆ ಹಾರದಂತೆ ಹಾಕಿ ಕುಳಿತರು ಮಾವ ನಾರ್ಣಪ್ಪಯ್ಯ ಮತ್ತು ಅಳಿಯ ಮಾಬಲ. ಈ ಹೊಸ ಬಗೆಯ ರಿವಾಜನ್ನು ಕಂಡ ರಂಗನಿಗೆ ತನ್ನ ಊರಿನ ಭಜನೆ ಮಂಡಲಿಯವರ ಜ್ಞಾಪಕ ಬಂದು ಮನದಲ್ಲಿ ನಗು ಉಕ್ಕಿತು.

ಗ್ರೀನ್ ರೂಂ ಅಂದರೆ ಏನೋ ಭಾರೀ ಭವ್ಯವಾದ ಕೋಣೆಯೇ ಆಗಿರಬೇಕೆಂದು ಭಾವಿಸಿದ್ದ ರಂಗ. ಆದರೆ ಇಲ್ಲಿಯ ನಿರಾಡಂಬರತೆ ಕಂಡು ಅವನು ನಿರುತ್ಸಾಹಗೊಂಡ. ಉಡಿಗೆ ತೊಡಿಗೆ, ಮೇಕಪ್ ಮುಗಿದೊಡನೆ ಇತರ ಸರಕುಗಳಿದ್ದ ಒಂದೇ ಒಂದು ಪೆಟ್ಟಿಗೆಯೊಳಗೆ ಎಲ್ಲವನ್ನೂ ತುರುಕಿಸಿ ತಕ್ಷಣ ಅದಕ್ಕೆ ಬೀಗವನ್ನು ಹಾಕಲಾಯಿತು. ಬಳಿಕ ಅದನ್ನೊಂದು ಮೂಲೆಗೆ ತಳ್ಳಿ ಹಳೆ ಪರದೆ ಹೊದಿಸಿ ಮೇಲೆ ನಾಲ್ಕಾರು ಸೋಗೆಗಳನ್ನು ಮುಚ್ಚಿಟ್ಟರು. ಇದೆಲ್ಲವನ್ನು ವಿಸ್ಮಯದಿಂದ ನೋಡುತ್ತಿದ್ದ ರಂಗನಿಗೆ, ಚಳಿ

ಜ್ವರ ಬಂದವನನ್ನು ಎರಡೆರಡು ಕಂಬಳಿ ಹೊದಿಸಿ ಉಪಚರಿಸುವಂತೆ ಕಂಡಿತು. ಅಂತೂ ಈ ಸಿದ್ಧತೆಗಳೆಲ್ಲ ಮುಗಿದೊಡನೆ ಗಂಟೆ ಬಾರಿಸಿ, ಅಂಕದ ಪರದೆ ಮೇಲೇರಿ ನಾಟಕ ಪ್ರಾರಂಭವಾಗುವ ಸೂಚನೆ ನೀಡಿತು.

ಗಂಟೆಯ ಸದ್ದು ಕಿವಿಗೆ ಬಿದ್ದೊಡನೆ ಸಭಿಕರೆಲ್ಲಾ ಚುರುಕಾದರು. ಮಕ್ಕಳ ಗಲಾಟೆ, ಮುದುಕರ ಕೆಮ್ಮು ತೂಕಡಿಕೆ, ಹೆಂಗಸರ ಪಂಚಾತಿಕೆ ಎಲ್ಲವೂ ಸ್ತಬ್ಧವಾಯಿತು.

"ಅಪ್ಪಯ್ಯಾ ಆರ್ಮನಿ ಇತ್ತ ಕೊಡಿ ನೀವು ದುಷ್ಯಂತನ ಪಾರ್ಟು ಮಾಡಿ" ಎಂದ ಮಗನನ್ನು ಗದರಿಸಿದ ನಾರ್ಣಪ್ಪಯ್ಯ. ಪರದೆ ಎಳೆಯುವವನೇ ಗಾಯಕನಾದುದರಿಂದ ಮರೆಯಲ್ಲಿದ್ದ ನಾರ್ಣಪ್ಪಯ್ಯ ಕುಳಿತಲ್ಲಿಂದಲೇ ಒಂದು ಗಣಪತಿ ಸ್ತುತಿ ಹಾಡಿದನು. ಆ ಬಳಿಕ ನಾಟಕ ಪ್ರಾರಂಭವಾಯಿತು. ಹಿಂದೆ ಸುಮಾರು ಎಂಟತ್ತು ಮಂದಿ ಆಡುತ್ತಿದ್ದ ಈ ನಾಟಕವನ್ನು ಇಂದು ಕೇವಲ ಮೂವರು ಮಾತ್ರ ಅಭಿನಯಿಸಬೇಕಾಯಿತು.

ಮೊದಲನೆ ದೃಶ್ಯದಲ್ಲಿ ಶಕುಂತಲೆ ತನ್ನ ಸಖಿಯೊಂದಿಗೆ ಉದ್ಯಾನದಲ್ಲಿ ವಿಹರಿಸುತ್ತಿರುವಳು. ಪ್ರಕೃತಿಯ ಚೆಲುವನ್ನು ಸವಿಯುತ್ತಾ ಸಂತಸದಿಂದ ಅದನ್ನು ಬಣ್ಣಿಸುವಳು. ಒಮ್ಮಿಂದೊಮ್ಮೆ ಅವಳಿಗೆ ತನ್ನ ಒಡನಾಡಿಗಳಾದ ಜಿಂಕೆ, ನವಿಲುಗಳನ್ನು ಕಾಣದೆ ಪರಿತಪಿಸುವಂತಾಗುತ್ತದೆ. ಅವಳ ವ್ಯಾಕುಲತೆಯನ್ನು ಕಂಡ ಸಖಿ ಸಂತೈಸುವ ದನಿಯಲ್ಲಿ–"ನಿನ್ನ ಪ್ರೀತಿಗೆ ಪಾತ್ರವಾಗಿರುವ ಅವುಗಳು ಎಲ್ಲಿದ್ದರೂ ನಾನು ಅರಸಿ ತರುವೆನು. ದೇವಿ ನೀನು ಚಿಂತಿಸದಿರು" ಎಂದವಳೇ ಹೊರಟುಹೋಗುವಳು. ಪ್ರಸನ್ನವದನಳಾದ ಶಕುಂತಲೆ ತನ್ನ ಮುದ್ದಿನ ಸಂಗಾತಿಗಳ ನಿರೀಕ್ಷೆಯಲ್ಲಿ ಕಾಲ ಕಳೆಯುತ್ತಾ ಏಕಾಂಗಿತನದ ಬೇಸರ ಕಳೆಯಲು ಹಾಡುತ್ತಾ ಆನಂದಿಸುವಳು. ಅಷ್ಟರಲ್ಲಿ ದುಷ್ಯಂತನ ಪ್ರವೇಶವಾಗತಕ್ಕದ್ದು. ಆದರೆ ರಂಗನೂ ಸೇರಿದಂತೆ ಇದ್ದ ಮೂವರೊಳಗೆ ಪಾತ್ರಗಳು ಹಂಚಿ ಹೋಗಿದ್ದರಿಂದ ಸಖಿ ವೇಷಧಾರಿಯೇ ಮತ್ತೆ ದುಷ್ಯಂತನಾಗಬೇಕಿತ್ತು. ಅದರಿಂದ ಅವನು ಕಚ್ಚೆ ಹಾಕಿ ಉಟ್ಟಿರುವ ಸೀರೆಯ ಮೇಲೊಂದು ನಿಲುವಂಗಿ ತಲೆಗೆ ಬ್ಯಾಗಡಿಯ ಕಿರೀಟವನ್ನಿಟ್ಟು ಮೂಗಿಗೆ ಮೀಸೆ ಸಿಕ್ಕಿಸಿ ವೇದಿಕೆಯ ಇನ್ನೊಂದು ಪಕ್ಕದಿಂದ ಬಂದಾಗ ಪ್ರೇಕ್ಷಕ ವೃಂದದಿಂದ ನಗುವಿನ ಗುಲ್ಲೆದ್ದಿತು.

ಸಂದರ್ಭಕ್ಕೆ ತಕ್ಕಂತಹ ಮಾತುಗಳು ಬಾಯಿಪಾಠವಿಲ್ಲದಿದ್ದರೂ ಅರ್ಧರ್ಧ ಸಂಭಾಷಣೆಯೊಂದಿಗೆ ಶಕುಂತಲೆ ದುಷ್ಯಂತರ ಸಮಾಗಮ ಸರಸ ಸಲ್ಲಾಪಗಳೂ ಮುಗಿದವು. ಒಂದು ಹಾಡಿನ ಬಳಿಕ ಅವಳ ಬೆರಳಿಗೆ ಉಂಗುರ ತೊಡಿಸಿ ಅವನು ನಿರ್ಗಮಿಸುವನು. ಈಗ ಮತ್ತೆ ಸಖಿಯ ಪ್ರವೇಶವಾಗಬೇಕು. ಇಬ್ಬರ ಪಾತ್ರವನ್ನು ಒಬ್ಬನೇ ಮಾಡುವವನಾದ್ದರಿಂದ ಒಡನೆ ಅವನು ತನ್ನ ಮೈ ಮೇಲಿದ್ದ ನಿಲುವಂಗಿ, ಕಿರೀಟಗಳನ್ನು ಕಳಚಿಟ್ಟರೂ ಗಡಿಬಿಡಿಯಿಂದ ಮೀಸೆ ತೆಗೆಯುವುದನ್ನು ಮರೆತೇ ಬಿಟ್ಟಿದ್ದ. ಮೊದಲೇ ಅರ್ಥವಾಗದಂತಹ ಅರ್ಧಂಬರ್ಧ ಸಂಭಾಷಣೆ! ಜತೆಗೆ ಇಂತಹ ಅಸಂಬದ್ಧ ಉಡಿಗೆ ತೊಡಿಗೆಗಳು ಸಭಿಕರು ಸಹಜವಾಗಿಯೇ ನಾರ್ಣಪ್ಪಯ್ಯನ ಕಣ್ಣುಮುಚ್ಚಾಲೆ ಆಟವನ್ನು ಗುರುತಿಸಿದರು.

ಕುರ್ಚಿ ಬೆಂಚುಗಳ ದಡದಡ ಸದ್ದು ಕಿವಿಗೆ ಬಿದ್ದೊಡನೆ ನಾರ್ಣಪ್ಪಯ್ಯನ ತಲೆ ಚುರುಕಾಯಿತು. ಇದೇನು ಅವನಿಗೆ ಮೊದಲ ಅನುಭವ ಆಗಿರಲಿಲ್ಲ. ಕ್ಷಣದೊಳಗೆ ತಬಲೆ ಹಾರ್ಮೋನಿಯಂ



ಹಾರಗಳೊಂದಿಗೆ ಒಂದೇ ಸಮನೆ ಓಟಕಿತ್ತರು ಈ ಅಳಿಯ ಮತ್ತು ಮಾವ. ರಂಗನಾದರೋ ತನ್ನದೇ ಲೋಕದಲ್ಲಿ ವಿಹರಿಸುತ್ತಿದ್ದನು. ಕೇವಲ ಅಭಿನಯಿಸಲು ತವಕಿಸುತ್ತಿದ್ದ ಅವನಿಗೆ ಇದಾವುದರ ಪರಿವೆ ಇರಲಿಲ್ಲ. ಆದರೆ ಅವರಿಬ್ಬರೂ ಯಾಕಾಗಿ ಓಟ್ಟಿಗೆ ಓಡಿದರು? ಎನ್ನುವುದು ತಿಳಿಯದಾಯಿತು. ಇತ್ತ ತಿರುಗಿದರೆ ದುಷ್ಯಂತ ಶಕುಂತಲೆಯರೂ ಓಡುತ್ತಿದ್ದಾರೆ! "ಎಲಾ ಕರ್ಮವೆ ಇದೆಂತಹ ಕತೆ?" ಎನ್ನುವ ಬೆರಗಿನಿಂದ ಪರದೆಯ ಹಿಂಬದಿಯಲ್ಲಿದ್ದವನು ತನಗರಿವಿಲ್ಲದಂತೆ ಇತ್ತ ಬಂದು ನಿಂತ. ಒಡನೆ ಅವನ ಎದೆ, ತಲೆಗೆ ಬಂದು ಅಪ್ಪಳಿಸಿತು ಸಭಿಕರು ಎಸೆದ ಕಲ್ಲುಗಳು. "ಇಂಥ ವಂಚನೆಯ ನಾಟಕ ನಮಗೆ ಬೇಡ. ನಮ್ಮ ದುಡ್ಡು ವಾಪಾಸ್ ಕೊಡ್ರೋ" ಎಂದು ಗದ್ದಲ ಮಾಡುತ್ತಾ ವೇದಿಕೆಯ ಮೇಲೇರಿ ಬರತೊಡಗಿತು ಸಭಿಕರ ಸೈನ್ಯ. ಗರಬಡಿದಂತೆ ಬೆಪ್ಪಾಗಿದ್ದ ರಂಗನಿಗೆ ಪರಿಸ್ಥಿತಿಯ ಅರಿವಾಗಲು ವೇಳೆ ಹಿಡಿಯಲಿಲ್ಲ. ಓಡಲು ದಾರಿ ಹುಡುಕುತ್ತಿದ್ದ ಅವನ ಎದೆಗೆ ಮತ್ತೆರಡು ಕಲ್ಲು ಬಂದು ಬಡಿದವು. ಈಗ ಹಿಂದು ಮುಂದು ನೋಡದ ಅವನೂ ತನ್ನ ಕಾಲಿಗೆ ಬುದ್ಧಿ ಹೇಳಿದನು.

ಅಂತೂ ಅಂಕದ ಪರದೆ ಬೀಳುವ ಮೊದಲೇ ನಾಟಕ ಅಂತ್ಯವಾಯಿತು. ಆದರೆ ರಂಗದ ಮೇಲೆ ಮೆರೆದಾಡಬೇಕೆಂದಿದ್ದ ರಂಗನ ಆಸೆ ಮಾತ್ರ ಈಡೇರದಾಯಿತು. ನಾರ್ಣಪ್ಪಯ್ಯನ ಮುಂದಾಲೋಚನೆಗೆ ಅವನು ತನ್ನಲ್ಲೇ ತಲೆದೂಗಿದ. ಆದ್ರೆ ಈ ಬಡವ ನನಗೂ ಒಂದು ಮಾತು ಹೇಳಬಾರದಿತ್ತೆ? ಈಗ ಇವರೆಲ್ಲರ ಪಾಲಿನ ಪೆಟ್ಟನ್ನೂ ನಾನೊಬ್ಬನೇ ತಿನ್ನುವಂತಾಯಿತಲ್ಲಾ? ನನ್ಮಗ ಇನ್ನೊಮ್ಮೆ ಕ್ಯಾಂಪ್ ಹೊತ್ತು ಬರಲಿ ನಮ್ಮೂರಿಗೆ. ಇವನಿಗೆ ಮಾಡ್ತೇನೆ ಬಗೆ! ಓಡುತ್ತಿದ್ದಂತೆ ರಂಗ ನಾರ್ಣಪ್ಪಯ್ಯನ ಮೇಲೆ ಹಲ್ಲು ಕಡಿದ. ಕಣ್ಣಿಗೆ ಕಂಡ ದಾರಿಯಲ್ಲಿ ಓಡುತ್ತಿದ್ದರೂ ಅವನ ಕಾಲುಗಳು ಕಾಸರಗೋಡು ರೈಲು ನಿಲ್ದಾಣಕ್ಕೆ ತಲಪಿಸಿದವು. ಅದೇ ತಾನೆ ಬಂದಿದ್ದ ಗಾಡಿಯೊಂದು ನಿಲ್ದಾಣದಲ್ಲಿ ನಿಂತಿತ್ತು. ಧಾವಿಸಿ ಬಂದ ರಂಗ ಎತ್ತ ಏನೆಂದು ವಿಚಾರಿಸುವ ಗೊಡವೆಗೂ ಹೋಗದೆ ರೈಲನ್ನೇರಿ ಸ್ಥಳ ದೊರೆತಲ್ಲಿ ಕುಳಿತ. ಏದುಸಿರು ಬಿಡುತ್ತಿದ್ದ ಅವನು ಅಕ್ಕಪಕ್ಕದವರ ಮುಖ ನೋಡಲು ಹಿಂಜರಿಯುತ್ತಿದ್ದ. ಧಾರೆ ಕಟ್ಟಿ ಇಳಿಯುತ್ತಿದ್ದ ಬೆವರು ಒರೆಸಿಕೊಳ್ಳಲೆಂದು ರುಮಾಲಿಗಾಗಿ ತಡಕಾಡಿದ. ಪ್ರಾಣ ಭಯದಿಂದ ತನ್ನ ಕೈಚೀಲವನ್ನು ಅಲ್ಲೇ ಬಿಟ್ಟು ಬಂದ ನೆನಪಾಗಿ ಕಪಾಳಕ್ಕೆ ಹೊಡೆಸಿಕೊಂಡವನಂತಾದ. ಕೊನೆಗೆ–"ಹೋದ್ರೆ ಅಷ್ಟೇ ಹೋಯ್ತು ನನ್ನ ಜೀವವಾದ್ರೂ ಉಳಿಯಿತಲ್ಲಾ? ಅಬ್ಬಬ್ಬ ಶಿವಣ್ಣ ವಾಚು ಕೊಡದಿದ್ದುದು ಒಳ್ಳೆಯದೆ ಆಯಿತು" ಎಂದು ತನಗೆ ತಾನೆ ಸಮಾಧಾನ ಹೇಳಿಕೊಳ್ಳುತ್ತಾ ತೊಟ್ಟಿರುವ ಬಟ್ಟೆಯಲ್ಲೆ ಮುಖ ಒರೆಸಿದ. ಗಾಡಿಯ ವೇಗಕ್ಕೆ ಬೀಸಲಾರಂಭಿಸಿದ ಗಾಳಿ ಕಂಗೆಟ್ಟಿದ್ದ ಅವನ ಮನಕ್ಕೆ ತುಸು ತಂಪೆರಚಿತು. ಭಯ ಉದ್ವೇಗವೆಲ್ಲ ಸ್ಥಿಮಿತಕ್ಕೆ ಬರುತ್ತಿದ್ದಂತೆ ರಂಗನಿಗೆ ತಾನೆಲ್ಲಿರುವೆನೆಂಬ ಅರಿವಾಯಿತು. ಕಿಟಿಕಿಯಲ್ಲಿ ಮುಖವಿರಿಸಿ ಆ ಕತ್ತಲೆಯಲ್ಲೂ ರೈಲು ಓಡುತ್ತಿದ್ದ ದಿಕ್ಕನ್ನು ಗುರುತಿಸಿದನು.

ಒಂದರ ಮೇಲೊಂದರಂತೆ ಎದುರಾಗುತ್ತಿರುವ ಸಮಸ್ಯೆಗಳನ್ನು ಕಂಡು ತಲೆ ಚಚ್ಚಿಕೊಳ್ಳುವಂತಾಯಿತು. ಇಷ್ಟರಲ್ಲೇ ಮಂಗಳೂರು ತಲಪಲಿದ್ದ ಈ ಗಾಡಿಯಲ್ಲಿ ಟಿಕೇಟು ಇಲ್ಲದೆ ಪಯಣಿಸಿದ ತಪ್ಪಿಗೆ ನನ್ನನ್ನು ಸುಮ್ಮನೆ ಬಿಟ್ಟಾರೆ? ನಾಳೆ ಮತ್ತೆ ಕಂಬಿಗಿಂಬಿ ಎಣಿಸುವಂತಾದರೇನು ಗತಿ? ಅಲ್ಲದೆ ಸಹ ಪ್ರಯಾಣಿಕರ ಸಂಶಯದ ದೃಷ್ಟಿ ತನ್ನ ಮೇಲಿರುವುದನ್ನು ಗಮನಿಸಿದ ರಂಗ.

ಆದರೆ ಅವನ ಅದೃಷ್ಟವು ತುಸು ಚೆನ್ನಾಗಿತ್ತು. ರೈಲಿಗೆ ಸಿಗ್ನಲ್ ದೊರೆಯದ ಕಾರಣ ಉಳ್ಳಾಲ ಸೇತುವೆಯ ಸಮೀಪದಲ್ಲಿ ನಿಂತಿತು. ಗಡಬಡಿಸಿ ಮೇಲೆದ್ದ ರಂಗ ರೈಲಿನಿಂದ ಕೆಳಗೆ ಧುಮುಕಿ ಬಿಟ್ಟನು. 'ದೇವರೆ ಸದ್ಯಕ್ಕಂತೂ ಗೆದ್ದೆ' ಎದ್ದುಕೊಂಡವನೆ ಜಪ್ಪುವಿನ ಮಾರ್ಗವಾಗಿ ತನ್ನ ಮನೆಯ ದಾರಿ ಹಿಡಿದನು. ಕೊಳವೆ ದೀಪದ ಪ್ರಕಾಶ ಬೆಳದಿಂಗಳಿನಂತೆ ಪಸರಿಸಿತ್ತು. ಆದರೆ ಬೀದಿ ನಾಯಿಗಳು ಎಲ್ಲಿ ತನ್ನ ಬೆನ್ನಟ್ಟಿಕೊಂಡು ಬರುವವೊ ಎಂದು ಅಳುಕಿದ. ಮಾತ್ರವಲ್ಲದೆ ಈ ಅಪರಾತ್ರಿಯಲ್ಲಿ ಸನ್ಯಾಸಿಗಳು ಸಂಚರಿಸುವುದುಂಟೆ? ಎನ್ನುವ ಅನುಮಾನದಿಂದ ಯಾರಾದರೂ ನನ್ನನ್ನು ಚಚ್ಚಿದರೂ ಕೇಳುವವರಾರು? ಈ ವೇಷವನ್ನೇ ಕಿತ್ತೊಗೆದು ಬಿಡೋಣವೆಂದರೆ ಬದಲಾಯಿಸಲು ಬೇರೆ ಉಡುಪಾದರೂ ಬೇಕಲ್ಲಾ? ಅಯ್ಯೋ ನಾಟಕದ ಹುಚ್ಚಿನಿಂದಾಗಿ

ಇಂದು ಎಂತಹ ಅವಸ್ಥೆ ಪಡಬೇಕಾಯಿತು? ನೆನೆದಷ್ಟೂ ಮನ ನೊಂದಿತು.

ಹೇಗೂ ಮನೆ ತಲಪಿದ ರಂಗ. ಮೆಟ್ಟಲೇರುತ್ತಿದ್ದಂತೆ ಬಾಗಿಲಲ್ಲಿ ತೂಗುತ್ತಿದ್ದ ಬೀಗ ಅವನನ್ನು ಅಣಕಿಸುವಂತೆ ಕಂಡಿತು. 'ಅರೆ! ಎಲ್ಲಿ ಹೋದರಪ್ಪಾ ಈ ಅತ್ತೆ ಸೊಸೆ?' ರಂಗನ ಪ್ರಶ್ನೆಗೆ ದೂರದಿಂದ ಕೇಳಿ ಬರುತ್ತಿದ್ದ ಚೆಂಡೆಯ ನಾದ ಉತ್ತರಿಸಿತು.

ಥತ್ ಇದೆಂತಾ ಜಲ್ಮ ಕೆಟ್ಟ ಗ್ರಾಚಾರ ನಂದು? ಮಧ್ಯಾಹ್ನ ಎಷ್ಟೊಂದು ಸಂಭ್ರಮದಿಂದ ಊರಿಡೀ ಸುದ್ದಿ ಹರಡಿಸಿ ಹೊರಟಿದ್ದೆ ನಾನು? ಅದೇ ಈಗ ರಾತ್ರಿಯಾಗುವುದರೊಳಗೆ ತೊಟ್ಟ ವೇಷದಲ್ಲಿ ಕಳ್ಳನಂತೆ ಓಡಿ ಬರಬೇಕಾಯಿತೆ? ಇದರ ಸುಳಿವು ಪಕ್ಕದ ಮನೆ ಆನಂದನಿಗೆ ಸಿಕ್ಕರೂ ಸಾಕು ಮತ್ತೆ ಲೋಕಕ್ಕೆಲ್ಲಾ ಡಂಗುರ ಸಾರಿಸುವ ಹೊಣೆ ಹೊತ್ತಾನು. ಭಂಡಸಾಲೆ ಮನೆ ಕೊರಗಣ್ಣನ ಹಟ್ಟಿ ಚಾಕರಿ ಒಂದು ಮುಗಿದರೆ ಮತ್ತವನಿಗಿರುವುದು ತನ್ನದಲ್ಲದ ವಿಚಾರದಲ್ಲಿ ತಲೆ ಹಾಕುವುದು. ನಾರದನೆಂದು ಅಡ್ಡ ಹೆಸರು ಗಳಿಸಿದ್ದರೂ ಅವನಿಗೆ ಬುದ್ಧಿ ಬರಲಿಲ್ಲ. ಆನಂದನ ಸಂಗತಿ ಹಾಗಿರಲಿ ಅಮ್ಮನಿಗೆ ಗೊತ್ತಾದರೂ ನನ್ನ ಕತೆ ಮುಗಿದಂತೆಯೆ. ತಾಯಿಯ ಭಯ ಬಲವಾದಾಗ ಮೆಲ್ಲನೆ ಅಲ್ಲಿಂದ ಕಾಲ್ತೆಗೆದ ರಂಗ. ಬಿರಬಿರನೆ ಹೆಜ್ಜೆ ಹಾಕಿ ಮಂಟಪದತ್ತ ನಡೆದನು.

ಹಿಂದೆ ರಾಜರ ಕಾಲದಲ್ಲಿ ಕುದುರೆ ಸವಾರರಿಗೆ ದಣಿವಾರಿಸಿಕೊಳ್ಳಲೆಂದು ನಿರ್ಮಿಸಿದ್ದ ಕಲ್ಲು ಮಂಟಪವಾಗಿತ್ತದು. ಇದರ ಪಕ್ಕದಲ್ಲೇ ಪುಟ್ಟದೊಂದು ನೀರಿನ ಕೊಳ. ಇಂದು ಕೊಳದ ಸ್ವರೂಪವೇನೂ ಉಳಿದಿಲ್ಲವಾದರೂ ಪಾದ ಮುಳುಗುವಷ್ಟು ನೀರಿರುತ್ತಿತ್ತು ಆ ಹೊಂಡದಲ್ಲಿ. ಸುತ್ತಲೂ ಕುರುಚಲು ಗಿಡಗಳ ಪೊದೆ ಹಾಗೂ ಊರೊಳಗೆ ಹೋಗುವುದಕ್ಕೆ ಒಂದು ಕಾಲು ದಾರಿಯೂ ಅಲ್ಲಿತ್ತು.

ಮಂಟಪದೊಳಗೆ ಗೆಳೆಯರಿದ್ದರೂ ಇರಬಹುದೆಂದು ಹುರುಪಿನಿಂದ ಬಂದ ರಂಗ ಈಗ ಬೆಚ್ಚಿಗಕ್ಕನೆ ನಿಂತುಬಿಟ್ಟ. ದುರಸ್ಥಿಯೂ ಇಲ್ಲದೆ ಪಾಳು ಬಿದ್ದಿರುವ ಈ ಮಂಟಪದೊಳಗಿನ ಗಾಢಾಂದಕಾರ, ನೀರವತೆ ಅವನಲ್ಲಿದ್ದ ಧೈರ್ಯವನ್ನು ನುಂಗಿ ಹಾಕಿತು. ಗಾಳಿಗೆ ಸರಿದಾಡುತ್ತಿದ್ದ ತರಗೆಲೆಗಳ ಸದ್ದು, ಮರಗಿಡಗಳ ನೆರಳು ರಂಗನಲ್ಲಿ ಪುಕ್ಕಲುತನವನ್ನುಂಟು ಮಾಡಿತು. ಎಂದೂ ಕಂಡರಿಯದ ದೆವ್ವ ಪಿಶಾಚಿಗಳ ಆಕೃತಿಗಳು ಅವನ ಕಣ್ಣ ಮುಂದೆ ಕುಣಿಯಲಾರಂಭಿಸಿತು. ಇವೆಲ್ಲವೂ ತಾನು ದಿನನಿತ್ಯ ನೋಡುತ್ತಿದ್ದ ಪರಿಸರ ಎನ್ನುವುದನ್ನು ಮರೆತ. ಹೆದರಿಕೆಯಿಂದ ಕಿರುಚಿಕೊಳ್ಳಲೂ ಸ್ವರವಿಲ್ಲದೆ ಹೆಜ್ಜೆ ಎತ್ತಿಡಲೂ ಬಾರದೆ ನಿಂತಲ್ಲೇ ನಡುಗುತ್ತ ಕುಸಿದು ಕುಳಿತನು ಮೆಟ್ಟಲ ಮೇಲೆ. ದೇವರನ್ನು ಕನಸಿನಲ್ಲೂ ಸ್ಮರಿಸಿ ಅಭ್ಯಾಸವಿಲ್ಲದ ರಂಗನಿಗೆ ಈ ಅವಸರದ ಹೊತ್ತಲ್ಲಿ ಯಾವ ದೇವರ ಹೆಸರೂ ನೆನಪಿಗೆ ಬಾರದು. "ಅಮ್ಮಾ" ಎಂದು ಚೀರಿದ ಅವನ ಮನ ತಾಯಿಯನ್ನು ನೆನೆಯಿತು. ಮಳೆಗಾಲದಲ್ಲಿ ಸಿಡಿಲು ಮಿಂಚಿನ ಘರ್ಜನೆ ಜೋರಾದಾಗ ತಾಯಿ, "ರಾಮಾ ರಾಮಾ ರಾಮಾ ರಾಮಾ" ಎಂದು ಕಣ್ಣು ಮುಚ್ಚಿ ಕುಳಿತಿರುತ್ತಿದ್ದುದು ಜ್ಞಾಪಕಕ್ಕೆ ಬಂತು. ಒಡನೆ ಅವನು ಕೆನ್ನೆಗೆ ಚುಚ್ಚುತ್ತಿದ್ದ ಗಡ್ಡ ಮೀಸೆಯನ್ನು ರೋಷದಿಂದ ಕಿತ್ತೊಗೆದು ರಾಮನಾಮ ಜಪಿಸತೊಡಗಿದನು. ಹಸಿವು ಆಯಾಸದಿಂದ ಬಳಲಿದ್ದ ರಂಗನಿಗೆ ಮೆಲ್ಲಮೆಲ್ಲನೆ ಜೊಂಪು ಹತ್ತಿತು.

ಬೆಳಗಿನ ಜಾವದ ರೈಲಿನ ಶಿಳ್ಳು ಅವನ ನಿದ್ದೆಯನ್ನು ಕೆಡಿಸಿತು. ಕಣ್ಣು ತೆರೆದು ಅತ್ತಿತ್ತ ನೋಡಿದವನೇ ದಡಕ್ಕಂತ ಎದ್ದು ಕುಳಿತನು. ತಾಳಮದ್ದಳೆ ಮುಗಿದು ಒಬ್ಬೊಬ್ಬರೇ ಆ ದಾರಿಯಾಗಿ ಬರುತ್ತಿದ್ದರು. ರಂಗ ಸಂಕೋಚದಿಂದ ಒಂದೇ ಹಿಡಿಯಾದ. ಬೇಗನೆ ಕಂಬದ ಮರೆಗೆ ಸರಿದು ನಿಂತ. ಜನಸಂಚಾರ ಕಡಿಮೆಯಾಗುವಷ್ಟರಲ್ಲಿ ಬೆಳಕೂ ಹರಿದಿತ್ತು. ಇನ್ನು ಬಯಲ ಕಡೆಗಾದರೂ ಹೋಗಿ ಬರೋಣವೆಂದೆನಿಸಿದ ಅವನಿಗೆ ರಸ್ತೆಯ ತಿರುವಿನಲ್ಲಿ ಬರುತ್ತಿದ್ದ ಗೆಳೆಯರನ್ನು ಕಂಡು ಕುಣಿಯುವಂತಾಯಿತು. 'ಅಯ್ಯಪ್ಪ ದ್ಯಾವ್ರೇ ಇನ್ನಾದರೂ ನನ್ನನ್ನೀ ಸಂಕಟದಿಂದ ಪಾರು ಮಾಡಪ್ಪಾ' ಎಂದು, ಕಾಣದ ದೇವರಿಗೆ ಕೈ ಮುಗಿದ. ಇದು ನಾಚಿಕೆಗೇಡಿನ ವಿಷಯವೆಂದು ಗೆಳೆಯರಲ್ಲಿ ಹೇಳಲು ನಾನೀಗ ಸಂಕೋಚಪಟ್ಟಲ್ಲಿ ಕೆಲಸವಾಗದು. ಮುಚ್ಚುಮರೆ ಇಲ್ಲದೆ ಎಲ್ಲವನ್ನೂ ತಿಳಿಸಿ ಮೊತ್ತ ಮೊದಲು ರತ್ನಳಿಂದ ನನ್ನದೊಂದು ಬಟ್ಟೆ ತರಿಸಿಕೊಳ್ಳಬೇಕು. ಬಾಕಿದ್ದೆಲ್ಲ ಮತ್ತೆ ನೋಡೋಣ. ತನ್ನಲ್ಲೇ ಯೋಚಿಸು

ತ್ತಿದ್ದ ರಂಗನಿಗೆ ತಟ್ಟನೆ ಗೆಳೆಯರನ್ನು ಕೀಟಲೆ ಮಾಡಿದರೆ ಹೇಗೆ? ಎಂದೆನಿಸಿತು. ಎಸೆದಿದ್ದ ಜಟೆ, ಗಡ್ಡವನ್ನು ಕೂಡಲೆ ಹೆಕ್ಕಿ ತಂದು ಸಿಕ್ಕಿಸಿಕೊಂಡನು. ಕ್ಷಣದಲ್ಲಿ ಪದ್ಮಾಸನ ಹಾಕಿ, ಧ್ಯಾನದ ಭಂಗಿಯಲ್ಲಿ ಕಣ್ಣು ಮುಚ್ಚಿ ಕುಳಿತನು.

ಮಂಟಪದೊಳಗಿನ ದಿಢೀರ್ ಸನ್ಯಾಸಿಯನ್ನು ಕಂಡ ಮಿತ್ರರ ತಂಡ ಚಕಿತಗೊಂಡಿತು. ಈ ತಲೆ ತಿರುಕನಿಂದಾಗಿ ನಮ್ಮ ಆಟಕ್ಕೆ ಅಡಚಣೆಯಾಯಿತಲ್ಲಾ? ಎಂದು ಶಿವಣ್ಣ ಚಿಂತಿಸುತ್ತಿದ್ದಂತೆ ಇತರರು ಸನ್ಯಾಸಿಯ ಕಾಲಿಗೆ ಉದ್ದಂಡ ನಮಸ್ಕಾರ ಹಾಕಿಯೇ ಬಿಟ್ಟರು. ಮೊದಲೇ ಅಸಮಾಧಾನಗೊಂಡಿದ್ದ ಶಿವಣ್ಣ ಈಗ ಸಿಟ್ಟಿನಿಂದ ಕೆಂಡವಾದ.

"ಏಯ್.... ಏಳ್ರೋ ಮೇಲಕ್ಕೆ! ಅವನ ಕಾಲಲ್ಲೇನು ಮುತ್ತು ಸುರಿತದೆಂದುಕೊಂಡಿರಾ? ಯಾರು ಏನೆಂದು ತಿಳಿಯುವ ಮೊದಲೆ ಆತುರವೇನಿತ್ತು ನಿಮಗೆ? ಇಲ್ಲೆ ಮರೆಯಲ್ಲಿ ಆಟವಾಡಿಕೊಂಡಿದ್ದು ಇವನ ಮೇಲೊಂದು ಕಣ್ಣಿಡೋಣ. ನಿಜವಾಗ್ಲೂ ಯೋಗ್ಯನಾಗಿದ್ದಲ್ಲಿ ಗೌರವಿಸೋಣ. ಇಲ್ಲವಾದಲ್ಲಿ ಒದ್ದು ಓಡಿಸಿದರಾಯ್ತು ಏನಂತೀರಿ ನೀವೆಲ್ಲ?"

"ಹಾಗನ್ಬೇಡ್ರೋ ಶಿವಣ್ಣ. ನೋಡೂ.... ನಿಂಗೆ ಬೇಜಾರಾದ್ರೂ ಚಿಂತಿಲ್ಲ, ಇಂತವರೆದುರು ಆಡಲು ನಾವಂತೂ ಸಿದ್ಧರಿಲ್ಲಪ್ಪ, ಹಾಗೂ ನಿಂಗೆ ಆಡ್ಲೇ ಬೇಕಂತಿದ್ದರೆ ಹೇಗೂ ರಂಗನ ಬದ್ಲಿಗೆ ಆನಂದನನ್ನು ಕರ್ಕೊಂಡು ಬಂದಿದ್ದೀಯಲ್ಲಾ? ಆಡ್ಕೊಳ್ಳಿ ನೀವಿಬ್ರೂ" ಇಷ್ಟು ಹೇಳಿದವರೆ ಅಲ್ಲಿಂದ ಹೊರಟು ಹೋದರು ವಿಠಲ ಮತ್ತು ಸುಂದರ. "ಮೂರ್ಖರು ಶತಮೂರ್ಖರು" ಶಿವಣ್ಣ ಗೊಣಗಿಕೊಂಡು ಸನ್ಯಾಸಿಯನ್ನು ಕೆಕ್ಕರಿಸಿ ನೋಡಿದ. ಗೆಳೆಯರ ಮಾತುಕತೆ ಕೇಳಿಸಿಕೊಂಡ ರಂಗನಿಗೆ ನಗು ತಡೆಯಲಾಗಲಿಲ್ಲ. ಒಂದೇ ಭಂಗಿಯಲ್ಲಿ ಕುಳಿತು ಸಾಕಾಗಿತ್ತಲ್ಲದೆ ಬಯಲ ಕಡೆಗೆ ಹೋಗುವ ಅವಸರವೂ ಅವನಿಗಿತ್ತು. ಆದ್ದರಿಂದ ಇನ್ನೇನು ತನ್ನ ನಿಜರೂಪವನ್ನು ತೋರಿಸಿ ಬಿಡೋದೇ ಸರಿ ಎಂದುಕೊಂಡು ಗಡ್ಡಕ್ಕೆ ಕೈ ಹಾಕಿದ. ಅಷ್ಟರಲ್ಲಿ–

"ಅವರಿಬ್ರೂ ಹೊರ್ಟೋದ್ಮೇಲೆ ಇನ್ನೆಲ್ಲಿದೆಯೋ ಆಟದಲ್ಲಿ ಮಜಾ?" ಆನಂದ ತನ್ನ ಅಸಮ್ಮತಿ ವ್ಯಕ್ತಪಡಿಸಿದ.

"ಸ್ವಲ್ಪ ಸುಮ್ಮನಿರಯ್ಯ ನೀನಾದ್ರೂ ಅವರಂತೆ ತಲೆಹರಟೆಯಾಡ್ಬೇಡ."

"ಯಾಕೊ ಸಿಟ್ಟಾಗ್ತಿ? ಒಂದ್ವೇಳೆ ಇವನು ಸಿಐಡಿ ಗಿಐಡಿಯಾಗಿದ್ದಲ್ಲಿ ನಾವ್ಯಾಕೆ ಗ್ರಾಚಾರವನ್ನು ಮೈಮೇಲೆ ಎಳ್ಕೋಬೇಕು? ಬಾ ಬೇರೆಲ್ಲಿಯಾದ್ರೂ ಜಾಗ ನೋಡೋಣ" ಹೇಳುತ್ತಿದ್ದಂತೆ ಶಿವಣ್ಣನ ಕೈ ಹಿಡಿದೆಳೆದು ಕರೆದೊಯ್ದನು. ಆನಂದನ ಸ್ವರ ಕಿವಿಗೆ ಬಿದ್ದೊಡನೆ ರಂಗ ಬಾಯಿದ್ದೂ ಮೂಕನಾದ. ಆದರೆ ಹೊಟ್ಟೆ ಉಬ್ಬರಿಸಿ ಬರತೊಡಗಿದ್ದರಿಂದ ಬೇರೆ ಯೋಚನೆಗೆ ಗಮನ ಕೊಡಲಾದೀತೆ? ಮತ್ತೊಂದು ಕ್ಷಣವೂ ತಡಕೊಳ್ಳುವ ಸ್ಥಿತಿಯಲ್ಲಿಲ್ಲದ ಅವನು ಕುರುಚಲು ಗಿಡಗಳ ಪೊದೆಯ ಮರೆಗೆ ಓಡಿದ. ದೇಹಭಾದೆ ತೀರಿಸಿ ಪಾಚಿ ಕಟ್ಟಿ ಕೊಳಕಾಗಿದ್ದ ಕೊಳದ ನೀರಿನಲ್ಲೇ ಬಾಯಿ ಮುಕ್ಕಳಿಸಿ ಮುಖ ತೊಳೆದನು.

ಹೊಟ್ಟೆ ಹಗುರವಾದ ಸಮಾಧಾನದಿಂದ ಮತ್ತೆ ಮಂಟಪದ ಕಡೆಗೆ ಮರಳಿದ. ಅಲ್ಲಿ ಕಣ್ಣೀರಿಡುತ್ತಾ ಕುಳಿತಿದ್ದ ದುಗ್ಗಕ್ಕನನ್ನು ಕಂಡು



ಪೆಚ್ಚಾದ. ಜೂಜಾಡಲು ಕೈಯಲ್ಲಿ ಕಾಸಿಲ್ಲದಾಗ ಇದೇ ದುಗ್ಗಕ್ಕನಲ್ಲವೆ ನನಗೆ ಕೈಗಡ ಕೊಡುತ್ತಿದ್ದವಳು? ಹಾಗಿದ್ದೂ ನಾನೀಗ ಅವಳ ದುಃಖದ ಕಾರಣ ವಿಚಾರಿಸಲು ಈ ಹಾಳು ವೇಷ ಒಂದು ಅಡ್ಡ ಬರಬೇಕೆ? ಹೋಗಲಿ ನನ್ನ ಪರಿಸ್ಥಿತಿಯನ್ನು ತಿಳಿಸಿ ಇವಳಿಂದಾದರೂ ಸಹಾಯ ಪಡೆದರೆ ಹೇಗೆ? ಬೇಡ ಬೇಡ ಎಷ್ಟೆಂದರೂ ಹೆಂಗಸರ ಬಾಯಿಯಲ್ಲವೆ? ಗುಟ್ಟು ರಟ್ಟಾಗಲು ಸಮಯ ತಗಲಲಾರದು. ಇವಳು ಇಲ್ಲಿಂದ ಹೊರಡುವ ತನಕ, ಓ–ಅಲ್ಲಿರುವ ಮರದ ಹಿಂದೆ ಅವಿತಿಟ್ಟುಕೊಳ್ಳುವುದೇ ಒಳ್ಳೆಯದು. ಹೀಗೆಂದು ಯೋಚಿಸಿದ ರಂಗ ಇನ್ನೇನು ಅತ್ತ ತಿರುಗಬೇಕು ಎನ್ನುವಷ್ಟರಲ್ಲಿ ಅವನು ದುಗ್ಗಕ್ಕನ ದೃಷ್ಟಿಗೆ ಬಿದ್ದೇ ಬಿಟ್ಟ. ಕುಳಿತಲ್ಲಿಂದ ಧಿಗ್ಗನೆದ್ದ ಅವಳು ಓಡಿ ಬಂದು ಇವನ ಕಾಲಿಗೆ ಸಾಷ್ಟಾಂಗವೆಸಗಿದಳು. ಕಾರಣ ತಿಳಿಯದ ರಂಗ ಅವಕ್ಕಾದ. ಯಾಕೆ ದುಗ್ಗಕ್ಕ ಹೀಗೆ ಮಾಡಿದೆ? ಕೇಳಬೇಕೆಂದು ನಾಲಗೆ ತುದಿವರೆಗೆ ಬಂದ ಮಾತನ್ನು ನುಂಗಿದ.

"ಸ್ವಾಮಿ ಎರಡು ದಿನದಿಂದಲೂ ಕಾಣೆಯಾಗಿರುವ ನಮ್ಮ ಹಸು ಒಂದನ್ನು ಹುಡುಕಿ ಹುಡುಕಿ ಸೋತು ಸುಣ್ಣಾದೆ ನಾನು. ಇವತ್ತೂ ಬರಿಗೈಯಲ್ಲೇ ಹೋದ್ರೆ ಮನೆಯೊಳಗೆ ಸೇರಿಸೋದಿಲ್ಲಾಂತ ಅಂದಿದ್ದಾರೆ ನಮ್ಮತ್ತೆ. ಆದ್ದರಿಂದ ಹ್ಯಾಗಾದ್ರೂ ಮಾಡಿ ನನ್ನ ಕಷ್ಟ ಪರಿಹರಿಸಿ ಸ್ವಾಮಿ." ದುಗ್ಗಕ್ಕ ತನ್ನ ಅಳಲನ್ನು ತೋಡಿಕೊಂಡಳು. 'ಅರೆ ಮಲಾಮತ್ ಇದೊಳ್ಳೆ ಪಜೀತಿಯಾಯ್ತಲ್ಲಾ?' ನನ್ನ ಸಮಸ್ಯೆಯನ್ನೇ ಬಗೆಹರಿಸಲಾಗದಿರುವಾಗ ಇನ್ನು ಇವಳಿಗೂ ನಾನೇ ಪರಿಹಾರ ಸೂಚಿಸಬೇಕೆಂದರೆ ಹೇಗಪ್ಪಾ ಸಾಧ್ಯ? ಮನದಲ್ಲಿ ತರ್ಕಿಸಿಕೊಳ್ಳುತ್ತಿದ್ದ ರಂಗನಿಗೆ ತಟ್ಟನೆ ಇಂತು ಪೊರ್ಬು ಜ್ಞಾಪಕಕ್ಕೆ ಬಂದ. ಸರಿ, ಇದು ಅವನದೇ ಕಾರ್ಬಾರ್ ಆಗಿರಬೇಕು. ತನ್ನ ಗದ್ದೆಯ ಪೈರು ತಿಂದ ಜಾನುವಾರುಗಳಿಗೆಲ್ಲ ಅವನು ದೊಡ್ಡಿಯ ದಾರಿ ತೋರಿಸುತ್ತಿದ್ದ ವಿಚಾರ ರಂಗನಿಗೂ ತಿಳಿದಿತ್ತು. ಆದರೆ ಈ ಮಾತನ್ನು ಅವಳಿಗೆ ಯುಕ್ತಿಯಿಂದಲೆ ತಿಳಿಸಬೇಕಲ್ಲವೆ? ಹೇಗೂ ನನ್ನನ್ನು ಸನ್ಯಾಸಿ ಎಂದೇ ಭಾವಿಸಿರುವಳು.

ದುಗ್ಗಕ್ಕನ ಮುಖ ನೋಡಲು ಧೈರ್ಯ ಸಾಲದ ರಂಗ, ನೇರ ಮಂಟಪದೊಳಗೆ ಬಂದು ಕಣ್ಣುಮುಚ್ಚಿ ಪದ್ಮಾಸನದಲ್ಲಿ ಕುಳಿತನು. ಕೈ ಬೆರಳುಗಳನ್ನು ಮಡಚಿ ತೆರೆದು, ಎಣಿಸಿ ಗುಣಿಸುವ ನಟನೆ ಮಾಡಿದನು. ಬಳಿಕ ಸ್ವರ ಬದಲಾಯಿಸುತ್ತಾ–

"ಇಷ್ಟಕ್ಕೆಲ್ಲಾ ಯೋಚ್ನೆ ಯಾಕೆ ತಾಯಿ? ನಿನ್ನ ಸೊತ್ತು ನಿನಗೇ ದಕ್ಕುವುದು. ಸದ್ಯಕ್ಕಂತೂ ಅದು



ಪ್ರಾಣಿಗಳ ಜೈಲಿನಲ್ಲಿ ಬಂದಿಯಾಗಿ ಬಿಟ್ಟಿದೆ. ಇನ್ನೂ ನೀನು ತಡ ಮಾಡಿದ್ದಲ್ಲಿ ಅದು ಕಟುಕರ ಪಾಲಾಗಲೂಬಹುದು. ಇಲ್ಲಿಂದ ನೇರವಾಗಿ ಪೂರ್ವ ದಿಕ್ಕಿನತ್ತ ನಡೆದಲ್ಲಿ–" ರಂಗನ ಮಾತು ಪೂರೈಸುವ ಮೊದಲೇ ದುಗ್ಗಕ್ಕ ಅಷ್ಟು ದೂರ ಓಡಿಯಾಗಿತ್ತು. ತಾನು ಮಾತನಾಡಿದ ರೀತಿ ನೆನೆದು ರಂಗನಿಗೆ ನಗು ಬಂತು.

ಬಿಸಿಲೇರುತ್ತಾ ಬಂದಂತೆ ಅವನ ಹೊಟ್ಟೆ ಚುರುಗುಟ್ಟಲಾರಂಭಿಸಿತು. 'ಮನೆಯಲ್ಲಾದರೆ ಇಷ್ಟು ಹೊತ್ತಿನಲ್ಲಿ ದೊಡ್ಡ ಲೋಟದ ತುಂಬಾ ಓಲೆಬೆಲ್ಲದ ಕಾಫಿ ಮತ್ತು ಕಲಸಿದ ಅವಲಕ್ಕಿಯೋ ಇಲ್ಲ ಪೋಲೆದಮ್ಮನ ಅಂಗಡಿಯಿಂದ ತರುವ ಪೋಲೆ (ದೋಸೆ)ಯೋ ತಿಂದಾಗುತ್ತಿತ್ತು' ಎಂದು ಹಿಂದಿನ ದಿನದವರೆಗಿನ ತನ್ನ ದಿನಚರಿಯನ್ನು ನೆನೆದ. ಹೊತ್ತಿಗೆ ಸರಿಯಾಗಿ ಕುಳಿತಲ್ಲೇ ಊಟ ತಿಂಡಿ ತಿಂದು ಅಭ್ಯಾಸವಾಗಿದ್ದ ರಂಗನಿಗೆ ಇಂದು ಹಸಿವಿನ ಬೇಗೆ ಏನೆಂಬುದರ ಅರಿವಾಯಿತು.

ತಲೆ ಮೇಲೆ ಗೊಬ್ಬರದ ಬುಟ್ಟಿ ಹೊತ್ತು ಗದ್ದೆಗೆ ಸಾಗಿಸುತ್ತಿದ್ದ ವಿಠಲನನ್ನು ಅಷ್ಟು ದೂರದಿಂದ ಕಂಡ ರಂಗನಿಗೆ ಜೀವ ಬಂದಂತಾಯಿತು. ಅತ್ತ ಇತ್ತ ನೋಡದೆ ಒಂದೇ ಬಾರಿಗೆ ಅವನು–

"ಇಟಲಾ... ಓ... ಇಟಲಾ" ಎಂದು ಜೋರಾಗಿ ಕೂಗು ಹಾಕಿದ. ಹೊರೆಯ ಭಾರದಿಂದಾಗಿ ಕರೆದವರಾರೆಂದು ಕತ್ತು ಹೊರಳಿಸಿ ನೋಡಲಾರದೆ ನಿಂತಲ್ಲೆ ಒಮ್ಮೆ ಆಚೀಚೆ ಕಣ್ಣಾಡಿಸಿದ ವಿಠಲ. ಅಲ್ಲಿ ತನ್ನ ಪರಿಚಯಸ್ಥರು ಯಾರೂ ಕಾಣದಿರಲು ಅವನು ಮುಂದಕ್ಕೆ ಹೆಜ್ಜೆ ಹಾಕಿದನು. ರಂಗನಿಗಾದ ಸಂಕಟ ಹೇಳತೀರದು. ಗಲ್ಲಕ್ಕೆ ಕೈ ಊರಿ ಕುಳಿತ ಅವನು 'ಕಟ್ ಕಟ್' ಸದ್ದು ಕೇಳಿ ದೃಷ್ಟಿ ಅತ್ತ ಹೊರಳಿಸಿದ.

ಸೊಂಟದಲ್ಲಿ ತಿಂಡಿಯ ಕುಕ್ಕೆಯನ್ನಿರಿಸಿ ಆಧಾರಕ್ಕೆಂದು ಹಿಡಿದಿದ್ದ ದೊಣ್ಣೆಯನ್ನು ನೆಲಕ್ಕೆ ಕುಟ್ಟುತ್ತಾ ಬರುತ್ತಿದ್ದಳು ಪೌಲಿನ್ ಬಾಯಿ. ಮಕ್ಕಳಿಗೆ ಪ್ರಿಯವಾದ ನೆಲ್ಲಿ ಬುಗರಿ, ಹುಣಿಸೇ ಬೀಜ, ಜತೆಗೆ ಬೇಯಿಸಿದ ಗೆಣಸುಗಳನ್ನು ಮಾರಿ ದಿನ ದೂಡುತ್ತಿದ್ದಳು ಮುದುಕಿ. ಜ್ಞಾನೋದಯ ಶಾಲೆಯ ಗೇಟಿನ ಬುಡವೇ ಅವಳ ವ್ಯಾಪಾರದ ಖಾಯಂ ಜಾಗ. ಆ ಬುಟ್ಟಿಯಲ್ಲಿದ್ದ ಗೆಣಸನ್ನು ನೆನೆದೊಡನೆ ರಂಗನ ಬಾಯಲ್ಲಿ ನೀರೂರಿತು. ಆದರೆ ಆ ದಾರಿಯಾಗಿ ಹೋಗುತ್ತಿದ್ದವರಿಂದಾಗಿ ಆಕೆಯನ್ನು ಗಟ್ಟಿಯಾಗಿ ಕರೆಯಲಾರದೆ "ಬಾಯಮಾ ಬಾಯಮಾ ಓ ಬಾಯಮಾ" ಎಂದ ಮೆಲ್ಲನೆ. ಮುದುಕಿಯದು ಮಂದ ಕಿವಿಯಾದರೂ ಹತ್ತಿರದಲ್ಲಿ ಕರೆದುದರಿಂದ "ಯಾರದು?" ಎಂದು ಇತ್ತ ತಿರುಗಿದಳು. ಅಲ್ಲಿ ನಿಂತಿದ್ದ ಕಾವಿಬಟ್ಟೆಯವನನ್ನು ಕಂಡು

'ಈ ಸನ್ಯಾಸಿಗಳಿಗ್ಯಾಕಪ್ಪಾ ಮಕ್ಕಳ ತಿನಿಸಿನ ಮೇಲೆ ಆಸೆ? ಇಷ್ಟಕ್ಕೂ ಇವನ ಬಳಿ ದುಡ್ಡಿರಬಹುದೆ? ಸಾಲಗೀಲ ಕೇಳಿದರೆ? ಇಲ್ಲ ದಾನ ಕೊಡೆಂದರೆ? ಛೆ, ನನಗ್ಯಾಕೆ ಈ ರಗಳೆಗಳೆಲ್ಲ?' ಪೌಲಿನ ಬಾಯಿ ಯೋಚಿಸುತ್ತಿದ್ದಂತೆ ಹಸಿವು ತಾಳಲಾರದ ರಂಗ, ಬಳಿ ಬರುವಂತೆ ಅವಳನ್ನು ಮತ್ತೂ ಮತ್ತೂ ಕೈಬೀಸಿ ಕರೆದ.

"ಇದರಲ್ಲಿ ನಿಮ್ಮಂತವರು ತಿನ್ನುವಂತದ್ದೇನಿಲ್ಲ ಸ್ವಾಮಿ ಹಾಗೂ ನಿಮಗೆ ಬೇಕೆಂದಾದರೆ ಹತ್ತು ಪೈಸೆ ಕೊಟ್ಟು ತಕಳ್ಳಿ ಮತ್ತೆ... ಕಡಗಿಡದ ಪಂಚಾತಿಕೆ ನನ್ನಲ್ಲಿಲ್ಲ" ಮುದುಕಿ ಕಡಾಕಡಿಯಾಗಿ ಹೇಳಿ ಅಲ್ಲಿಂದ ಹೊರಟು ಹೋದಳು. ಶಾಲೆ ಬಿಡುವುದರೊಳಗೆ ತಾನಲ್ಲಿರಬೇಕೆನ್ನುವ ಆತುರವೂ ಅವಳಿಗಿತ್ತು.

ಮೊದಲೇ ಕಂಗೆಟ್ಟಿದ್ದ ರಂಗ ಈಗ ಕೈ ಕೈ ಹಿಚುಕಿಕೊಂಡ. ಛೆ, ಒಂದು ಹತ್ತು ಪೈಸೆಗೂ ನನ್ನಲ್ಲಿ ಗತಿ ಇಲ್ಲದೆ ಹೋಯಿತೆ? ದಿನನಿತ್ಯದ ಆಟದಲ್ಲಿ ಎಷ್ಟೊಂದು ಹಣ ಕಳಕೊಂಡಿಲ್ಲ ನಾನು? ನಿರುದ್ಯೋಗದ ನೆಪದಲ್ಲಿ ತಾಯಿ ಗಳಿಸಿದ್ದನ್ನೇ ತಿಂದು ಕೊಬ್ಬಿದೆನಲ್ಲಾ? ಕಿವಿ ಕಣ್ಣು ಮಂಜಾಗಿದ್ದರೂ ದುಡಿದು ತಿನ್ನುವ ಆಸೆ ಹೊತ್ತ ಈ ಬಾಯಮನಿಗಿಂತ ಕೀಳಾದೆನೆ ನಾನು? ರಂಗನಿಗೆ ತನ್ನ ಮೇಲೇ ಜುಗುಪ್ಸೆ ಬಂತು. ಹೊಟ್ಟೆಯ ಕೂಗು, ದುಡ್ಡಿಗಿರುವ ಬೆಲೆ ಅವನ ಕಣ್ಣು ತೆರೆಯಿಸಿತು. ಆದರೇನು ತನ್ನ ತಪ್ಪಿನ ಅರಿವಾದಾಗ ಕಾಲ ಮಿಂಚಿ ಹೋಗಿತ್ತು.

ದೂರದಿಂದ ಬರುತ್ತಿದ್ದ ದುಗ್ಗಕ್ಕನನ್ನು ನೋಡಿ, ಇವಳು ಇನ್ನೇನು ಸಂಕಟ ತಂದಳಪ್ಪಾ ಎಂದು ಹೆದರಿದ. ಆದುದಾಗಲಿ ಇವಳೊಂದಿಗೆ ನನ್ನ ನಿಜಸ್ಥಿತಿ ಹೇಳಿಬಿಡುವುದೇ ವಾಸಿ. ಹೀಗೆ ಎಷ್ಟು ದಿನಾಂತ ಉಪವಾಸ ವನವಾಸ ಮಾಡಲಾದೀತು ನನ್ನಿಂದ? ರಂಗ ತನ್ನ ವೇಷ ಬಯಲು ಮಾಡಲು ನಿರ್ಧರಿಸಿದ. ಮಂಟಪದ ಮೆಟ್ಟಲೇರಿ ಬಂದ ದುಗ್ಗಕ್ಕ "ಸ್ವಾಮಿೂ ನಿಮ್ಮ ದಯದಿಂದ

ನನ್ನ ದನ ನನಗೆ ಮರಳಿ ದೊರೆಯಿತು" ಎಂದ ವಳೇ ತಾನು ತಂದಿದ್ದ ಚಿಪ್ಪು ಬಾಳೆಹಣ್ಣು, ಎರಡು ಕುಡ್ತೆ ನೊರೆಹಾಲು, ಹೂವು, ಊದುಕಡ್ಡಿ ಮೇಲೆ ಎಂಟಾಣೆ ಪಾವಲಿಯ ಕಾಣಿಕೆಯನ್ನು ಅವನ ಮುಂದಿರಿಸಿ ಅಡ್ಡ ಬಿದ್ದು ಮೇಲೆದ್ದಳು. ರಂಗ ಬೆಕ್ಕಸಬೆರಗಾದ. ಮಾತನಾಡಲೆಂದು ಅವನು ತೆರೆದ ಬಾಯಿ ತೆರೆದಂತೇ ಇತ್ತು. ದುಗ್ಗಕ್ಕ ಮರೆಯಾಗುವವರೆಗೂ ದಿಟ್ಟಿಸಿದ ಅವನ ಕಂಗಳು ಬಳಿಕ ಅವಳು ತಂದಿರಿಸಿದವುಗಳ ಮೇಲೆ ಬಿತ್ತು. ಹಸಿದಿದ್ದ ರಂಗನ ಮುಖ ತಾನಾಗಿ ಅರಳಿತು. ಇನ್ನು ಯಾರಾದರೂ ಬಂದು ಬಿಟ್ಟಲ್ಲಿ ಕೈಗೆ ಬಂದ ತುತ್ತು ಬಾಯಿಗಿಲ್ಲದಂತಾದೀತು. ರಂಗ ಬೇಗಬೇಗನೆ ಹಾಲು ನುಂಗಿ ಹಣ್ಣು ತಿಂದ. ಸಿಪ್ಪೆಯನ್ನೆಲ್ಲ ದೂರ ಎಸೆದು ಪಾವಲಿಯನ್ನೂ ಸೊಂಟಕ್ಕೆ ಸೇರಿಸಿದ. "ಒಪ್ಪದ್ಯಾವೆರ‍್ಯಾ" ಎಂದು ದೀರ್ಘ ಉಸಿರೆಳೆದ. ಹೊಟ್ಟೆ ತಂಪಾದಾಗ ಹೋದ ಜೀವ ಮರಳಿ ಬಂದಷ್ಟು ಆನಂದ ವಾಯಿತು.

'ಹಾಂ, ಇನ್ನು ಈ ಹೂವು ಮತ್ತು ಊದ ಕಡ್ಡಿಯನ್ನೇನು ಮಾಡುವುದು?' ಮನದಲ್ಲೆ ಕಿಸಿಕಿಸಿ ನಗತೊಡಗಿದ ರಂಗ. ಪಕ್ಕದ ದಿನ್ನೆಯ ಬಳಿ ಹೋಗಿ ಗುಂಡಗಿನ ಬೆಣಚು ಕಲ್ಲೊಂದನ್ನು ಆರಿಸಿ ತಂದ. ಮಂಟಪದ ನಡುಮಧ್ಯದಲ್ಲಿ ಅದನ್ನಿರಿಸಿ ಮೇಲೆ ಸಾಲಾಗಿ ಹೂಗಳನ್ನಿರಿಸಿದ. ಬಳಿಯಲ್ಲಿ ಊದುಕಡ್ಡಿಯನ್ನೂ ನಿಲ್ಲಿಸಿದ. 'ಹೂಂ. ಇನ್ನೇನು ತಮಾಷೆ ನಡೆಯುವುದೊ ನೋಡಿಯೇ ಬಿಡೋಣ' ಎಂದುಕೊಂಡು ಅದರ ಬಳಿಯಲ್ಲಿ ಕುಳಿತ.

ಅಷ್ಟು ಹೊತ್ತಿಗೆ ದುಗ್ಗಕ್ಕ ಮಾಡಿದ ಪ್ರಚಾರ ದಿಂದಾಗಿ ಸನ್ಯಾಸಿಯ ದರ್ಶನಕ್ಕೆಂದು ಜನ ಬರಲಾರಂಭಿಸಿದರು. ಇವನನ್ನು ನೋಡುವ ಕುತೂಹಲ ಕೆಲವರಿಗಾದರೆ ಭಕ್ತಿಭಾವದ ಆಕರ್ಷಣೆಯಿಂದ ಬಂದವರು ಇನ್ನು ಕೆಲವರು. ನಂಬಿಕೆ ಇಲ್ಲದವರು ಮಾತ್ರವಲ್ಲದೆ ಏನು ಕುಚೋದ್ಯ ನಡೆಯುವುದೋ ನೋಡಿ ಬರೋಣ ಎನ್ನುವ ಆತುರದಿಂದ ಬಂದವರೂ ಇದ್ದರು. ಒಮ್ಮಿಂದೊಮ್ಮೆ ಹರಿದು ಬರುತ್ತಿದ್ದ ಭಕ್ತರ ಪ್ರವಾಹ ಕಂಡು ರಂಗನ ಜಂಘಾಬಲವೇ ಉಡುಗಿ ಹೋಯಿತು. ಅವರೆಲ್ಲರೂ ಕೇಳ ಬಹುದಾದ ಪ್ರಶ್ನೆಯ ಕಲ್ಪನೆಯಿಂದಲೇ ಅವನು ಬೆವೆತು ಹೋದ. ಕಾಲು ಮಡಚಿ ಕುಳಿತಲ್ಲಿಂದ ಒಮ್ಮೆ ಭಕ್ತವೃಂದದತ್ತ ಕಣ್ಣಾಡಿಸಿದ. ಎಲ್ಲವೂ ತನ್ನ ಊರಿನ ಪರಿಚಿತ ಮುಖಗಳೆ ಎಂದೆನಿಸಿ ನೆಮ್ಮದಿಯ ಉಸಿರೆಳೆದ. 'ಸರಿ, ತಾನೀಗ ಪಕ್ಕಾ ಸನ್ಯಾಸಿಯಂತೆ ನಟಿಸಬೇಕು. ಪ್ರಶ್ನೆ ಏನಾದರೂ ಕೇಳಿದ್ದಲ್ಲಿ ಏನಾದರೊಂದು ಉತ್ತರಿಸಿ ಸಾಗಹಾಕಿದರಾಯ್ತು.' ಎನ್ನುವ ಧೈರ್ಯ ಮೂಡಿತು ಮನದಲ್ಲಿ. ಬಳಿಕ ಮುಗುಳು ನಗುತ್ತಾ ಎಲ್ಲರತ್ತ ನೋಡಿ ತಲೆತೂಗಿದ. 'ಕುಳಿತುಕೊಳ್ಳಿರಿ' ಎನ್ನುವಂತೆ ಕೈಯಿಂದ ಸನ್ನೆ ಮಾಡಿದ. ಇದ್ದಕ್ಕಿದಂತೆ ಮುಂದೆ ಬಂದ ದ್ಯಾಪಣ್ಣ, ದೈನ್ಯದಿಂದ ಕೈ ಕಟ್ಟಿ ನಿಂತು—

"ಸ್ವಾಮಿ ಚಿಟಿಕೆ ವಿಭೂತಿಯನ್ನಾದರೂ ಕೊಟ್ಟು ಮಗನ ಕಾಯಿಲೆ ವಾಸಿ ಮಾಡಿ ಸ್ವಾಮಿ" ಎಂದು ಕಾಲಿಗೆ ಬಿದ್ದು ಅಂಗಲಾಚಿದ. ರಂಗನಿಗೆ ನಗು ಬಂತು. ಕುಡಿತದಲ್ಲಿ ತಂದೆ ಯನ್ನೂ ಮೀರಿಸುವಂತಿದ್ದ ಇವನ ಮಗ ನಿಗೆ ಇಲ್ಲದ ಚಟವಿರಲಿಲ್ಲ. ಆದ್ದರಿಂದ ಈ ಅಪ್ಪ ಮಗ ಇಬ್ಬರನ್ನೂ ತಿಪ್ಪೆಗೆ ತುಪ್ಪದ ಲೆಕ್ಕಕ್ಕಿಟ್ಟಿ ದ್ದರು ಊರವರು. ಈಗ ನನ್ನಲ್ಲಿಲ್ಲದ ವಿಭೂತಿ ಯನ್ನು ಎಲ್ಲಿಂದ ತಂದು ಕೊಡಲಿ? ಇದ್ದರೂ ನಾನು ಕೊಟ್ಟ ಮಾತ್ರಕ್ಕೆ ಕಾಯಿಲೆ ವಾಸಿ ಯಾಗುವುದುಂಟೆ? ಈ ಕುತ್ತಿನಿಂದ ಪಾರಾಗ ಬೇಕಾದರೆ ಇವನನ್ನು ಓಡಿಸುವುದೇ ಉತ್ತಮ ದಾರಿ. ಹೀಗಂದುಕೊಂಡ ರಂಗನ ಮುಖ ಗಂಭೀರವಾಯಿತು. ಅವನು ದೊಡ್ಡದಾಗಿ ಕಣ್ಣು ತೆರೆದು ಮೂಗಿನ ಹೊಳ್ಳೆಗಳನ್ನು ಅರಳಿ ಸುತ್ತಾ, "ತಥ್—ಊರವರಿಗೆಲ್ಲ ಬುದ್ಧಿ ಹೇಳುವ ಗುರಿಕಾರನಲ್ಲವೆ ನೀನು? ತಾನೂ ಕೆಟ್ಟು ಮಗ ನನ್ನೂ ಕೆಡಿಸಿದ ಮಹಾನುಭಾವ! ತಲೆಗೆ ಹೊಯ್ದ ನೀರು ಕಾಲಿಗೆ ಇಳಿಯಲೇಬೇಕು ತಾನೆ? ಸರಿ, ಇನ್ನೇನಿದೆ ನಿನಗಿಲ್ಲಿ ಕೆಲಸ? ನಾನು ಪೂಜಿಸುತ್ತಿರುವ ಈ ದೇವಿಯ ಮುಂದೆ ಹೊಲಸು ಸುದ್ದಿ ಎತ್ತಿದ ತಪ್ಪಿಗೆ ಎರಡು ರೂಪಾಯಿ ತಪ್ಪುಕಾಣಿಕೆ ಹಾಕಿ ಹೊರಡಿಲ್ಲಿಂದ." ರಂಗ ಅಬ್ಬರಿಸಿದಾಗ ದ್ಯಾಪ ನೆರೆದವರ ನಡುವೆ ನಾಚಿದ. ಮರುಮಾತಿಲ್ಲದೆ ದಂಡ ತೆತ್ತು ತಲೆತಗ್ಗಿಸಿ ಹೊರ ನಡೆದನು.

ಸನ್ಯಾಸಿಯ ಮಹಿಮೆ ಕಂಡು ದಂಗಾದರು ಜನ. ಒಬ್ಬರನೊಬ್ಬರು ನೋಡುತ್ತಾ ತಮ್ಮ

ತಮ್ಮಲ್ಲೇ ತಲೆದೂಗಿದರು. ರಂಗ ಆಡಿದ ನಾಟಕ ಯಶಸ್ವಿಯಾಯಿತು. ದ್ಯಾಪನಿಗಾದ ಅವಮಾನ ಕಂಡು ಅಂಥದ್ದೇ ಪ್ರಶ್ನೆ ಕೇಳಲು ಬಂದಿದ್ದವರೆಲ್ಲ ಉಗುಳು ನುಂಗಿ ತೆಪ್ಪಗೆ ಕುಳಿತರು. ಅದುವರೆಗೆ ಮುಖ ಬಾಡಿಸಿ ಮುದುಡಿ ಕುಳಿತ್ತಿದ್ದ ಪುಟ್ಟಕ್ಕ ಗುರಿಕಾರ ಅತ್ತ ಹೋಗುತ್ತಲೆ ಇತ್ತ ಎದ್ದು ಬಂದಳು. ಮಗಳ ಮದುವೆಯ ಚಿಂತೆ ಅವಳನ್ನು ಕಾಡುತ್ತಿತ್ತು. ಹಿಂದೆ ಇವಳ ಮಗಳು ಸುಂದರಿಯನ್ನು ವರಿಸಬೇಕೆಂದು ಆಸೆಪಟ್ಟಿದ್ದ ರಂಗ. ಆದರೆ ಇದಕ್ಕೆ ಅಡ್ಡಿ ಮಾಡಿದವಳು ಇದೇ ಪುಟ್ಟಕ್ಕನೆಂದು ತಿಳಿದಾಗ ಅವಳ ತಲೆ ಕಂಡರಾಗುತ್ತಿದ್ದಿಲ್ಲ ಅವನಿಗೆ. ಅಂದಿನ ಸೇಡು ತೀರಿಸಲು ಇಂದು ತಾನಾಗಿ ಸಂದರ್ಭ ಒದಗಿದೆ ಎಂದೆನಿಸಿತು.

"ಏನಮ್ಮಾ ಕಳೆಯೇ ಇಲ್ಲದಂತಾಗಿದೆಯಲ್ಲಾ ನಿನ್ನ ಮುಖದಲ್ಲಿ?"

"ಸ್ವಾಮೀ..ನನ್ಮಗಳಿಗೆ."

"ಸರಿ ಸರಿ, ನಿನ್ನ ಬಾಗಿದ ಬೆನ್ನು ನರೆತ ಕೂದಲೇ ಹೇಳುತ್ತಿದೆಯಲ್ಲಾ ಇಷ್ಟರಲ್ಲಿ ನೀನು ಅಜ್ಜಿಯಾಗಿರಬೇಕೆಂದು? ಆದರೆ ಮಾಡಿದ ಕರ್ಮಫಲದಿಂದಾಗಿ ವಯಸ್ಸಿಗೆ ಬಂದಿರುವ ಮಗಳಿಂಲೇ ಬಾಣಂತನ ಮಾಡಿಸಿಕೊಳ್ಳುವಂತಾಗಿದೆ ಹೌದು ತಾನೆ?" ರಂಗ ಒಂದು ಕಣ್ಣು ಮುಚ್ಚಿ ಮತ್ತೊಂದನ್ನು ಅರೆತೆರೆದು ಪುಟ್ಟಕ್ಕನನ್ನು ದಿಟ್ಟಿಸಿದ. ಪಾಪ ಅವಳು ನಾಚಿಕೆ ಸಂಕೋಚದಿಂದ ಒಂದೇ ಹಿಡಿಯಾದಳು. ಉಬ್ಬಿದ ತನ್ನ ಹೊಟ್ಟೆಯನ್ನು ಸೆರಗಿನಿಂದ ಮರೆಮಾಡುತ್ತಾ "ಏನು ಮಾಡುವುದು ಸ್ವಾಮಿ ದೇವರು ಕೊಟ್ಟ ಫಲವನ್ನು ಬೇಡ ಎನ್ನಲಾದೀತೆ? ನನ್ನ ಚಿಂತೆ ಇದಲ್ಲ ಸ್ವಾಮಿ ಬೆಳೆದು ನಿಂತಿರುವ ಮಗಳ ತಲೆ ಮೇಲೆರಡು ಅಕ್ಕಿ ಹಾಕದೆ ತಿಂದ ಅನ್ನ ಮೈಗೆ ಹಿಡಿಯದಾಗಿದೆ." ಒಂದು ಕ್ಷಣ ಸುಮ್ಮನಿದ್ದ ರಂಗ ಯೋಚಿಸಿದಂತೆ ಮಾಡಿದ. ಬಲಕೈಯ್ಯ ನಾಲ್ಕು ಬೆರಳುಗಳನ್ನು ಮಡಚಿ ಮುಷ್ಠಿ ಮಾಡಿ ತೋರು ಬೆರಳಿನಿಂದ ತಲೆ ತಟ್ಟುತ್ತಾ

"ಹಿಂದೊಮ್ಮೆ ನಿನ್ಮಗಳಿಗೆ ಊರೊಳಗಿನದೇ ನೆಂಟು ಬಂದದ್ದನ್ನು ತಪ್ಪಿಸಿದ್ದೆ ಏನು?"

"ಆಂ..? ಹೂಂ,ಹೂಂ ಬಂದಿತ್ತು ಸ್ವಾಮಿ ಬಂದಿತ್ತು. ಆದ್ರೆ ಅದೆಂತಾ ಮನೆಹಾಳು ನೆಂಟು ಸ್ವಾಮಿ. ಹುಡುಗನಂತೂ ಬರೀ ಬುರ್ನಾಸ್ ಬುದ್ಧಿಯವ. ಹೋಗಲಿ ಅವನಿಗೊಂದು ಚಿಲ್ಲರೆ ಕೆಲಸವಾದ್ರೂ ಇತ್ತೆ? ಅದೂ ಇಲ್ಲ. ಕೊನೆಗೆ ಹೆಣ್ಣು ಕೊಟ್ಟ ತಪ್ಪಿಗೆ ನಾವೇ ಇಬ್ಬರಿಗೂ ಅನ್ನ ಕೊಟ್ಟು ಸಾಕ ಬೇಕಿತ್ತೇನೊ?" ರಂಗನಿಗೆ ಒಮ್ಮೆಲೆ ಮೈತುಂಬಾ ಚೇಳು ಹರಿದು ಕುಟುಕಿದಂತಾಯಿತು. ಬಾಯಿಂದ ಮಾತು ಹೊರಡದಾದರೂ ಸಾವರಿಸಿಕೊಳ್ಳುತ್ತಾ–

"ನೋಡಿದ್ಯಾ ಅಲ್ಲೇ ನೀನು ತಪ್ಪಿರೋದು. ಉಪ್ಪು ತಿಂದವ ನೀರು ಕುಡಿಲೇಬೇಕು ತಾನೆ? ನೀನೇನೋ ದೊಡ್ಡ ಮುಂಡಾಸಿನ ಸರದಾರನೇ ಅಳಿಯನಾಗಬೇಕೆಂದು ದುರಾಸೆ ಪಟ್ಟೆ. ಆದರೆ ನೀನೆಣಿಸಿದಷ್ಟು ಅಯೋಗ್ಯನಲ್ಲ ಆ ವರ. ಅವನೂ ಈಗ ನಾಕು ಕಾಸು ಸಂಪಾದಿಸು

### ಮುಂಜಾವಿನಲಿ...



ಜಗವೆಲ್ಲ ಮಂಜಿನೊದಿಕೆಯೊಳಗೆ
ಮಲಗಿದ್ದ ಕಾಲದಲಿ,
ನನ್ನ ಮುಂಜಾವಿನ ಕನಸುಗಳೆಲ್ಲ
ಬಂಧನದ ಹೊದಿಕೆಯ ಕಿತ್ತೊಗೆದು,
ಮಂಜಿನೊಳಗರಳಿದ್ದ ಮಲ್ಲಿಗೆಯ
ದುಂಬಿಯಾಗಿ
ಝೇಂಕರಿಸುತ್ತಿದ್ದವು...!

● ಕವಿ ಮಿತ್ರ

ತ್ತಿರುವನು ಗೊತ್ತಾ?"

"ಅಯ್ಯೋ ಸ್ವಾಮಿ..ನಾನು ಕೆಟ್ಟೆ. ತಪ್ಪು ಕ್ಷಮಿಸಿ ಉದ್ಧರಿಸಿ ಸ್ವಾಮಿ" ಬಡಪಾಯಿ ಪುಟ್ಟಕ್ಕ ಕೆನ್ನೆಕೆನ್ನೆ ಹೊಡಕೊಂಡಳು. ರಂಗನಿಗೆ ತಾನಾಡಿದ್ದು ಅತಿ ಆಯಿತೇನೋ ಎಂದೆನಿಸಿ ಮರುಕವಾಯಿತು. ಆಕೆಯನ್ನು ಸಮಾಧಾನ ಪಡಿಸುವುದಕ್ಕಾಗಿ

"ಸರಿ ಬಿಡು ತಕ್ಕೊಳ್ಳು ಪ್ರಸಾದ. ದೇವಿಯ ದಯದಿಂದ ವರ್ಷಕಳೆಯುವುದರೊಳಗೆ ವಾಲಗ ಊದಿಸಿದರಾಯ್ತಲ್ಲಾ?" ಎಂದು ಬೆಣಚು ಕಲ್ಲಿನ ಮೇಲಿದ್ದ ಹೂವನ್ನು ತೆಗೆದು, ಹರಸಿ ಆಕೆಯ ಕೈಯಲ್ಲಿರಿಸಿದ. ಇದೆಲ್ಲವನ್ನೂ ನೋಡುತ್ತಿದ್ದ ಆನಂದನಿಗೆ ಇವನು ಸಿಐಡಿ ಅಲ್ಲವೆಂದು ಖಾತ್ರಿಯಾಯಿತು. ಆದರೆ ಇವನು ಯಾರು? ಏನೆಂದು ಹೇಗೆ ಪತ್ತೆ ಹಚ್ಚುವುದು? ಏನಾದ ರಾಗಲಿ ಪರೀಕ್ಷಿಸದೆ ಬಿಡಬಾರದು. ಒಂದು ವೇಳೆ ಡೋಂಗಿ ಸನ್ಯಾಸಿಯಾಗಿದ್ದಲ್ಲಿ ಊರವರೂ ನನ್ನ ಬುದ್ಧಿವಂತಿಕೆಯನ್ನು ಮೆಚ್ಚದಿರುವರೆ? ಆನಂದ ಜಂಬದಿಂದ ಒಳಗಿಂದೊಳಗೆ ಬೀಗಿದ. ಅಷ್ಟರಲ್ಲಿ ಮೂಗಿನ ತನಕ ಕುಡಿದು ಬಂದ ನರಸಿಂಗರಾಯರು ನಿಂತಲ್ಲಿ ನಿಲ್ಲಲಾರದೆ ಬಾಯಿಗೆ ಬಂದಂತೆ ಸನ್ಯಾಸಿಯನ್ನು ಬಯ್ಯ ತೊಡಗಿದರು. ಯಾರೆಷ್ಟು ಹೇಳಿದರೂ ಕೇಳದೆ "ನನ್ಮಗನದೇನು ಸಿಪಾಯ್‌ಗಿರಿಯಾ? ಇದ್ದರೆ ಬರಲಿ ನೋಡುವಾ, ಒಂದು ಕೈ ನೋಡಿಯೇ ಬಿಡ್ತೇನೆ. ಇವತ್ತು ನಿಂತ ಕಾಲಲ್ಲಿ ಇವನನ್ನು ಊರುಬಿಟ್ಟು ಓಡಿಸದಿದ್ದಲ್ಲಿ ನಾನು ನನ್ನಪ್ಪನ ಮಗನೇ ಅಲ್ಲ" ಹೇಳುತ್ತಾ ಮಂಟಪದ ಕಂಬದ ಬಳಿ ಬಂದು ನಿಂತರು. ರಂಗನ ಎದೆ ಡವಗುಟ್ಟಿತು.

'ದೇವ್ರೇ ಈ ಪುಣ್ಯಾತ್ಮ ಎಷ್ಟು ಬೇಕಾದ್ರೂ ಬಾಯಿಗೆ ಬಂದಂತೆ ಬೈದರೂ ಅಡ್ಡಿ ಇಲ್ಲ. ಆದ್ರೆ ನನ್ನ ಗಡ್ಡಕ್ಕೊಂದು ಕೈ ಹಾಕದಿದ್ದರೆ ಸಾಕು.' ಅವನ ಮೊರೆ ದೇವರಿಗೂ ಕೇಳಿಸಿತೇನೊ. ಇನ್ನೂ ಒದರುತ್ತಿದ್ದ ರಾಯರು ಸುರಿಯುತ್ತಿದ್ದ ಜೊಲ್ಲು, ಸಿಂಬಳವನ್ನು ಉಟ್ಟಿದ್ದ ಪಂಚೆಯಲ್ಲಿ ಒರಸು ತ್ತಿದ್ದರು. ಆಗಲೇ ಅವರಿಗೊಂದು ಸೀನು ಬರಬೇಕೆ? ಸೀನಿದ ರಭಸಕ್ಕೆ ಮೂಗು ಹೋಗಿ ಕಲ್ಲು ಕಂಬಕ್ಕೆ ಜಪ್ಪಿತು. ಆಯಿತು. ಅಷ್ಟಕ್ಕೆ ಅವರ ಪರಾಕ್ರಮವು ತಣ್ಣಗಾಯಿತು. ಈಗ ನನ್ನ




ಸರದಿ ಎನ್ನುವಂತೆ ಆನಂದ ಮುಂದೆ ಬಂದು ಕುಕ್ಕರಗಾಲಿನಲ್ಲಿ ಕುಳಿತ. "ಸ್ವಾಮಿ ನನ್ನ ದೊಂದು ಸೊತ್ತು ಕಳವಾಗಿದೆ ಅದು ಮರಳಿ ದೊರೆಯುವುದೋ ಇಲ್ಲವೋ ಎಂದು ನನ್ನ ಕೈನೋಡಿ ಹೇಳಿ ಸ್ವಾಮಿ" ಎನ್ನುತ್ತ ಅಕ್ಕ ಪಕ್ಕದಲ್ಲಿದ್ದವರನ್ನು ನೋಡಿ ಕುಹಕ ನಗೆ ನಕ್ಕ. ರಂಗ ಅವನನ್ನು ಕೆಕ್ಕರಿಸಿ ನೋಡುತ್ತಾ, "ಸೊತ್ತೇ ಇಲ್ಲದ ಮೇಲೆ ಕಳಕೊಳ್ಳುವುದಕ್ಕೇನಿದೆಯಯ್ಯಾ? ಮಾತೂ ಮನಸ್ಸೂ ಸ್ವಚ್ಛವಿಲ್ಲದ ಈ ನಿನ್ನ ನಾರದ ಬುದ್ಧಿಯನ್ನು ಬಿಟ್ಟು ಇನ್ನಾದರೂ ನೇರ ದಾರಿಯಲ್ಲಿ ನಡೆಯುವುದನ್ನು ಕಲಿತುಕೊಳ್ಳಯ್ಯಾ". "ಸಾಧುವಿನ ಬಾಯಿಂದ ತನ್ನ ಅಡ್ಡಹೆಸರು ಕೇಳಿದೊಡನೆ ಕೆನ್ನೆಗೆ ಹೊಡೆದಂತಾಯಿತು ಆನಂದನಿಗೆ. ಆದರೂ ತನ್ನ ಮಾತನ್ನು ಸಮ ರ್ಥಿಸಿಕೊಳ್ಳುತ್ತಾ—

"ನಿಜವನ್ನೇ ಹೇಳುತ್ತಿದ್ದೇನೆ ಸ್ವಾಮಿ ನನ್ನ ದೊಂದು ಕರೆಯುವ ಎಮ್ಮೆ ಕಾಣೆಯಾಗಿದೆ ಅದ್ಕೆ—"

"ನೀನು ಕಲಿಯುಗದ ಕಲಹಪ್ರಿಯನಲ್ಲವೆ? ಸೆಗಣಿ ಬಾಚುವುದೇ ಹೊರತು ಎಮ್ಮೆ ಸಾಕುವ ಯೋಗ್ಯತೆ ನಿನ್ನ ಹಣೆಯಲ್ಲಿ ಬರೆದಿಲ್ಲ. ನನ್ನ ಪಾಂಡಿತ್ಯವನ್ನು ಪರೀಕ್ಷಿಸುವ ಪರಿ ಇದಲ್ಲ. ನೀನು ಅವಮಾನ ಮಾಡಿದ್ದು ನನ್ನನ್ನಲ್ಲ ಇಲ್ಲಿ ಕುಳಿತಿರುವ ಈ ನನ್ನ ತಾಯಿಯನ್ನು. ಹೂಂ, ಇಪ್ಪತ್ತೈದು ರೂಪಾಯಿ ದಂಡ ಹಾಕಿ ಹೊರಡಿ

ಲ್ಲಿಂದ" ಆನಂದ ಬೆವತು ಹೋದ. ಸುಳ್ಳು ಹೇಳಿದ್ದಕ್ಕಾಗಿ ಅಲ್ಲಿದ್ದವರೆಲ್ಲ ಛಿಮಾರಿ ಹಾಕಿದರು ಅವನಿಗೆ.

"ಅಯ್ಯಪ್ಪ ದ್ಯಾವ್ರೇ, ಒಂದು ಸಿಂಗಲ್ ಚಾಯ ಕುಡಿಯಲಿಕ್ಕೂ ಕಿಸೆಯಲ್ಲಿ ಮುಕ್ಕಾಲಿಲ್ಲದ ನಾನು ಇಷ್ಟು ರೂಪಾಯಿಯನ್ನು ಎಲ್ಲಿಂದ ತರಲಿ ಸ್ವಾಮಿ?" "ಆಡಿದ ಮಾತು ಹಿಂತೆಗೆಯುವುವಂತಿಲ್ಲ. ಸಂಜೆಯೊಳಗೆ ದಂಡ ತೆರದಿದ್ದಲ್ಲಿ ಈ ತಾಯಿಯೇ ನಿನ್ನನ್ನು ನೋಡಿಕೊಳ್ಳುತ್ತಾಳೆ ನೆನಪಿರಲಿ." ಮುಖಭಂಗವಾದ ಆನಂದ, ಯಾರಿಂದಾದರೂ ಸಾಲ ಕೇಳಿ ಹಣ ತರುತ್ತೇನೆಂದು ಹೇಳಿ ಓಡಿದನು.

ಸನ್ಯಾಸಿಯ ಕಾರ್ನಿಕ ಊರಿಗೆಲ್ಲಾ ಹಬ್ಬಿತು. ಅಂದಿನಿಂದ ಯಾರ ಮನೆಯಲ್ಲಿ ಏನು ವಿಶೇಷ ಕಾರ್ಯ ನಡೆದರೂ ರಂಗನಿಗೆ ನೈವೇದ್ಯದ ಪಾಲು ಬರತೊಡಗಿತು. ಕೆಲವೊಮ್ಮೆ ಬರಿ ಹೊಟ್ಟೆಯಲ್ಲಿ ಮಲಗುವ ಸಂದರ್ಭವೂ ಬರುತ್ತಿತ್ತು. ಕೈಯಲ್ಲಿ ನಾಲ್ಕು ಕಾಸು ಕುಣಿಯಲಾರಂಭಿಸಿದಾಗ ರಂಗ ತನ್ನ ನಿರ್ಧಾರವನ್ನು ಬದಲಿಸಿದ. ಕಾಸೆಂದರೆ ಕಂಬವೂ ಕೈ ಒಡ್ಡುವ ಈ ಕಾಲದಲ್ಲಿ ತಾನಾಗಿ ಒಲಿದು ಬಂದಿರುವ ಭಾಗ್ಯವನ್ನು ತ್ಯಜಿಸುವುದು ಹುಚ್ಚುತನವಲ್ಲವೆ? ಹೇಗೂ ಕಾವಿ ತೊಟ್ಟಾಗಿದೆ, ಇನ್ನಿದನ್ನು ಕಳಚುವುದರೊಳಗೆ ಪುಟ್ಟಗಂಟು ಕಟ್ಟಿಕೊಂಡು ಹೋದರಾಯ್ತು ಮನೆಗೆ. ಅಮ್ಮನಿಗೂ ಆಗ ತನ್ನ ಮಗ ಸೋಮಾರಿಯಲ್ಲ ಎನ್ನುವ ಸಮಾಧಾನವಾಗುತ್ತದೆ. ಯೋಚಿಸಿದಂತೆ ಅವನ ಹೃದಯ ಪುಲಕಗೊಂಡಿತು. ಅಂದಿನಿಂದ ಗೆಳೆಯರು ಒಬ್ಬೊಂಟಿಗರಾಗಿ ಭೇಟಿಯಾದರೂ ಅವರ ಪರಿಚಯವಿಲ್ಲದವರಂತೆ ವರ್ತಿಸ ತೊಡಗಿದ ರಂಗ.

ಅಟ್ಟೆಕಾರ್ ಮಾನಪ್ಪ, ಪಾದೆಕಲ್ಲಿನ ಪದ್ಮಪ್ಪ, ಕೊಗ್ಗನಾಯ್ಕ, ಉಪ್ಪಿನಕೋಟೆ ಅಣ್ಣಪ್ಪ ಎಲ್ಲರೂ ಬಂದು ಅವರವರ ಕಷ್ಟ ಸುಖ ಹೇಳಿಕೊಂಡು ತಕ್ಕ ಪರಿಹಾರವನ್ನು ಪಡೆದು ಹೊರಟು ಹೋದರು. ಆದರೆ ಶಿವಣ್ಣನಿಗೆ ಮಾತ್ರ ಇನ್ನೂ ಅವನ ಮೇಲೆ ಅನುಮಾನ. ಜತೆಗೆ ನಮ್ಮ ಆಟಕ್ಕೆ ಅಡ್ಡಿಮಾಡಲೆಂದೇ ಬಂದವನು ಎನ್ನುವ ಅಸಮಾಧಾನ. ಆಗಾಗ ಮರೆಯಾಗಿ ನಿಂತು ಈ ಬೈರಾಗಿಯ ಚಲನವಲನಗಳನ್ನು ಗಮನಿಸುತ್ತಿದ್ದನು. ಅವನ ನಡತೆಯಲ್ಲಿ ಕಪಟತನ ಕಂಡು ಬರದಿದ್ದರೂ ಇಲ್ಲಿಂದೊಮ್ಮೆ ಎತ್ತಂಗಡಿ ಮಾಡಿಬಿಡಬೇಕೆನ್ನುವ ಛಲ ಅವನದು. ಯಾವುದಕ್ಕೂ ಸಹಾಯಕ್ಕಿರಲಿ ಎಂದು ನೇರ ಹೋಗಿ ಸಾಹುಕಾರ ಸೋಮಪ್ಪನನ್ನು ಭೇಟಿಯಾದ. ಈ ಸೋಂಪನಾದರೋ ಬಲು ದುಡುಕು ಸ್ವಭಾವದವನು. ಶಿವಣ್ಣನ ಮಾತು ಕೇಳಿದ್ದೇ ತಡ ಕರುವಿನ ಕಿವಿಗೆ ಗಾಳಿ ಹೊಕ್ಕಂತಾಯಿತು ಅವನ ಸ್ಥಿತಿ. ಹಿಂದು ಮುಂದು ಒಂದೂ ಯೋಚಿಸದೆ ಬೆಂಗಾವಲಿನ ಭಟರೊಂದಿಗೆ ಮುರುಕು ಮಂಟಪದತ್ತ ಹೆಜ್ಜೆ ಹಾಕಿದನು.

ಬಲಕೈಯಲ್ಲಿ ಬೆಳ್ಳಿ ಕಟ್ಟು ಹಾಕಿಸಿರುವ ವಾಕಿಂಗ್‌ಸ್ಟಿಕ್ ಹಿಡಿದು ಎಡಕೈಯಲ್ಲಿ ಧೋತಿ ಚುಂಗನ್ನು ಮೇಲೆತ್ತಿಕೊಂಡು ದೊಡ್ಡ ದೊಡ್ಡ ಹೆಜ್ಜೆ ಹಾಕುತ್ತಿದ್ದನು. ಹಿಂದಿನಲ್ಲಿದ್ದ ಅನುಚರರೂ ಅವನ ಸಮಕ್ಕೆ ನಡೆಯುತ್ತಿದ್ದರು. ಅವರಲ್ಲೊಬ್ಬ ಬಿಡಿಸಿದ ಕೊಡೆಯೊಂದನ್ನು ವಾಡಿಕೆಯಂತೆ ಸಾಹುಕಾರನ ನೆತ್ತಿ ಮೇಲೆ ಹಿಡಿದಿದ್ದನು. ಇದಕ್ಕೆ ಮಳೆ ಬಿಸಿಲೇ ಬೇಕೆಂದಿಲ್ಲ. ತಂಪಿನ ಹೊತ್ತಲ್ಲೂ ಇದು ಸಾಹುಕಾರನ ಸಂಗಾತಿಯಾಗಿರುತ್ತಿತ್ತು.

ಮರಗಿಡಗಳ ನಡುವಿನಿಂದ ಅರಳಿದ ಬಿಳಿಕೊಡೆಯೊಂದು ಇತ್ತ ಬರುತ್ತಿದ್ದುದನ್ನು ದೂರದಿಂದಲೇ ಗಮನಿಸಿದ ರಂಗ. ಒಡನೆ ಅವನ ಬುದ್ಧಿ ಈ ಕೊಡೆಯ ಒಡೆಯ ಯಾರೆಂಬುದನ್ನು ಗುರುತಿಸಿತು. ಒಂದಲ್ಲ ಒಂದು ದಿನ ಇದು ಇಲ್ಲಿಗೆ ಬಂದೇ ಬರುವುದೆನ್ನುವ ಭೀತಿ ಅವನಿಗಿದ್ದಿತು.

'ಛೆ, ನನ್ನಲ್ಲಿ ಒಂದಿಷ್ಟು ಕಾಸು ಸೇರುವ ಮೊದಲೇ ಈ ಅಯೋಗ್ಯ ಧಾಳಿಯಿಡಬೇಕೆ? ಇನ್ನು ಏನೇನು ಕಾದಿದೆಯೊ ಇವನಿಂದ? ವರ್ಷದ ಹಿಂದೆ ಊರಿಗೆ ಬಂದಿದ್ದ ಠಕ್ಕು ಸನ್ಯಾಸಿಯನ್ನು ಹಿಡಿದು, ಅವನು ಅಂಟಿಸಿಕೊಂಡಿದ್ದ ಗಡ್ಡವನ್ನು ಕಿತ್ತೊಗೆದು ಬರಿಮೈಗೆ ಚಪ್ಪಲಿಯ ಮಾಲೆ ಹಾಕಿಸಿ, ಊರಿಡೀ ಮೆರವಣಿಗೆ ಬರಿಸಿದ್ದವನಲ್ಲವೆ ಈ ಸೋಂಪ? ಅಂದು ನಾನೂ ಎಷ್ಟೊಂದು ಸಂಭ್ರಮ ಪಟ್ಟಿದ್ದೆ? ಇತರರೊಂದಿಗೆ ಸೇರಿ ಮೆರವಣಿಗೆಯಲ್ಲಿ ಅದೆಷ್ಟು ಕುಣಿದು ಕುಪ್ಪಳಿಸಿದ್ದೆ! ಆ ಕಳ್ಳ ಸನ್ಯಾಸಿಯನ್ನು ಅಣಕಿಸಿದ್ದು ಛೇಡಿಸಿದ್ದು ಏನು

ಸ್ವಲ್ಪವೆ? ಇಂದು ನನಗೂ ಅದೇ ಗತಿಯಾದರೆ? ಛೆ, ಛೆ, ತಪ್ಪಿಸಿಕೊಳ್ಳೋಣವೆಂದರೆ ಬೇರೆ ದಾರಿಯೂ ಇಲ್ಲವಲ್ಲಾ? ಅಯ್ಯೋ ನನ್ನ ಕತೆ ಇಲ್ಲಿಗೆ ಮುಗಿಯುವಂತಾಯಿತೆ?' ರಂಗ ಮನದಲ್ಲೆ ಹಲುಬಿದ. ಅವನ ಎದೆ ನಗಾರಿ ಯಂತೆ ಬಾರಿಸುತ್ತಿತ್ತು.

"ಏಲ್ರೋ ಮೇಲೇಲ್ರೋ ಸಾವ್ಕಾರು ಬಂದ್ರು ಸಾವ್ಕಾರ್ರು ಬಂದ್ರು" ಬಂಟನೊಬ್ಬ ಮುಂದೆ ಬಂದು ಅಲ್ಲಿದ್ದವರನ್ನೆಲ್ಲ ಚದುರಿಸಿದ.

ಮಂಟಪಕ್ಕೆ ಇನ್ನೇನು ಎರಡೇ ಹೆಜ್ಜೆ ಇದೆ ಎನ್ನುವಷ್ಟರಲ್ಲಿ ಸೊಂಟದ ಮೇಲೊಂದು ಕೈಯನ್ನಿರಿಸಿ, ಖಡ್ಗ ಹಿಡಿದ ಯೋಧನ ಭಂಗಿ ಯಲ್ಲಿ ನಿಂತ ಸೋಮಪ್ಪ. ಹಿಂದಿನಲ್ಲಿದ್ದ ಛತ್ರಿಯವನೂ ಹಿಂಬಾಲಕರೊಂದಿಗೆ ಸುತ್ತು ವರಿದು ಕಾವಲಾಗಿ ಬೇಲಿಯಂತೆ ನಿಂತರು. ಸಾಹುಕಾರ ಠೀವಿಯಿಂದ ಎದೆ ಉಬ್ಬಿಸಿ, ಎಲ್ಲರತ್ತ ದೃಷ್ಟಿ ಹರಿಸಿದ. ಬೆದರಿದ ಜನ ಸಮೂಹ ತನ್ನತ್ತ ನೋಡುತ್ತಿದ್ದುದು ಅವನ ಪೌರುಷವನ್ನು ಇಮ್ಮಡಿಸಿತು. "ಏಯ್ ಯಾವೂರಿ ನವನಯ್ಯಾ ನೀನು? ಇಲ್ಯಾಕೆ ಬಂದೆ?" ಕಣ್ಣು ಕೆಕ್ಕರಿಸಿದನು. ಅವನ ಉಗ್ರರೂಪ ಕಂಡು ಚಳಿ ಬಂದವನಂತೆ ನಡುಗಿದ ರಂಗ ಉತ್ತರಕ್ಕಾಗಿ ತಡವರಿಸಿದ.

"ಲೋ... ನಾ ಹೇಳಿದ್ದು ಕೇಳ್ಳಿಲ್ಲವೇನೊ?" ರಂಗ ಉಗುಳು ನುಂಗಿ ಮುಗುಳು ನಕ್ಕ.

"ಹತ್ತೂರು ಸುತ್ತುವ ನನ್ನಂತವನಿಗೆ ಊರೆಲ್ಲಿದೆ ಸ್ವಾಮಿ? ಸದ್ಯಕ್ಕಂತೂ ಇದ್ದೂರೇ ನಂದು." ನಿಂತಲ್ಲಿಂದ ಕದಲಲಾರದೆ ಹೇಳಿದ.

"ಸಾಕು ಮಾಡೋ ಈ ನಿನ್ನ ಸುತ್ತು ಬಳಸಿನ ಮಾತನ್ನ. ಊರವರ ಕಣ್ಣಿಗೆ ಮಂಕು ಬೂದಿ ಎರಚಿ ಚೆನ್ನಾಗಿ ಬೋಳಿಸೋಣವೆಂದು ಕೊಂಡೆಯಾ? ಹಾಗೆಲ್ಲಾ ನಿನ್ನ ಗಿಲೀಟು ಮಾತಿಗೆ ಮರುಳಾಗಲು ನಾವೇನು ಕುರಿಗಳಲ್ಲ. ಈ ಸಾವ್ಕಾರ್ ಸೋಂಪನ ಜೀವ ಒಂದು ಬಗೆ ಇದ್ದರೆ ನಿನಗೆ ದೊಗ್ಗು ಸಲಾಂ ಹಾಕುವುದು ಬಿಡು ನಿನ್ನ ಹುಟ್ಟಡಗಿಸಿ ಬಿಡದಿದ್ದಲ್ಲಿ ನೋಡು..." ಅಂಗಿತೋಳು ಮೇಲೇರಿಸುತ್ತಾ ಅವನು ಮುಂದಡಿ ಯಿಟ್ಟಾಗ ಹಿಂಬಾಲಕರ ಬೇಲಿಯೂ ಮುಂದೆ ಸರಿಯಿತು. ರಂಗನಿಗೆ ಗುಂಡಿಗೆ ನಿಂತೇ ಹೋದಂತಹ ಅನುಭವ. ತುಟಿ ತೆರೆದರೂ ಮಾತು ಬಾರದೆ ಒದ್ದಾಡುತ್ತಿದ್ದ ಅವನ ಬುದ್ಧಿಗೆ ಒಂದು ಯುಕ್ತಿ ಹೊಳೆಯಿತು. ಸೋಂಪನ ಸ್ವಭಾವ ರಂಗನಿಗೆ ಚೆನ್ನಾಗಿ ಗೊತ್ತಿತ್ತು. ಅವನು "ಜಿಲೇಬಿ ಕಹಿ" ಎಂದರೂ ಇತರರು "ಹೌದಪ್ಪಾ ಯಾಕೋ ಜಿಲೇಬಿ ತುಂಬಾ ಕಹಿಯಾಗಿದೆ" ಎನ್ನಬೇಕೇ ಹೊರತು ಯಾರೂ "ಸಿಹಿ" ಎಂದು ವಾದಿಸ ಬಾರದು. ಅಂತಹ ಹೊಗಳುಭಟ್ಟರಿಗೆ ಸೋಂಪನ ನ್ಯಾಯದಲ್ಲಿ ಯಾವತ್ತೂ 'ರಿಯಾಯ್ತಿ' ಅಥವಾ 'ಮಾಫಿ' ಕಟ್ಟಿಟ್ಟದ್ದು. ಹಾಗಿರುವಾಗ ನಾನ್ಯಾಕೆ ಇವನ ಮುಖಸ್ತುತಿ ಮಾಡಬಾರದು?' ಇನ್ನೇನು ತನ್ನನ್ನು ಸಮೀಪಿಸಲಿದ್ದ ಸಾಹುಕಾರನನ್ನು ತಡೆಯುವಂತೆ ಕೈ ಮೇಲೆತ್ತಿ ಹೆಡೆಯಂತೆ ಬೀಸಿದ ರಂಗ.

"ಆಹಹ–ಹ ಜ್ವಾಲಾಮುಖಿ! ಶಾಂತನಾಗು ಶಾಂತನಾಗು ಇನ್ನೂ ಸೂತಕದ ಮೈಲಿಗೆ ಕಳೆದಿಲ್ಲ! ಆಗಲೇ ಅದೇನು ಅಭಿಮಾನ, ಅಂತಃಕರಣ ಊರವರ ಬಗ್ಗೆ? ಆಹಾ ನಿಸ್ವಾರ್ಥ ಮಾನವನೆಂದರೆ ನೀನೇ ಸರಿಯಪ್ಪಾ" ಎಂದು ಮೆಲ್ಲನೆ ಹಾಗೂ ಎಲ್ಲರಿಗೂ ಕೇಳುವಂತೆ ಹೇಳಿದ. ಹಾವು ತುಳಿದಂತಾದ ಸೋಂಪ ನಿಂತಲ್ಲೇ ಮರವಾದ. ಅವನಲ್ಲಿದ್ದ ರೋಷ, ಆವೇಶವೆಲ್ಲ ಒಮ್ಮೆಲೆ ತಣ್ಣಗಾಯಿತು. ಮಂಟಪದ ಮೆಟ್ಟಲ ಮೇಲಿದ್ದ ಹೆಜ್ಜೆಯನ್ನು ಮೆಲ್ಲನೆ ಹಿಂದಕ್ಕೆ ಸರಿಸುತ್ತಾ ಸನ್ಯಾಸಿಯನ್ನು ಮಿಕಮಿಕ ನೋಡತೊಡಗಿದನು. ರಂಗನಿಗೆ ಮಾತನಾಡಲು ಈಗ ದಾರಿ ನೇರವಾಯಿತು.

"ಏನಪ್ಪಾ? ನಿನ್ನ ಹಡೆದಾಕೆ ನಿಮ್ಮೆಲ್ಲರನ್ನು ಅಗಲಿ ದೇವರ ಪಾದ ಸೇರಿ ಇನ್ನೂ ಹತ್ತು ದಿನ ಕೂಡಾ ಕಳೆದಿಲ್ಲ ತಾನೆ? ಅಂದಮೇಲೆ ನೀನಿನ್ನೂ ಸೂತಕದ ಗಡು ದಾಟಿಲ್ಲವೆಂದರ್ಥವಲ್ಲವೆ? ಹೋಗಲಿ ಈ ಮಂಟಪದೊಳಗೆ ನಾನು ದೇವಿ ಯನ್ನು ಪ್ರತಿಷ್ಠಾಪಿಸಿರುವೆನೆಂದಾದರೂ ನಿನಗೆ ಗೊತ್ತಿಲ್ಲವೆ? ದೇವಿಗೆ ಮೈಲಿಗೆಯಾದ್ರೆ ಮತ್ತೆ ನಿನ್ನ ವಂಶಕ್ಕೂ ಶ್ರೇಯಸ್ಸಲ್ಲ ತಿಳಿದಿರಲಿ" ಸಾಹುಕಾರನ ಗತ್ತು ದರ್ಪವೆಲ್ಲ ಮೆತ್ತ ಗಾಯಿತು.

ಛೆ ಇದೆಂಥಾ ವಿಚಿತ್ರ? ಮುಖ ನೋಡಿ ದೊಡನೆ ಈತ ಭವಿಷ್ಯ ನುಡಿಯುತ್ತಿರುವನಲ್ಲಾ? ಥೂ, ಆ ಶಿವಣ್ಣನೊಬ್ಬ ಕರೆದ ಮಾತ್ರಕ್ಕೆ ನಾನೂ ರುಮ್ಮುಕಟ್ಟಿ ಹೀಗೆ ಓಡಿ ಬರಬಾರದಿತ್ತು. "ಭಲೆ

ಸಾವ್ಕಾರ್ ಸೋಂಪಣ್ಣಾ" ಎಂದು ಹೊಗಳಿಸಿ ಕೊಳ್ಳಬೇಕೆಂದಿದ್ದ ನಾನೀಗ ಮುಖ ತಗ್ಗಿಸ ಬೇಕಾಯ್ತೆ? ಸೂತಕದ ದಿನದಲ್ಲಿ ಈ ಮಹಾನು ಭಾವರನ್ನು ಧಿಕ್ಕರಿಸಿ ಮಾತನಾಡಿದ್ದೂ ನನ್ನ ದೊಡ್ಡ ಅಪರಾಧವಾಯಿತು. ಮನಸ್ಸಿನಲ್ಲೆ ಮಾತನಾಡಿದ ಸೋಂಪ.

"ಸ್ವಾಮಿ ನಿಮ್ಮನ್ನು ಅರಿಯದೆ ದುಡುಕಿದ ನನ್ನನ್ನು ಮಾಪು ಮಾಡಿ ಸ್ವಾಮಿ..." ಎಂದು ದೊಪ್ಪನೆ ಅವನ ಕಾಲಿಗೆ ಬಿದ್ದನು.

"ಅಬ್ಬ ದ್ಯಾವರ್ರ್ಯಾ ಬೀಸುವ ದೊಣ್ಣೆಯಿಂದ ಹೇಗೂ ಪಾರಾದೆನಲ್ಲಾ ಸಾಕು. ಇನ್ನು ಇವನನ್ನು ಸುಲಿಯುವ ಬಗೆ ನೋಡಬೇಕು" ರಂಗ ತನ್ನ ಗಡ್ಡ ನೀವಿಕೊಳ್ಳುತ್ತಾ ತುಟಿಯಂಚಿನಲ್ಲಿ ನಗುತ್ತಿದ್ದ.

"ನಿನ್ನನ್ನು ಕ್ಷಮಿಸುವವನು ನಾನಲ್ಲಪ್ಪ. ದೇವಿ ಸಂತುಷ್ಟಳಾಗುವಷ್ಟು ತಪ್ಪುಕಾಣಿಕೆ ಹಾಕಿ ನೀನೇ ಅವಳನ್ನು ಒಲಿಸಿಕೊಳ್ಳು" ಬಿದ್ದಲ್ಲಿಂದ ತಟ್ಟನೆ ಮೇಲೆದ್ದ ಸೋಂಪ. ಈ ಸಂಕಟದ ನಡುವೆಯೂ ತನ್ನ ಸಾಹುಗಾರಿಕೆ ತೋರಿಸಲು ಮುಂದಾದ. ಜೇಬಿನಲ್ಲಿದ್ದ ಪಕೀಟು ಹೊರ ತೆಗೆದು ಎಲ್ಲರಿಗೂ ಕಾಣುವಂತೆ ನೋಟು ಏಣಿಸಲಾರಂಭಿಸಿದ. ಹತ್ತರ ಒಂದೊಂದೇ ನೋಟನ್ನು ಆಳಿನ ಕೈಯ್ಯಲ್ಲಿರಿಸಿದ. ಇನ್ನೂರು ರೂಪಾಯಿಯಾ ದೊಡನೆ ಅವನಿಂದ ವಾಪಾಸು ಪಡೆದ ಅಷ್ಟು ದೂರದಿಂದಲೆ ದೇವಿಯ ಮುಂದಿರಿಸಿದ. ಬಳಿಕ ಉದ್ದಂಡ ಬಿದ್ದು ಕೆನ್ನೆಕೆನ್ನೆ ಹೊಡಕೊಂಡನು. ಇದೆಲ್ಲವನ್ನು ಅರಳಿದ ಕಂಗಳಿಂದ ನೋಡುತ್ತಿದ್ದ ರಂಗ. ಕುದುರಿದ ತನ್ನ ಅದೃಷ್ಟವನ್ನು ಮನದಲ್ಲೆ ಕೊಂಡಾಡಿದನು.

ಸಾಹುಕಾರ ಈಗ ಮಂಟಪದ ಸುತ್ತ ಒಂದು ಸುತ್ತು ಬಂದ. ಅದರ ಕಂಬ, ಛಾವಣಿಯನ್ನು ಪರೀಕ್ಷಿಸಿದ. ಇವೆಲ್ಲವು ಅವನ ದೃಷ್ಟಿಗೆ ದುರ್ಬಲ ವಾಗಿ ಕಂಡುಬಂದವು. ಕಾಣಿಕೆ ದುಡ್ಡು ಹಾಕಿಡಲು ಭದ್ರವಾದ ವ್ಯವಸ್ಥೆ ಇಲ್ಲದಿರುವುದೂ ಅವನ ಗಮನಕ್ಕೆ ಬಂತು.

"ಸ್ವಾಮಿ ನನ್ನದೊಂದು ಬಿನ್ನಹ! ಅದೇನೆಂದರೆ ನಿಮ್ಮಂತ ಪುಣ್ಯವಂತರು ಈ ಹಾಳು ಕೊಂಪೆ ಯಲ್ಲಿರುವುದೆಂದರೆ ಅದು ನಮ್ಮ ಊರವರಿಗೆಲ್ಲ ಅವಮಾನವಲ್ಲವೆ? ಆದ್ದರಿಂದ ನೀವು ಅಪ್ಪಣೆ ಕೊಟ್ಟಲ್ಲಿ ನಮ್ಮ ತೋಟದ ಮನೆಯಲ್ಲಿ ನಿಮ್ಮ ವಾಸಕ್ಕೆ ಏರ್ಪಾಡು ಮಾಡುತ್ತೇನೆ. ದಯವಿಟ್ಟು ಇಲ್ಲ ಅನ್ನಬೇಡಿ" ರಂಗ ಬೆಚ್ಚಿದ. ಈ ಬೆಂಕಿ



ಯೊಂದಿಗೆ ಸರಸವೆ? ಇಲ್ಲಪ್ಪ ನನ್ನಿಂದಾಗದು ಸಾಧ್ಯವಿದ್ದಷ್ಟೂ ಇವನಿಂದ ದೂರವಿರುವುದೇ ಕ್ಷೇಮ. ಮನದಲ್ಲಿ ಹೀಗಂದುಕೊಂಡರೂ

"ನಿನ್ನ ಅಂತಃಕರಣ ನನಗೊತ್ತಪ್ಪಾ ಚೆನ್ನಾಗಿ ಗೊತ್ತು. ಆದರೆ ಸರ್ವಸಂಗ ಪರಿತ್ಯಾಗಿಯಾದ ನನಗೆ ಈ ಮಂಟಪಕ್ಕಿಂತ ಬೇರೆ ವೈಭವ ಬೇಕೆ? ಅದು ಧರ್ಮವೂ ಅಲ್ಲಪ್ಪಾ. ಹಾಗೂ ನನ್ನಲ್ಲಿ ನಿನಗೆ ಅಭಿಮಾನವಿದ್ದಲ್ಲಿ ಕಾಣಿಕೆ ಡಬ್ಬಿಯೊಂದನ್ನು ತಂದೊಪ್ಪಿಸು. ಕೂಡಿದ ದುಡ್ಡಲ್ಲಿ ದೇವಿಗೊಂದು ಮಂದಿರ ಕಟ್ಟಿಸುವ ಆಲೋಚನೆ ನನ್ನದು. ಆದರೆ ಬಟ್ಟಾಬಯಲಿನಂತಿರುವ ಮಂಟಪದಲ್ಲಿ ಹಣ ಬಚ್ಚಿಡುವುದಾದರೂ ಹೇಗೆ?" ರಂಗ ನಯವಾಗಿ ಅವನ ಸಲಹೆಯನ್ನು ನಿರಾಕರಿಸಿದ. ಕೊನೆಗೂ ಸೋಂಪ ಮಂಟಪದ ದುರಸ್ತಿ ಕಾರ್ಯಕ್ಕೆ ಒಪ್ಪಿಗೆ ಪಡೆದು ತನ್ನ ಉದಾರತೆಯನ್ನು ಪ್ರದರ್ಶಿಸಿದ. 'ನೀನು ಹೇಗೆ ಬೇಕಾದರೂ ಸಾಯು ನನಗೇನು? ಅನ್ಯಾಯದಲ್ಲಿ ಮಾಡಿಟ್ಟಿದ್ದ ಗಂಟು ಸ್ವಲ್ಪ ವಾದರೂ ಕರಗಲಿ' ಎಂದುಕೊಂಡು ಸುಮ್ಮ ನಾದ. ಬಿರುಗಾಳಿಯಂತೆ ಬಂದಿದ್ದ ಸಾವುಕಾರ ಸೋಂಪ ತಂಗಾಳಿಯಂತೆ ಹೊರಟುಹೋದ.

ರಾತ್ರಿ ಕಳೆದು ಬೆಳಗಾಗುತ್ತಿದ್ದಂತೆ ಚೆನ್ನ ಯನ್ನನ ಎತ್ತಿನ ಗಾಡಿಯಲ್ಲಿ ಸಿಮೆಂಟಿನ ಗೋಣಿ ಬಂತು. ಕೈಯ್ಯಲ್ಲಿ ಟಾಪಿ ಹಿಡಿದ ಮೋಂತು ಪೊರ್ಬು ಬಂದ. ಸ್ವತಃ ಸಾಹುಕಾರನೇ ನಿಂತು ಮುತುವರ್ಜಿಯಿಂದ ಕಾರ್ಯ ನಿರ್ವಹಿಸಿದ. ಅವನ ಉತ್ಸಾಹ ಕಂಡ ರಂಗನಿಗೆ ಹಿಂದಿನ ಘಟನೆಯೊಂದು ನೆನಪಿಗೆ ಬಂತು.

ತನ್ನ ದಾಯಾದಿ ಮಾಧವನ ಮೇಲೆ ಸುಳ್ಳು ಆರೋಪ ಹೊರಿಸಿ ಅವನ ಆಸ್ತಿಯನ್ನೂ ನುಂಗಿ, ಸಂಸಾರವನ್ನೂ ಬೀದಿಪಾಲು ಮಾಡಿರುವವನಲ್ಲದೆ ಈ ಸೋಂಪ? ಊರ ಗುರಿಕಾರರೆಲ್ಲರೂ ಸೇರಿ ಪಂಚಾತಿಕೆ ನಡೆಸಿ ಅವನ ಪಾಲನ್ನು ಕೊಡಲೇ ಬೇಕೆಂದಾಗ—"ಪಾಲುಗೀಲು ಹಾಗಿರಲಿ ಹತ್ತು ರೂಪಾಯಿ ಕೊಡುವುದಕ್ಕೂ ನನ್ನಲ್ಲಿಲ್ಲ" ಎಂದು ವಾದಿಸಿದ್ದ. ನಿರ್ಗತಿಕನಂತಾದ ಮಾಧವ ಇದೇ ಮಂಟಪದಲ್ಲಿ ಸಂಸಾರದೊಂದಿಗೆ ಬಂದು ತಂಗಿದ್ದ. ಅಲ್ಲಿಗೂ ಬಿಡದ ಸೋಂಪ ಕಲ್ಲು ಕಂಬ ಕೀಳಿಸುವ ಪ್ರಯತ್ನ ನಡೆಸಿದ್ದ. ರಾತ್ರಿ ಹೊತ್ತಿಗೆ ಮಣ್ಣು ತೂರಿಸಿ ಭೂತ ಚೇಷ್ಟೆಯ ಭೀತಿ ಹುಟ್ಟಿಸಿದ್ದ. ತನ್ನವರ ಸುಃಖವನ್ನು ಮೆಟ್ಟಿ




ನಾವು ಮತ ಚಲಾಯಿಸಿದ ದಿನವೇ 'ಮೂರ್ಖರ ದಿನ' ಅಂದ್ಕೊಂಡಿದ್ದೆ.

ನಿಂತ ಕಟುಕನು ಇಂದು ನನ್ನ ಕಪಟ ಮಾತಿಗೆ ಎಷ್ಟು ಬೆಲೆ ಕೊಡುತ್ತಿರುವನಲ್ಲಾ? ಭೈರಾಗಿಗಳಿಗೆ ಹಣಕಾಸಿನ ಆವಶ್ಯಕತೆಯಾದರೂ ಏನಿದೆ? ಎನ್ನುವ ಜ್ಞಾನವೂ ಬೇಡವೆ ಈ ಮೂರ್ಖನಿಗೆ? ಅಂದು ಕೈಯ್ಯಾರೆ ಕೆಡಿಸಿದ್ದ ಮಂಟಪಕ್ಕೆ ಇಂದು ಎರಡರಷ್ಟು ವೆಚ್ಚ ಮಾಡುತ್ತಿದ್ದಾನೆ. ಮಾಡಲಿ ಮಾಡಲಿ ಹಸಿದವನನ್ನು ಉಪವಾಸಗೆಡವಿ ಉಂಡವನಿಗೆ ಮೃಷ್ಟಾನ್ನ ಬಡಿಸುವಂತಹ ಔದಾರ್ಯದವನು? ರಂಗ ಹಲ್ಲುಕಡಿದ.

ಊರೊಳಗೆ ಸನ್ಯಾಸಿ ಬಂದಂದಿನಿಂದ ರಂಗನ ಗೆಳೆಯರು ಸೋಮಾರಿತನ ತೊರೆದಿದ್ದರು. ಅವರಿಗೆ ದುಡಿಮೆಯಲ್ಲೂ ಆಸಕ್ತಿ ಉಂಟಾಗಿತ್ತು. ಸುಂದರ ಪೆಡಿಕೆ (ಪೆಟ್ಟಿಗೆ) ಮೋನಪ್ಪನ್ನನ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದ್ದ. ವಿಠಲ ಅಣ್ಣನೊಂದಿಗೆ ಬೇಸಾಯಕ್ಕೆ ನೆರವಾಗುತ್ತಿದ್ದ. ಇಬ್ಬರೂ ಆಗಾಗ ಮಂಟಪದತ್ತ ಹೋಗಿ ಸ್ವಾಮಿಯ ಪಾದಕ್ಕೆ ಅಡ್ಡಬಿದ್ದು ಬರುತ್ತಿದ್ದರು. ಆದರೆ ಶಿವಣ್ಣ ಮಾತ್ರ ಇನ್ನೂ ತನ್ನ ಪತ್ತೇದಾರಿ ತನವನ್ನು ಬಿಟ್ಟಿಲ್ಲ. ಅವನಿಗೀಗ ಸನ್ಯಾಸಿ ಮೇಲಿನ ಅನುಮಾನ ತೊಲಗಿ ಕುತೂಹಲ ಉಂಟಾಗಿತ್ತು.

ಅಲ್ಲಾ... ಇವನ ಕಣ್ಣು ಮೂಗು, ಸ್ವರ ನಡಿಗೆ ನೋಡಿದರೆ ನಮ್ಮ ರಂಗನದೇ ನೆನಪು ಬರುತ್ತಿದೆ ಯಲ್ಲಾ? ಆದರೆ ಅವನಂತೂ ಖಂಡಿತಾ ಅಲ್ಲ.

ಹಾಗಾದ್ರೆ ಇವನು ಯಾರಿರಬಹುದು? ಹಾಂ... ತಿಳಿಯಿತು, ತಿಳಿಯಿತು! ಎಂದವನೇ ರಂಗನ ಮನೆಯತ್ತ ಧಾವಿಸಿದನು. ಗದ್ದೆಯಲ್ಲಿ ಹಸುವಿಗಾಗಿ ಹುಲ್ಲು ಕತ್ತರಿಸುತ್ತಿದ್ದ ಗಂಗಕ್ಕ ಇವನ ಧಾವಂತ ಕಂಡು.

"ಏನಪ್ಪಾ ಎತ್ತ ಕಡೆಗೆ ನಿನ್ನ ಸವಾರಿ? ನನ್ಮಗನ ಪತ್ರವೇನಾದ್ರೂ ಬಂತೇನಪ್ಪಾ?" ಸೆರಗಿನಿಂದ ಬೆವರು ಒರಸಿಕೊಳ್ಳುತ್ತಾ ಕೇಳಿದಳು.

"ಅಲ್ಲ ಗಂಗಕ್ಕಾ ಕಾಗ್ದ ಬರೆಯಲು ಅವನೇನು ಶಾಲೆ ಕಾಲೇಜಿಗೆ ಹೋಗಿ ಓದು ಬರಹ ಕಲ್ತವನಾ? ಹಾಂ, ಆ ಸುದ್ದಿ ಹಾಗಿರಲಿ ಬಿಡು. ನಮ್ಮೂರಿಗೊಬ್ಬ ಸನ್ಯಾಸಿ ಬಂದು ತಿಂಗಳೆರಡು ಕಳೆದರೂ ನೀನವನನ್ನು ನೋಡಲು ಬರಲೇ ಇಲ್ಲವಲ್ಲಾ? ಅತ್ತ ಕಡೆಗೊಮ್ಮೆ ಬಂದು ರಂಗನ ವಿಷಯ ಯಾಕೆ ಕೇಳಿ ನೋಡಬಾರದು?"

"ಓ... ಇಷ್ಟೇನಾ? ಪು...ಸ್ ನಾನು ಏನೋ ಅಂತಿದ್ದೆ. ಇಸ್ಸೀ ಇದನ್ನೆಲ್ಲ ಆ ಸನ್ಯಾಸಿ ಬಳಿ ಕೇಳುವುದೆಂತದು? ನನಗಂತೂ ಅವರ ಮಾತಿನಲ್ಲೆಲ್ಲ ನಂಬಿಕೆ ಇಲ್ಲಪ್ಪ. ರಂಗನಿಗೆ ಪತ್ರ ಬರೆಯಲು ಬಾರದಿದ್ದರೇನಾಯ್ತು? ಪುರ್ರೊತ್ತಾದಾಗ ಯಾರಿಂದಾದರೂ ಬರೆಯಿಸಿಯಾನು ಬಿಡು."

"ಹಾಗಲ್ಲ ಗಂಗಕ್ಕಾ ನೀನೊಂದು ಬಾರಿ ಬಂದು ನೋಡಿದ್ದಲ್ಲಿ ಅವನು ಯಾರೆಂದು ನಿನಗೇ ತಿಳಿದೀತು."

"ಅಂದ್ರೆ...?"

"ಅಂದ್ರೆ... ಅವನು ಬೇರಾರೂ ಅಲ್ಲ ಮಾಲಿಂಗಣ್ಣನೇ ಆಗಿರಬೇಕೆಂದು ನನಗೆ ಅನುಮಾನ" ಬಿದ್ದುಬಿದ್ದು ನಗತೊಡಗಿದಳು ಗಂಗಕ್ಕ. "ಅಯ್ಯೋ ಹುಚ್ಚಪ್ಪಾ ಅವರೆಂದಾದರೂ ಸನ್ಯಾಸಿಯಾಗುವುದುಂಟೆ? ಒಂದು ಕೋಳಿ ಮತ್ತೊಂದು ಬಾರ್ ಇದ್ದರೆ ವೈರಾಗ್ಯ ಅವರ ಹತ್ತಿರ ಕೂಡಾ ಸುಳಿಯಲಾರದು. ಗೊತ್ತಾ? ಕೋರ್ದಕಟ್ಟವೇ ಅವರ ಹೆಂಡ್ತಿ ಮಕ್ಳು ಬಂಧು ಬಳಗ ಎಲ್ಲವೂ ಆಗಿರುವಾಗ ಅವರು ಕಾವಿ ತೊಡುವರೆ? ನನ್ನತ್ತ ಹೇಳುತ್ತಿದ್ದರು. 'ನಿನ್ಗಂಡ ಆಟಿದಮಾಸೆ (ಆಷಾಡದ ಅಮಾವಾಸ್ಯೆ) ಯಂದೇ ಹುಟ್ಟಿದವ. ಪಾಲೆದ ಕೆತ್ತೆದ ಕಸಾಯ (ಹಾಳೆ ಮರದ ಚೆಕ್ಕೆಯ ಕಷಾಯ) ಕುಡಿದು ಮೆಂತ್ಯಗಂಜಿ ತಿನ್ನುವುದರೊಳಗೆ ನನಗೆ ಬ್ಯಾನೆ ಬರಲು ಸುರುವಾಗಿತ್ತು' ಎಂದು. ಆದ್ದರಿಂದ ಪಾಲೆದ ಕಸಾಯದಂತೆ ಅವರ ಮನಸ್ಸೂ ತುಂಬಾ ಕಹಿ."

"ಅದೇನೇ ಇರಲಿ ನೀನೀಗ ನನ್ನೊಂದಿಗೆ ಬಂದು ನೋಡು. ಮತ್ತಿನ ವಿಷಯ ಮತ್ತೆ" ಎಂದವನೆ ಅವಳನ್ನು ಬಲವಂತದಿಂದ ಕರೆದೊಯ್ದನು.

ಬೆಣಚು ಕಲ್ಲಿನ ಮೇಲಿರಿಸಿದ್ದ ಹೂಗಳೆಲ್ಲ ಬಾಡಿ ಹೋದಾಗ ಅಲ್ಲೇ ಸುತ್ತಮುತ್ತಲಿದ್ದ ತುಂಬೆ, ಕೇಪಳ ಹೂಗಳನ್ನು ಕೊಯ್ದು ತಂದ ರಂಗ. ಸಾಹುಕಾರನ ಉದಾರತೆಯಿಂದಾಗಿ ಅವನಿಗೆ ಹೊಟ್ಟೆಯ ಚಿಂತೆಯೂ ಕಳೆದಿತ್ತು. ಅವನ ಆಳು ಅದೇ ತಾನೆ ತಂದಿರಿಸಿದ್ದ ಭಕ್ಷ್ಯ ಭೋಜ್ಯಗಳನ್ನು ಕಂಡು ನಗುಬಂತು. 'ಇವೆಲ್ಲ ವಿರಕ್ತಿಗಳು ತಿನ್ನುವಂತದ್ದಲ್ಲ ಎನ್ನುವ ವಿವೇಕವೂ ಅವನಿಗಿಲ್ಲದಿರುವುದು ನನ್ನ ಪುಣ್ಯ.' ರಂಗ ಕಡುಬನ್ನು ಮುರಿದು ಬಾಯಿಗಿರಿಸಿ ನಿಧಾನವಾಗಿ ಅದರ ಸವಿಯನ್ನು ಮೆಲ್ಲುತ್ತಿದ್ದ. ಎತ್ತಲೋ ನೋಡುತ್ತ ಏನೋ ಯೋಚಿಸುತ್ತಿದ್ದ ಅವನ ದೃಷ್ಟಿಗೆ ಶಿವಣ್ಣನೊಂದಿಗೆ ಬರುತ್ತಿದ್ದ ತಾಯಿಯನ್ನು ಕಂಡು ದಿಗಿಲಾಯಿತು. ತಿಂಡಿ ಜಗಿಯುತ್ತಿದ್ದ ಬಾಯಿಗೆ ಬ್ರೇಕ್ ಹಾಕಿದಂತೆ ಗಕ್ಕನೆ ನಿಂತಿತು. ಗಾಭರಿಯಿಂದ ಅವನಿಗೆ ಕೈಕಾಲೇ ಏಳದಾಯಿತು. ಮೊದಲೇ ಆಕೆಗೆ ಕಾವಿ ಧರಿಸಿದವರನ್ನು ಕಂಡರಾಗದು. ಇನ್ನು ಆ ಉಡುಪಿನೊಳಗೆ ಸ್ವತಃ ಮಗನೇ ಅಡಗಿರುವನೆಂದು ತಿಳಿದರಾಯ್ತು, ಪೊರಕೆ ಹಿಡಿಯಲೂ ಹಿಂಜರಿಯುವವಳಲ್ಲ ನನ್ನಮ್ಮ. ಏನೇ ಆಗಲಿ ಕಣ್ಣುಮುಚ್ಚಿಕೊಂಡಿರುವುದೇ ಈಗ ಒಳ್ಳೆ ಉಪಾಯ, ಎಂದು ಭಾವಿಸಿದ ರಂಗ. ಬಾಯಿಯಲ್ಲಿದ್ದ ಕಡುಬಿನ ತುಂಡುಗಳನ್ನು ಸಾಧ್ಯವಾದಷ್ಟೂ ನುಂಗಿದ. ಉಳಿದುದನ್ನು "ತೂತೂ" ಎಂದು ಅತ್ತ ಉಗಿದು ತಟ್ಟೆಯನ್ನು ದೂರ ಸರಿಸಿದನು. ಬೇಗ ಬಾಯಿ ಒರಸಿಕೊಳ್ಳುತ್ತಾ ಧ್ಯಾನಿಸುವವನಂತೆ ಕುಳಿತನು.

ಮಂಟಪದೊಳಗೆ ಬಂದ ಗಂಗಕ್ಕ ಸನ್ಯಾಸಿಗೆ ಸುತ್ತುವರಿದು ಸೂಕ್ಷ್ಮವಾಗಿ ಅವನನ್ನು ಪರೀಕ್ಷಿಸಿದಳು. ತುಸು ದೂರದಲ್ಲಿ ನಿಂತಿದ್ದ ಶಿವಣ್ಣ ಅವಳನ್ನು ಕಾತರದಿಂದ ಗಮನಿಸುತ್ತಿದ್ದ. ಮುಖ ಸೊಟ್ಟ ಮಾಡಿ ಕೈಗಳನ್ನೂ ತಿರುಗಿಸುತ್ತಾ "ನಾನು

ಹೇಳಿಲ್ವೆ? ನಮ್ಮವರಿಗೆ ಹೀಗೆಲ್ಲಾ ವೈರಾಗ್ಯ ಬರಲಾರದೆಂದು? ಕೋಳಿಯೊಂದಿಗೆ ಸಂಸಾರ ಮಾಡುತ್ತಿರುವ ಅವರೀಗ ಯಾವೂರಲ್ಲಿದ್ದಾರೊ ಯಾರಿಗೊತ್ತು?" "ಅದೇಗೆ ಹೇಳ್ತಿ ನೀನು ಇವನು ಮಾಲಿಂಗಣ್ಣ ಅಲ್ಲಾಂತ?"

"ಥೂ, ಅಷ್ಟೂ ಬುದ್ದಿ ಇಲ್ವೇನೊ ನನಗೆ? ನಮ್ಮೆಜಮಾನ್ರ ಕಿವಿಯಲ್ಲಿ ದೊಡ್ಡದೊಂದು ಕೆಂಪುಕಲ್ಲಿನ ಒಂಟಿ ಇದ್ದದ್ದು ನಿನಗೇನು ಗೊತ್ತೊ?"

"ಇದೇನು ಹೀಗಂತೀಯಾ ಗಂಗಕ್ಕಾ ಎಲ್ಲಿಯಾದರೂ ಸನ್ಯಾಸಿಗಳು ಒಂಟಿಗಿಂಟಿ ಹಾಕು ವುದನ್ನು ಕಂಡಿದೀಯಾ ನೀನು?"

"ಒಂಟಿ ಹಾಕಿಕೊಳ್ಳದಿದ್ದರೇನಾಯ್ತೊ? ಆ ಜಾಗದಲ್ಲಿ ತೂತಾದ್ರು ಇರಬೇಕಿತ್ತಲ್ಲಾ?" ಅವಳ ಬುದ್ದಿವಂತಿಕೆಗೆ ಶಿವಣ್ಣ ತಲೆದೂಗಿದ. ಗಂಡ ಒಯ್ದಿದ್ದ ತನ್ನ ಬೆಂಡೋಲೆ ಬದಲಿಗೆ ಅವನ ಕಿವಿಯಲ್ಲಿದ್ದುದನ್ನು ಕಿತ್ತು ತರಲೇ ಬೇಕೆಂದಿದ್ದ ಅವಳಿಗೆ ನಿರಾಶೆ ತಡೆಯದಾಯಿತು. ಸರಸರ ಮೆಟ್ಟಲಿಳಿದು ಹೋದ ಗಂಗಕ್ಕನನ್ನು ಶಿವಣ್ಣ ಹಿಂಬಾಲಿಸಿದ. ವಾತಾವರಣ ನಿಶಬ್ದ ವಾದಾಗ ರಂಗ ಮೆಲ್ಲನೆ ಕಣ್ಣು ತೆರೆದು ನೆಮ್ಮದಿಯ ಉಸಿರುಬಿಟ್ಟ.

ಬಾಯಿಂದ ಬಾಯಿಗೆ ಹರಡಿದ ಸನ್ಯಾಸಿಯ ವಿಷಯ ಊರಿನ ಗಣ್ಯರೂ ಸಮಾಜ ಸುಧಾರಕರೂ ಆಗಿದ್ದ ಮೋಹನಪ್ಪನವರ ಕಿವಿಗೂ ಬಿತ್ತು. ಮೂರ್ತಿಪೂಜೆ, ಮೂಢನಂಬಿಕೆಗಳನ್ನು ಕಟುವಾಗಿ ವಿರೋಧಿಸುತ್ತಿರುವ ಅವರಿಗೆ ತನ್ನ ಊರ ವರಲ್ಲಿಯ ಅಜ್ಞಾನ ಅನಾಗರೀಕತೆ ಕಂಡು ಸಹಿಸದಾಯಿತು. ಒಡನೆ ಅವರು ತಮ್ಮ ಅಳಿಯ ಕೃಷ್ಣಪ್ಪನವರ ಜತೆಗೂಡಿ ಮಂಟಪದತ್ತ ಹೋಗು ತ್ತಿರುವವರಿಗೆಲ್ಲ ಬುದ್ದಿ ಹೇಳತೊಡಗಿದರು.

"ಗುರ್ತು ಪರಿಚಯವಿಲ್ಲದ ಆ ಪರದೇಸಿಗೆ ಕೊಡುವ ದುಡ್ಡನ್ನು ನಿಮ್ಮ ಮಕ್ಕಳು ಮರಿಗಳಿ ಗಾದರೂ ಉಪಯೋಗಿಸಬಾರದೆ? ಅವರಿಗೆ ಹಾಲು ಹಣ್ಣನ್ನೋ ಪುಸ್ತಕ ಸ್ಲೇಟನ್ನೊ ತಂದು ಕೊಟ್ಟರಾಗದೆ?" ಎಂದು ಅವರೆಲ್ಲರ ಮನ ಮುಟ್ಟುವಂತೆ ಹೇಳತೊಡಗಿದರು.

"ಓಗಿ ಓಗಿ ಸ್ವಾಮಿ ನೀವೊಬ್ಬರು ಬಾಕಿ ಇದ್ದೀರಿ. ಪಿರಾಯ ಆಗಿದ್ದರೂ ಇನ್ನೂ ಬುದ್ದಿ ಇಲ್ಲದವರಂತೆ ಆಡ್ತಿದ್ದೀರಲ್ಲಾ ಆ ಸ್ವಾಮಿಯ ಕಾರ್ನಿಕ ನಿಮಗೇನು ಗೊತ್ತುಂಟು? ಇಷ್ಟಕ್ಕೂ ನಮ್ಮ ಮಕ್ಕಳು ಮರಿಗಳ ಸಿಂತೆ ನಮಗಿಲ್ಲವೆಂದು ಕೊಂಡಿರಾ?" ಎಂದು ಮೂದಲಿಸಿದಾಗ ಇವರು ನಿರುತ್ತರರಾದರು.

ಮಾರ್ಕೆಟಿಗೆ ಹೋಗುವವರೆಲ್ಲ ಒಳದಾರಿ ಎಂದು ಮಂಟಪದ ಮುಂದಿನ ಕಾಲುದಾರಿಯಲ್ಲಿ ಹಾದು ಹೋಗುತ್ತಿದ್ದರು. ತೆಂಗಿನ ಗರಿಯಲ್ಲಿ ಅವರು ಪೋಣಿಸಿ ತರುತ್ತಿದ್ದ ಮೀನುಗಳನ್ನು ಕಂಡಾಗಲೆಲ್ಲ ರಂಗನ ಬಾಯಿಯಲ್ಲಿ ನೀರೂರು ವುದು. 'ಛೆ ನನ್ನಮ್ಮ ಮಾಡುತ್ತಿದ್ದ ಮೀನಿನ ಸಾರು ಅದೆಷ್ಟು ರುಚಿಯಾಗಿರುತ್ತಿತ್ತು' ಮನದಲ್ಲಿ ಮೇಲೋಗರದ ಸವಿ ಮೆದ್ದ ರಂಗನಿಗೆ ಈಗಿಂದೀ ಗಲೇ ಮನೆಗೆ ಓಡಿಹೋಗಲೆ? ಎನ್ನುವಷ್ಟು ಆಸೆ ಆಯಿತು. ನಾಯಿಗಳ ಬೊಗಳುವಿಕೆ ಅವನ ಕನಸನ್ನು ಕೆಡಿಸಿತು.

ಮುನಿಸಿಪಾಲಿಟಿ ಕೆಲಸಗಾರನೊಬ್ಬ ಸಾವ್ಕಾರ್ ಸೋಂಪನ ನಾಯಿಯನ್ನು ಅಟ್ಟಿಸಿಕೊಂಡು ಓಡುತ್ತಿದ್ದನು. ತನ್ನಲ್ಲಿದ್ದ ಹಗ್ಗವನ್ನು ಅಷ್ಟು ದೂರದಿಂದಲೆ ಅದರತ್ತ ಬೀಸಿ ಎಸೆದನು. ನಾಯಿಯ ಕೊರಳಿಗೆ ಉರುಳು ಬಿದ್ದೊಡನೆ ಅದನ್ನು ದರದರ ಎಳೆದುತಂದು ಜಾಲರಿಗಾಡಿ ಯೊಳಗೆ ಎತ್ತಿಹಾಕಿದನು. ಇದೆಲ್ಲವನ್ನು ಕಣ್ಣಾರೆ ಕಂಡ ರಂಗನಿಗೆ ಹಾಲು ಕುಡಿದಷ್ಟು ತೃಪ್ತಿ ಯಾಯಿತು. ಇಸ್ಪೀಟು ಆಡಿ ರಾತ್ರಿ ಮನೆಗೆ ಮರಳುವಾಗ ಸೋಂಪನ ತೋಟದಲ್ಲಿ ಸೀಯಾಳ ಕದಿಯುವ ಚಟ ರಂಗನ ಗ್ಯಾಂಗಿಗಿತ್ತು. ಅಂದೊಮ್ಮೆ ಬೊಗಳುತ್ತಾ ಬಂದ ಈ ನಾಯಿಗೆ ಹೆದರಿದ ಗೆಳೆಯರೆಲ್ಲ ದರೆ ಹಾರಿಹೋಗಿ ರಾಂಪಣ್ಣನ ಬಂಗಲೆಯೊಳಗೆ ಅಡಗಿಕೊಂಡಿದ್ದರು. ಮರದಿಂದ ಜಿಗಿದ ರಂಗನೂ ಅವರನ್ನು ಕೂಡಿಕೊಳ್ಳುವುದ ರೊಳಗೆ ನಾಯಿ ಅವನ ಲುಂಗಿಗೆ ಬಾಯಿ ಹಾಕಿ ಬಿಟ್ಟಿತು.

ಮರುದಿನ ಸಾಹುಕಾರ, ನಾಯಿ ಎಳೆದು ತಂದ ಲುಂಗಿಯನ್ನು ಪ್ರದರ್ಶನಕ್ಕೆಯಿಟ್ಟಿದ್ದ. ಇದನ್ನು ಕಂಡ ಕೆಲವರಿಗಾದರೂ ಕಾಯಿಕಳ್ಳ ಯಾರೆಂದು ತಿಳಿದು ಹೋಗಿತ್ತು. ಅಂದಿನಿಂದ ಸೋಂಪನ ನಾಯಿಯನ್ನು ಕಂಡರಾಗುತ್ತಿದ್ದಿಲ್ಲ ರಂಗನಿಗೆ. ಅದರ ಕಾಲು ಮುರಿಯಲಿಕ್ಕಾಗಿ ಸಂದರ್ಭ ಕಾಯುತ್ತಿದ್ದನು. ಇಂದು ಅನಾಯಾಸವಾಗಿ ಪೀಡೆ ಕಳೆಯಿತು ಎಂದು ಸಂತೋಷ ಪಟ್ಟ.

ಧನಿ ಒಕ್ಕಲು ತಗಾದೆಯಿಂದಾಗಿ ಕೋರ್ಟು ಕಚೇರಿಗೆ ಅಲೆದು ಸುಸ್ತಾಗಿದ್ದ ಸೋಂಪ ಗೆಲುವಿಲ್ಲದ ಅವನ ನಡಿಗೆಯನ್ನು ಕಂಡವರು "ಕೇಸಿನಲ್ಲಿ ಏನೋ ಸೋಲು ಬಂದಿರಬೇಕು" ಎಂದು ಆಡಿಕೊಳ್ಳುವಂತಿದ್ದ. ಬಿಸಿಲಿನಲ್ಲಿ ನಡೆದು ಬಳಲಿದರೂ ಸ್ವಾಮಿಯನ್ನು ಕಂಡು ಬಾಗಿ ನಮಸ್ಕರಿಸಿದ. ರಂಗ ಅವನ ಮುಖವನ್ನೆ ನೋಡುತ್ತಿದ್ದು "ತ್ಚು ತ್ಚು ತ್ಚು ಹೀಗಾಗ ಬಾರದಿತ್ತು" ಎಂದ.

"ಏನು ಸ್ವಾಮಿ ಏನಾಯ್ತು?" ಸೋಂಪ ಗಾಭರಿಯಾದ.

"ಒಟ್ರಾಸಿ ನಿನ್ನ ಗೆರಚಾರವೆ ಸರಿಯಿಲ್ಲ. ನಿನಗೀಗ ಬಾರೀ ಕಟಿನ ದಿಸೆ. ಮಾಡಿದ ಕರ್ಮಫಲದಿಂದಾಗಿ ಕೈಗೆತ್ತಿಕೊಂಡ ಕೆಲಸ ಒಂದೂ ಕೈಗೂಡುವಂತಿಲ್ಲ. ಮೇಲಾಗಿ ನಿನ್ನ ಹಡೆದವಳು ಹೋದಳು. ಅಲ್ಲದೆ ನಂಬಿಗಸ್ಥ ಸೇವಕನಂತಿದ್ದ ನಾಯಿಯೂ ಹೋಯಿತು. ಇನ್ನು ಮೂ..ರನೆಯದಾಗಿ ನಿನ್ನ ಜೀವಕ್ಕೆ ಅಪಾಯ ಬಂದರೂ ಆಶ್ಚರ್ಯವೇನಿಲ್ಲ..."

"ಬೇಡ ಸ್ವಾಮಿ ಬೇಡ ಈ ಕಿವಿಯಲ್ಲಿ ಇನ್ನೇನನ್ನೂ ಕೇಳಲಾರೆ. ನನ್ನ ಹಿರಿಯರು ಏನೇನು ಪಾಪ ಮಾಡಿದ್ದಾರೊ ಏನೊ ಯಾರಿಗೊತ್ತು? ಆದರೆ ನಾನಂತೂ ಈ ಜನ್ಮದಲ್ಲಿ ಯಾರಿಗೂ ಅನ್ಯಾಯ ಮಾಡಿದವನಲ್ಲ."

"ಇಲ್ಲ ಇದೆಲ್ಲವು ಈ ಜನ್ಮದಲ್ಲೆ ಮಾಡಿದ ಕರ್ಮವಾಗಿದೆ. ಅದಿರಲಿ ನಿನ್ನ ರಕ್ತ ಸಂಬಂಧಿಕರಲ್ಲಿ ಯಾರಾದರೂ ನಿನ್ನಿಂದಾಗಿ ಆಸ್ತಿಪಾಸ್ತಿ ಕಳಕೊಂಡು ಕೊರಗುತ್ತಿರುವವರಿದ್ದಾರೆಯೆ?"

"ಅಂದ ಹಾಗೆ ನಮ್ಮಲ್ಲಿ ಯಾರೂ ಅಂತವರಿಲ್ಲಪ್ಪಾ."

"ಸ್ವಲ್ಪ ಸರಿಯಾಗಿ ಜ್ಞಾಪಿಸಿಕೊಳ್ಳಯ್ಯಾ, ಇಂತ ಶನಿಕಾಟ ಕಾಡುತ್ತಿದ್ದರೂ ನನ್ನಲ್ಲಿ ನೀನು ಮುಚ್ಚುಮರೆ ಮಾಡುತ್ತಿರುವೆಯಲ್ಲಾ?"

"ಹಾಂ? ಹಾಂ– ಹೌದೌದು ದೂರದ ದಾಯಾದಿಯೊಬ್ಬನಿದ್ದಾನೆ ಸ್ವಾಮಿ"

"ಕಷ್ಟಕಾಲದಲ್ಲಿ ಒಡವೆ ವಸ್ತು ಅಡವಿಟ್ಟವರ ಸೊತ್ತೇನಾದರೂ ನಿನ್ನಲ್ಲಿ ಉಳಿದಿದೆಯೆ?"

"ಇಲ್ಲಪ್ಪ, ಇದ್ದರೂ ಎಲ್ಲೋ ಚೂರುಪಾರಿರಬಹುದು ಅಷ್ಟೇ...."

"ಹಾಂ, ನೋಡಿದೆಯಾ ಅವರೆಲ್ಲರ ಕಣ್ಣೀರೇ ಇಂದು ನಿನ್ನ ಬಾಳಿಗೆ ಶಾಪವಾಗಿ ನಿಂತದೆ ಗೊತ್ತಾ? ಈ ಗೋಳಿನಿಂದ ಬಿಡುಗಡೆಯಾಗದ ವಿನಹಃ ನಿನ್ನ ಬಾಳು ಸುಃಖವಾಗಿರದು."

"ಇದಕ್ಕೆ ಪಿರಿ (ಪರಿಹಾರ) ಇಲ್ಲವೆ ಸ್ವಾಮಿ?"

"ಇಲ್ಲದೆ ಉಂಟೆ? ಮೊತ್ತಮೊದಲು ಪರರದಾಗಿರುವ ಎಲ್ಲವನ್ನೂ ಅವರವರಿಗೆ ಒಪ್ಪಿಸಿಬಿಡು. ಆ ಕ್ಷಣದಿಂದ ಪಾಪ ತಾನಾಗಿ ಪರಿಹಾರವಾಗುವುದು" ಇಷ್ಟೊಂದು ಸಂಪತ್ತು ಕೈಬಿಟ್ಟು ಹೋಗುವುದನ್ನು ನೆನೆದೇ ಸೋಂಪ ಪಾತಾಳಕ್ಕೆ ಇಳಿದು ಹೋದ.

"ಎರಡನೆಯದಾಗಿ ಮೃತ್ಯುಂಜಯ ಹೋಮ ಮಾಡಿಸಿ ಬಡಬಗ್ಗರಿಗೆ ಅನ್ನದಾನ ಮಾಡು. ಮನೆಯಲ್ಲಿ ಶಾಂತಿ ಸಮೃದ್ಧಿಯೂ ನೆಲೆಸುತ್ತದೆ, ಭಯ ಪಡಬೇಡ. ಈ ಗಡು ದಾಟಿದರೆ ಮತ್ತೆ ನಿನಗೆ ಪೂರ್ಣಾಯಸ್ಸು ಲಭಿಸುವುದು. ಸರಿ, ನೀನೀಗ ಹೋಗಿ ಬಾ, ಮಹಾತಾಯಿಯ ರಕ್ಷೆ ನಿನಗಿರಲಿ."

"ಸ್ವಾಮಿ ನಿಮ್ಮ ಆಜ್ಞೆಯಂತೆ ನಾನು ನಡೆದುಕೊಳ್ಳುತ್ತೇನೆ, ವಾಮದ ಕಾರ್ಯದಲ್ಲಿ ನೀವೂ ಪಾಲುಗೊಳ್ಳುವಂತಿದ್ದ...ರೆ..." ರಂಗನ ಮನದಲ್ಲಿ ನಗು ಉಕ್ಕಿತು 'ಹಾಂ, ನಿನ್ನ ಮನೆ ಹೋಮಕ್ಕೆ ನಾನು ಬಂದರೆ ಗಮ್ಮತ್ತಾದೀತು. ಭಟ್ಟರು ಮಂತ್ರೋಚ್ಚಾರಣೆ ಮಾಡುತ್ತಿದ್ದರೆ ಏನೂ ಗೊತ್ತಿಲ್ಲದ






ಅಲ್ಲಾ! ನಿಮಗೆ ಮಂತ್ರಿ ಪದವಿ ಬಂತೂಂತ
ಈ ದಿನ ಹೇಳಿದ್ರೆ ನೀವೂ ನಂಬುತ್ತೀರಲ್ಲಾ?

ನಾನು ಮೂಕನಂತೆ ಕುಳಿತಿರಬೇಕೆ?' ಎಂದು ತನ್ನಲ್ಲೆ ಗೊಣಗಿಕೊಳ್ಳುತ್ತಾ "ಇದೇನಯ್ಯಾ ಹೀಗಂತಿ? ಸಂಸಾರಸ್ಥರ ನಡುವಿಗೆ ಸನ್ಯಾಸಿಯನ್ಯಾಕೆ ಎಳೆಯುತ್ತಿ? ಮತ್ತೆ... ಕಾಣಿಕೆ ಏನಿದ್ದರೂ ಇಲ್ಲಿ ತಂದು ಒಪ್ಪಿಸಿದರಾಯ್ತು."

ತಲೆ ಮೇಲೆ ಬಂಡೆ ಹೊತ್ತಷ್ಟು ಭಾರದ ನಡಿಗೆಯಲ್ಲಿ ಸೋಂಪ ಮನೆಯತ್ತ ಹೊರಟಾಗ ರಂಗ ಹಲ್ಲು ಕಡಿದ. 'ನನ್ಮಗ ದುಡ್ಡಿನ ಮದದಿಂದ ಊರವರಿಗೆಲ್ಲ ಎಷ್ಟು ಕಿರುಕುಳ ಕೊಟ್ಟಿಲ್ಲ? ಕೊರಗ ಸೆಟ್ಟಿ ಮಾರಾಟ ಮಾಡಲಿದ್ದ ದನಕರುವನ್ನು ನನ್ನಮ್ಮ ಕೊಳ್ಳುವುದೆಂದು ನಿರ್ಧರಿಸಿದ್ದಳು. ಆದರೆ ಕೈಯಲ್ಲಿದ್ದ ದುಡ್ಡು ಕಮ್ಮಿಯಾಯಿತೆಂದು ಇದೇ ಸೋಂಪನ ಬಳಿ ನೂರು ರೂಪಾಯಿ ಸಾಲಕೇಳಲೆಂದು ಹೋಗಿದ್ದಾಗ—

"ನಿನ್ನಂತಹ ಕೂಲಿ ಹೆಂಗ್ಸಿಗೆ ಸಾಲ ಕೊಟ್ಟು ನಾಳೆ ನಾನೇನು ಮೂರು ನಾಮ ಹಾಕಿಕೊಳ್ಳಬೇಕಾ? ನಿನಗೇನು ಆಸ್ತಿಯೆ ಪಾಸ್ತಿಯೆ ಯಾವ ಆಧಾರದ ಮೇಲೆ ಅಷ್ಟೊಂದು ರೂಪಾಯಿ ಕೊಡಲಿ ನಿನಗೆ? ಹೋಗು ಹೋಗು" ಎಂದು ಅವಳನ್ನು ಸಸಾರ ಮಾಡಿದ್ದನ್ನು ನಾನು ಮರೆಯುವುದುಂಟೆ? ಆದರೆ ಇಂತಹ ಕಲ್ಲೆದೆಯವನೂ ಇಷ್ಟು ಸುಲಭವಾಗಿ ನನ್ನ ಮಾತಿನಲ್ಲಿ ವಿಶ್ವಾಸವಿರಿಸುವನೆಂದು ನಾನಂದುಕೊಂಡಿರಲಿಲ್ಲ. ಪಾ-ಪ! ಸಾವಿನ ಭಯ. ಜಮೀನು, ನಗನಾಣ್ಯಗಳ ಮೇಲಿನ ವ್ಯಾಮೋಹವನ್ನು ತೊಡೆದು ಹಾಕಿರಬೇಕು!

ನಾಲ್ಕಾರು ದಿನ ಕಳೆಯುವುದರೊಳಗೆ ಸಾಹುಕಾರನ ಮನೆಯಲ್ಲಿ ಹೋಮಕ್ಕೆ ಸಿದ್ಧತೆ ನಡೆಯಿತು. ಮಾಧವನಿಗೂ ಕರೆಹೋಯಿತು. ಊರ ಗುರಿಕಾರರ ಸಮ್ಮುಖದಲ್ಲಿ ಅವರವರ ಸೊತ್ತುಗಳನ್ನು ಮರಳಿಸುವಾಗ ಸೋಂಪನಿಗೆ ಕಣ್ಣೀರೆ ಬಂದು ಬಿಟ್ಟಿತು. ಆದರೂ ತನಗೆ ಆಯುಷ್ಯ ವೃದ್ಧಿಸುವುದೆನ್ನುವ ಅಭಿಲಾಷೆಯಿಂದ ದುಃಖ ನುಂಗಿಕೊಂಡನು.

ಮರುದಿನ ಬೆಳಗಾಗುತ್ತಲೆ ಮಂಟಪದತ್ತ ಓಡೋಡಿ ಬಂದ ಸೋಂಪ. 'ಇವತ್ತು ಯಾರ ಮನೆಯಿಂದ ಏನು ತಿಂಡಿ ಬರಬಹುದು?' ಎಂದು ಲೆಕ್ಕ ಹಾಕುತ್ತಾ ಕುಳಿತಿದ್ದ ರಂಗನಿಗೆ ಸಾಹುಕಾರನ ಕೈಯಲ್ಲಿದ್ದ ಪುಸ್ತಕಗಳನ್ನು ಕಂಡು ನಿರಾಶೆಯಾಯಿತು.

"ಸ್ವಾಮಿ, ನಮ್ಮನೆ ಅಟ್ಟ ವತ್ತರೆ ಮಾಡುತ್ತಿದ್ದಾಗ ಕೆಲಸದಾಳಿಗೆ ಇವು ಸಿಕ್ಕವಂತೆ ಧೂಳು ತಿಂದುಕೊಂಡು ಅಲ್ಲಿ ಬಿದ್ದಿರುವ ಬದಲು ಈ ಗ್ರಂಥಗಳು ನಿಮ್ಮ ಬಳಿಯಲ್ಲಿರುವುದು ಒಳ್ಳೆಯದಲ್ಲವೆ? ದಿನಾ ಸಂಜೆ ಗ್ರಂಥ ವಾಚನ ಪ್ರಾರಂಭಿಸಿದಲ್ಲಿ ನಾಲ್ಕು ಜನರಾದರೂ ಕೇಳಿ ಸಂತೋಷಪಡುವರಲ್ಲಾ ಎಂದು ನನ್ನ ಆಸೆ." ರಂಗನಿಗೆ ಒಮ್ಮೆಲೆ ತನ್ನನ್ನು ಎತ್ತಿ ಬಿಸಿ ಕಾವಲಿಯಲ್ಲಿ ಕುಳ್ಳಿರಿಸಿದಂತಹ ಅನುಭವವಾಯಿತು. ಗ್ರಂಥದ ಹೆಸರೇ ಓದಲು ಬಾರದ ನಾನು ವಾಚನ ಮಾಡುವುದುಂಟೆ? ದೇವರೇ ಇವನದೊಂದು ಒಳ್ಳೆ ಶನಿ ಕಾಟವಾಯಿತಲ್ಲಾ?

"ಸ್ವಾಮಿ ನಿಮ್ಮ ಮೌನ ಕಂಡಾಗ ನಾನು ಹೇಳಿದ್ದು ಅಪರಾಧವಾಯಿತೇನೋ ಎಂದೆನಿಸುತ್ತದೆ."

"ಛೆ ಛೆ, ಹಾಗೇನಿಲ್ಲ. ಗ್ರಂಥ ವಾಚನದಂತಹ ಪುಣ್ಯಕಾರ್ಯವನ್ನು ಇಲ್ಲವೆನ್ನಲಾದೀತೆ? ನನ್ನ ಮೌನಕ್ಕೆ ಕಾರಣ ಅದಲ್ಲ. ನಾಳೆಯಿಂದ ಹದಿನೈದು ದಿನಗಳವರೆಗೂ ದೇವಿ ಉಪಾಸನೆ ಪ್ರಾರಂಭಿಸಬೇಕೆಂದಿರುವೆನು. ಆದ್ದರಿಂದ ಬೇರೆ ಕಾರ್ಯ ಕೈಗೊಳ್ಳಲು ಸಾಧ್ಯವೆ ಎಂದು ಯೋಚಿಸುತ್ತಿದ್ದೇನೆ ಅಷ್ಟೆ." ತನ್ನ ಅಶಕ್ತತೆಯನ್ನು ಸೋಂಪನ ಮುಂದೆ ತೋರ್ಪಡಿಸಲಾರದೆ ಸುಳ್ಳುಕತೆ ಕಟ್ಟಿದ ರಂಗ.

"ಸ್ವ..ರಿ ಸ್ವಾಮಿೂ ನಿಮ್ಮ ಉಪಾಸನೆ ಮುಗಿದ ಬಳಿಕವೆ ವಾಚನ ಪ್ರಾರಂಭಿಸಿದರಾಯ್ತು".

"ನೋಡೋಣ ಮುಂದಕ್ಕೆ" ಎಂದು ಮಾತಿಗೆ ಮುಕ್ತಾಯ ಹಾಕಿ ಸಾಹುಕಾರನನ್ನು ಸಾಗ ಹಾಕಿದ ರಂಗ, ಯೋಚನೆಯಲ್ಲಿ ಮುಳುಗಿದ.

'ಅಯ್ಯೋ ಇದೀಗ ನನ್ನ ನಾಟಕಕ್ಕೆ ಮಂಗಲ ಹಾಡುವ ಕಾಲ ಬಂತೆ? ಹತ್ತು ಸಲ ಕದ್ದವನು ಕೊನೆಗಾದರೂ ಸಿಕ್ಕಿ ಬಿದ್ದೇ ಬೀಳುವನಂತೆ. ಈಗ ನನ್ನದೂ ಅದೇ ಪಾಡಾದರೆ? ಈ ನನ್ನ ಬಣ್ಣ ಬಯಲಾಗುವುದರೊಳಗೆ ಓಡಿ ಹೋಗಲೆ? ಮತ್ತೆ ದುಡ್ಡಿನ ಗಂಟಿನೊಂದಿಗೆ ಸಿಕ್ಕಿ ಬಿದ್ದಲ್ಲಿ ಪೆಟ್ಟು ತಿನ್ನುವ ವ್ಯಾಪಾರ ಯಾರಿಗೆ ಬೇಕು? ಇಲ್ಲ ಏನಾದರೊಂದು ನೆಪ ತೆಗೆದು ಪ್ರವಚನವನ್ನು ಹಿಂದಕ್ಕೆ ತಳ್ಳಿ ಹಾಕುತ್ತಾ ಹೋಗಲೆ?' ಅಡಕತ್ತರಿಯಲ್ಲಿ ಸಿಕ್ಕಿ ಹಾಕಿಕೊಂಡಂತಾಯಿತು ರಂಗನ ಸ್ಥಿತಿ. ಯೋಚಿಸಿದಷ್ಟೂ ಬಗೆಹರಿಯದಾಯಿತು ಅವನ ಸಮಸ್ಯೆ. ಅದರೇನು ದಿನ ಕಳೆಯುತ್ತಾ ಹೋಗುತ್ತಿತ್ತು.

ಅಂದು ಬೊಂಟೆಗೆ (ಬೇಟೆ) ಹೋಗಿದ್ದ ಪೆಲಿಸರು (ಫೆಲಿಕ್ಸ್) ಮರಿಹುಲಿಯೊಂದನ್ನು ಕೊಂದು ತಂದಿರುವ ಸುದ್ದಿ ಊರಿಗೆಲ್ಲಾ ಹರಡಿತ್ತು. 'ಹೌದು ಪೆಲಿಸರು ಗುಂಡು ಬಿಟ್ಟರೆ ಅದು ಎಂದೂ ಗುರಿ ತಪ್ಪಿದ್ದೆಂದಿಲ್ಲ.' ಸತ್ತ ಹುಲಿಮರಿಯನ್ನು ನೋಡಲು ಆತುರದಲ್ಲಿದ್ದವರೆಲ್ಲ ಅವರ ಮನೆಯತ್ತ ಧಾವಿಸುತ್ತಿದ್ದರು. ಈ ಗಡಿಬಿಡಿಯ ನಡುವಿನಲ್ಲೂ ಮಂಟಪದ ಎದುರು ಒಂದು ಕ್ಷಣ ನಿಂತು ಕೈಮುಗಿದು ಮುಂದೆ ಹೋಗುತ್ತಿದ್ದರು. ಕೆಲವರಂತೂ "ಈ ಪುಣ್ಯಾತ್ಮ ನಮ್ಮೂರಿಗೆ ಬಂದುದೇ ತಡ ರಂಗನ ಇಸ್ಪೀಟ್ ಗ್ಯಾಂಗ್ ಚದುರಿ ಹೋಯ್ತು. ಸಾವ್ಕಾರನೂ ದರ್ಪ ಬಿಟ್ಟು ಮೆತ್ತಗಾದ. ಹಾಗೂ ಊರಲ್ಲಿ ಸಾಕಷ್ಟು ಬದಲಾವಣೆಗಳು ಆದವು" ಎಂದೆಲ್ಲಾ ಮಾತನಾಡಿಕೊಳ್ಳುತ್ತಿದ್ದರು. ಎಲ್ಲವನ್ನೂ ಕೇಳಿಸಿಕೊಂಡ ರಂಗನಿಗೆ ನಗು, ಭಯ ಒಟ್ಟೊಟ್ಟಾಗಿ ಕಾಡಿದವು.

ಮಂಟಪದತ್ತ ಕಣ್ಣೆತ್ತಿಯೂ ನೋಡದ ಉದ್ದ ಜಡೆಯವಳೊಬ್ಬಳ ನಡಿಗೆ ರಂಗನನ್ನು ಆಕರ್ಷಿಸಿತು. ಸಂತಸದಿಂದ ಅವನ ಮೆಯೆಲ್ಲಾ ಪುಲಕಗೊಂಡಿತು. "ರತ್ನಾ.." ಎಂದು ಹೆಸರೆತ್ತಿ ಕರೆಯಲು ಇಷ್ಟಗಲ ಬಾಯಿ ತೆರೆದವನು ತಕ್ಷಣ ಮುಚ್ಚಿಕೊಂಡ. ಮಡದಿಯ ಜತೆಯಲ್ಲಿದ್ದ ಅವಳ ಗೆಳತಿ, ಉತ್ಸಾಹದಲ್ಲಿದ್ದ ರಂಗನನ್ನು ನಿರಾಶೆಗೊಳಿಸಿದಳು. ಅಷ್ಟರಲ್ಲಿ–

"ಸ್ವಾಮಿೂ.." ಎಂದು ದೈನ್ಯದಿಂದ ಕೂಗಿದಳು ನೆರೆಗ್ರಾಮದ ನಾಗಕ್ಕ. ಮಡದಿಗಾಗಿ ಕಾತರಿಸುತ್ತಿದ್ದವನಿಗೆ ಈ ಕರೆ ಕರಕರೆ ಎನಿಸಿತು.

"ಸ್ವಾಮಿೂ.. ಬಾಳ ವರ್ಷದ ನಂತರ ಅಪರೂಪಕ್ಕೆ ಹುಟ್ಟಿದ ಮಗುವಿಗೆ ಯಾವಾಗ ನೋಡಿದರೂ ಕುತ್ತ ತಪ್ಪಿದ್ದೆಂದಿಲ್ಲ. ಅದ್ಕೆ ನಿಮ್ಮತ್ರ ಜಾತಕವನ್ನಾದರೂ ಓದಿಸೋಣವೆಂದು ಬಂದೆ ಸ್ವಾಮಿೂ" ರಂಗನ ಪಿತ್ತ ನೆತ್ತಿಗೇರಿತು.

"ಏನಮ್ಮಾ ಈ ಜಾತಕ ಗೀತಕ ಓದಲು ನಾನೇನು ಬಲ್ಮೆಯವನೆಂದು ಕೊಂಡೆಯಾ? ಕುತ್ತ ತಪ್ಪದಿದ್ದರೆ ಪಂಡಿತರಿಲ್ಲವೆ? ಜಾತಕವಂತೆ ಜಾತಕ! ಇಂದೇ ಕೊನೆ ಇನ್ನೆಂದೂ ಇಂತಹ ಕೆಲಸ ಮಾಡಬೇಡ."

ನಾಗಕ್ಕ ಕಣ್ಣು ಮೂಗು ಒರಸಿಕೊಳ್ಳುತ್ತಾ ಹೊರಟು ಹೋದಳು. ಗುರುತು ಪರಿಚಯ ಇಲ್ಲದ ಯಾರೇ ಬಂದರೂ ಏನಾದರೊಂದು ನಾಟಕವಾಡಿ ಅವರನ್ನು ಸಾಗ ಹಾಕುವುದು ಈಗೀಗ ರಂಗನಲ್ಲಿ ಸಾಮಾನ್ಯವಾಗಿತ್ತು.

ಸತ್ತಹುಲಿಯನ್ನು ನೋಡಿ ಹಿಂದಿರುಗಿ ಬರುತ್ತಿದ್ದ ರತ್ನಳನ್ನು ಕಂಡು ರಂಗ ಉದ್ವೇಗಗೊಂಡ. ತಲೆ ತಗ್ಗಿಸಿಕೊಂಡು ತಾನು ನಡೆಯುತ್ತಿದ್ದ ದಾರಿಯನ್ನೆ ದಿಟ್ಟಿಸುತ್ತಿದ್ದ ಅವಳ ಮುಖ ಕಂದಿತ್ತು. ರತ್ನಳತ್ತ ತಿರುಗಿದ ಗೆಳತಿ ಗಿರಿಜ–

"ಎಷ್ಟು ದಿನಾಂತ ಹೀಗೆ ಕೊರಗ್ತಿಯೆ ನೀನು? ಒಮ್ಮೆ ಆ ಸ್ವಾಮಿಯವರೊಡನಾದರೂ ರಂಗಣ್ಣನ ವಿಚಾರ ಕೇಳಿ ನೋಡಬಾರದೇನೆ?"

"ಬೇಡ್ವೇ..ಅತ್ತೆಗೆ ಗೊತ್ತಾಗಿ ಬಿಟ್ರೆ ನನ್ನ ಸಿಗಿದು ಬಿಟ್ಟಾರು."

"ಏ.. ನೀನೊಬ್ಳು, ಗಂಗಕ್ಕನಿಗ್ಯಾಕೆ ಇದನ್ನೆಲ್ಲ ಡಂಗುರ ಹೊಡಿಬೇಕು? ಹೋಗಿ ಬರೋಣ ಬಾ." ಗೆಳತಿಯ ಬಲವಂತಕ್ಕೆ ರತ್ನ ಮಂಟಪದ ಮೆಟ್ಟಲೇರಿದಳು. ಹೆಂಡತಿಯನ್ನು ಕಣ್ಣಿನಿಂದಲೇ ನುಂಗಿ ಬಿಡುವಂತೆ ನೋಡುತ್ತಿದ್ದ ರಂಗ. ಆದರೆ ಗಿರಿಜಳಾ ಮುಂದೆ ತನ್ನ ಆಸೆಯನ್ನು ಅದುಮಿಟ್ಟುಕೊಳ್ಳುತ್ತಾ–

"ಮಗಳೇ ನಿನ್ನ ಚಿಂತೆ ಏನೆಂದು ನಾ ಬಲ್ಲೆ. ಕೈ ಹಿಡಿದವನು ದ್ಯಾಸಾಂತರ (ದೇಶಾಂತರ) ಹೋದ

ನೆಂಬ ದುಃಖ ನಿನ್ನನ್ನು ಕಾಡುತ್ತಿದೆ" ರತ್ನ ತಗ್ಗಿಸಿದ ತಲೆಯನ್ನು ಮೇಲೆತ್ತಿ–

"ನಿಜ ಸ್ವಾಮಿ ನಿಜ ಇದುವರೆಗೆ ಅವರಿಂದ ಒಂದೇ ಒಂದು ಪತ್ರ ಕೂಡಾ ಬಂದಿಲ್ಲ."

"ಹೌದು ಮಗಳೇ ಅವನು ಯಾವುದೋ ಒಂದು ಸಂದಿಗ್ಧತೆಯಲ್ಲಿ ಸಿಲುಕಿಕೊಂಡು ತೊಳಲಾಡುತ್ತಿದ್ದಾನೆ. ನಿನ್ನ ಅದೃಷ್ಟ ಚೆನ್ನಾಗಿದ್ದರೆ ಮರಳಿ ಬಂದರೂ ಬಂದಾನು."

"ಇಲ್ಲದಿದ್ದರೆ...?" ಅವಳ ಕಣ್ಣಾಲಿಗಳು ತುಂಬಿ ಬಂದವು.

"ಇಲ್ಲದಿದ್ದರೆ..ಇಲ್ಲದಿದ್ದರೆ? ಹಾಂ, ಅದು ನಿನ್ನ ಕೈಯಲ್ಲಿದೆ. ನಾಳೆಗೆ ಸರಿಯಾಗಿ ಏಳು ದಿನಗಳವರೆಗೆ ಈ ಮಹಾತಾಯಿಯ ಸೇವೆ ಮಾಡಿ ಅವಳನ್ನು ಒಲಿಸಿಕೊಂಡಲ್ಲಿ ನಿನ್ನ ಗಂಡನ ಬಂಧನ ತೊಲಗುವುದು. ನಿನ್ನ ಆಸೆಯು ನೆರವೇರುವುದು."

"ಅಷ್ಟಾದರೆ ಸಾಕು. ದೇವಿಯನ್ನು ಒಲಿಸಿಕೊಳ್ಳುವುದಕ್ಕೆ ನಾನು ಏನು ಮಾಡಬೇಕೆಂದು ತಿಳಿಸಿದ್ದಲ್ಲಿ..."

"ನಾಳೆ ಮುಂಜಾನೆ ಮಿದು ಮಡಿಯುಟ್ಟು ದೇವಿಯ ಆರಾಧನೆಗೆ ಒಂದಷ್ಟು ಹೂವು, ಹಣ್ಣುಕಾಯಿ ಕರ್ಪೂರದೊಂದಿಗೆ ಬಂದಲ್ಲಿ ಪೂಜೆಯ ವಿಧಾನ ಹೇಳಿ ಕೊಡುವೆನು," ಹೇಳುತ್ತಿದ್ದಂತೆ ಊದುಕಡ್ಡಿಯ ಚಿಟಿಕೆ ಬೂದಿ ತೆಗೆದು ಅವರಿಬ್ಬರ ಅಂಗೈ ಮೇಲೆ ಹಾಕಿದನು. ಇಬ್ಬರೂ ಅವನ ಕಾಲಿಗೆರಗಿ ಮನೆಯತ್ತ ನಡೆದರು. ರಂಗನಿಗೆ ತಲೆ ಮೇಲಿದ್ದ ಅರ್ಧ ಹೊರೆ ಇಳಿಸಿದಷ್ಟು ಹಗುರವಾಯಿತು. ಸಂತೋಷದಿಂದ ಶಿಳ್ಳು ಹಾಕುತ್ತಾ ಮಡದಿ ಹೋದ ದಾರಿಯನ್ನೇ ದಿಟ್ಟಿಸಿದನು.

ಬಾಗಿಲಲ್ಲಿ ಕಾದಿದ್ದ ಗಂಗಕ್ಕ ಸೊಸೆಯ ಕಾಲುಂಗುರದ ಸದ್ದಿಗೆ ಇತ್ತ ತಿರುಗಿದಳು.

"ಏನೇ ತುಷಾರ್ ಹಚ್ಚುವ ವೇಳೆಯಾದರೂ ಮನೆಗೆ ಬೇಗ ಬರಬೇಕೆನ್ನುವ ಗ್ಯಾನ ಬೇಡವೇನೆ ನಿನಗೆ?" ಅವಳ ಮಾತನ್ನು ಕೇಳಿಸಿಕೊಳ್ಳದ ರತ್ನ–

"ಅತ್ತೇ ನೀವು ಕೋಪಿಸಿಕೊಳ್ಳೋದಿಲ್ಲಾಂದ್ರೆ ಒಂದ್ಮಾತು ಹೇಳ್ತೇನೆ..."

"ಅದೆಂತದಪ್ಪಾ ಅಂತ ಮಾತು?"

"ಗಿರಿಜಳ ಒತ್ತಾಯಕ್ಕೆ ನಾನು ಮಂಟಪಕ್ಕೆ ಹೋಗಿದ್ದೆ..."

"ಏನಂದೆ! ಮಂಡೆ ಸಮ ಉಂಟಾ ಇಲ್ಲವಾ ನಿನಗೆ! ಅಲ್ಲ ಪಿತ್ತಗಿತ್ತ ಕೆದರಿದೆಯಾ? ಅಂತ ತುರ್ತು ಕಾರ್ಯ ನಿನಗೇನಿತ್ತು ಅಲ್ಲಿ?"

"ನನ್ನ ಮುಖ ನೋಡಿದೊಡನೆ ಆ ಸನ್ಯಾಸಿ ನಿಮ್ಮ ಮಗನ ವಿಷಯ ಏನೆಲ್ಲಾ ಹೇಳಿದರು ಗೊತ್ತಾ?"

"ಅವನು ಹೇಳಿದ ನೀನು ಕೇಳಿದೆ."

"ಹಾಗಲ್ಲತ್ತೆ ಅವರು ಯಾರದೋ ವಶವಾಗಿರುವರಂತೆ. ಆದ್ದರಿಂದ ಪತ್ರ ಬರೆಯುವುದಕ್ಕೂ ಅವರಿಂದಾಗುವುದಿಲ್ಲಂತೆ. ನಾನು ದಿನಾ ದೇವಿಯ ಪೂಜೆ ಮಾಡಿದಲ್ಲಿ ಮತ್ತೆ ಅವರು ನಮ್ಮ ಸ್ವಾಧೀನವಾಗುವರಂತೆ."

"ಸಾಕು ಸುಮ್ನಿರೆ. ಯಾರಿಂದಲೋ ಅವನಿಗೆ ರಂಗನ ವಿಚಾರ ತಿಳಿದಿರಬೇಕು. ಅದ್ಕೆ ಪೂಜೆಯ ಉನ್ನಾರ್ ಮಾಡಿದ್ದಾನೆ ಅಷ್ಟೆ ನೀನಿದಕ್ಕೆಲ್ಲ ಕಿವಿ ಕೊಡಬೇಡ."

"ಇಲ್ಲತ್ತೆ ಅವರ ಮಾತು ಸುಳ್ಳಲ್ಲ. ಬೇಕಾದ್ರೆ ಗಿರಿಜನ್ನ ಕೇಳಿ ನೋಡಿ. ಒಂದು ವೇಳೆ ನಿಮ್ಮಗನ ವಿಷಯ ಸ್ವಾಮಿಗೆ ತಿಳಿದಿದ್ದರೂ ನಾನೇ ಅವರ ಹೆಂಡತಿ ಎಂದು ಹ್ಯಾಗೊತ್ತು? ಅವರ್‍ಯಾಕೆ ನನ್ನತ್ರಲೇ ಅವರ ಬಗ್ಗೆ ಹೇಳಿದರು?"

ಗಂಗಕ್ಕನಿಗೂ ಈ ಮಾತು ನಂಬುವಂತಾಯಿತು.

"ಆಯ್ತಲ್ಲ ಇದುವರೆಗೆ ನೀನೊಬ್ಬಳು ಬಾಕಿಯಿದ್ದೆ. ಆಗಲಿ ಆಗಲಿ ಅದೇನು ಪೂಜೆಯೋ ಮಾಡಿ ಬಿಡು. ಅಂತೂ ನನ್ಮಗ ಚಂದದಲ್ಲಿ ಬಂದು ಮನೆಗೆ ಹೊಕ್ಕಿದರಾಯ್ತು." ಅತ್ತೆಯ ಒಪ್ಪಿಗೆಯಿಂದ ಸಮಾಧಾನವಾಯಿತು ರತ್ನಳಿಗೆ.

ಮರು ಮುಂಜಾನೆ ಅಳುತ್ತಿದ್ದ ಮಗುವನ್ನು ರಮಿಸುತ್ತಿದ್ದಳು ಗಿರಿಜೆ. ಪೂಜೆಯ ಸಾಮಾಗ್ರಿಗಳೊಂದಿಗೆ ಸಿದ್ಧಳಾಗಿ ಬಂದ ರತ್ನಳನ್ನು ಕಂಡು–
"ಮಗೂಗೆ ಜ್ವರ ಬರ್‍ತಾ ಇದೆಯಲ್ಲಾ ನಾ ಹ್ಯಾಗೆ ಬರೋದೆ ನಿನ್ನ ಜತೆ?"

"ಹೌದಾ ಹಾಗಾದ್ರೆ ನಾನೊಬ್ಳೇ ಹೋಗ್ತೇನೆ" ಎಂದು ಮಂಟಪದತ್ತ ಹೊರಟಳು.

ತನ್ನ ಮಾತನ್ನು ನಿಜವೆಂದೇ ನಂಬಿ ಬಂದ ಹೆಂಡತಿಯನ್ನು ನೋಡಿ ರಂಗನಿಗೆ ಹಿಡಿಯಲಾರದಷ್ಟು ಆನಂದವಾಯಿತು. ತುಂಟ ನಗು, ನಗುತ್ತಾ ಸನಿಹಕ್ಕೆ ಬಂದು ಕುಳಿತನು. ಆಚೀಚೆ ನೋಡಿ ಮೆಲ್ಲ ಅವಳ ಕೈ ಹಿಡಿದು ತಲೆ ನೇವರಿಸಿದನು.

ಗಾಭರಿಯಾದ ರತ್ನ 'ಅಯ್ಯೋ ಎಂತಾ ಮೋಸ ವಾಯ್ತು; ಅತ್ತೆ ಬೇಡ ಎಂದಾಗಲೆ ಸುಮ್ಮನಿರ ಬೇಕಿತ್ತು. ಆತುರಪಟ್ಟು ಹೀಗೆ ಒಬ್ಬಳೆ ಬರಲೂ ಬಾರದಿತ್ತು.' ರತ್ನ ತನ್ನಲ್ಲೆ ಒದ್ದಾಡಿದಳು.

"ಸ್ವಾಮಿ ಹೊತ್ತಾಯ್ತು ಪೂಜೆ ಪ್ರಾರಂಭಿಸಿ ಬಿಡ್ತೀರಾ?" ಅವನಿಂದ ಕೈ ಬಿಡಿಸಿಕೊಳ್ಳುತ್ತಾ ಹೇಳಿದಳು.

"ಈಗಲೆ ಏನವಸರ ನಿನಗೆ? ಮೊದ್ಲು ಈ ಪೂಜೆಯಾಗಲಿ" ಎಂದ ಅವಳ ಕೆನ್ನೆ ಸವರುತ್ತ ಭಯದಿಂದ ಕೂಗಿಕೊಳ್ಳಲೆಂದು ಬಾಯಿ ತೆರೆಯುವಷ್ಟರಲ್ಲಿ "ಗದ್ದಲ ಮಾಡ್ಬೇಡ್ವೆ ರತ್ನಾ, ಇಲ್ನೋಡು" ಎಂದು ತನ್ನ ಗಡ್ಡವನ್ನೊಮ್ಮೆ ಕಳಚಿ ಮತ್ತೆ ಸಿಕ್ಕಿಸಿದನು.

"ಅಯ್ಯಯ್ಯೋ ಇದೇನಿದು ನಿಮ್ಮವಸ್ಥೆ? ನಾವೇನು ಅನ್ಯಾಯ ಮಾಡಿದೆವೆಂದು ಹೀಗೆ ನಡು ನೀರಿನಲ್ಲಿ ಕೈ ಬಿಟ್ಟರಿ? ಇಂತ ವೈರಾಗ್ಯವಾದರೂ ಯಾಕೆ ಬಂತು ನಿಮಗೆ? ಅಯ್ಯೋ ದೇವ್ರೆ ನಿಮ್ಮ ಸುದ್ದಿ ವರ್ತಮಾನ ವಿಲ್ಲವೆಂದು ಅತ್ತೆ ಪಾಪ ಎಷ್ಟು ಪೇಚಾಡ್ತಿದ್ದಾರೆ ಗೊತ್ತಾ? ಆದ್ರೆ ಆ ಹೆತ್ತ ಕರುಳಿಗೆ ನೀವು ಈ ರೀತಿ ದ್ರೋಹ ಮಾಡಬಾರದಿತ್ತು." ರತ್ನ ಬಿಕ್ಕಿ ಬಿಕ್ಕಿ ಅತ್ತಳು. ರಂಗ ಅವಳನ್ನು ಸಮಾಧಾನ ಪಡಿಸುತ್ತಾ—

"ನೋಡು, ಆಳುತ್ತಾ ಕೂತರೆ ಕೆಲಸ ಕೆಟ್ಟು ಹೋಗುತ್ತದೆ. ಇದು ಬರೀ ವೇಷವಲ್ಲದೆ ಮತ್ತೇನಲ್ಲ. ಇದರಿಂದಾಗಿ ನಾನು ಪಟ್ಟ ಪಾಡು ಅಷ್ಟಿಷ್ಟಲ್ಲ. ಎಲ್ಲವನ್ನೂ ಮನೆಗೆ ಬಂದ ಬಳಿಕ ಹೇಳುತ್ತೇನೆ. ಈ ಸಂಕಟದಿಂದ ಮುಕ್ತಿ ಹೊಂದಲು ನಿನ್ನ ಸಹಾಯವೇ ಮುಖ್ಯ ನನಗೆ. ಹಾಂ, ಒಂದ್ಮಾತು ಮರೀಬೇಡ. ಇದನ್ನೆಲ್ಲ ಅಮ್ಮನಿಗಾಗಲೀ ಇತರಿಗಾಗಲೀ ಹೇಳಿದರೆ ನನ್ನಾಣೆ. ಬೆಳಗಿನ ಹೊತ್ತು ಇಲ್ಲಿ ಜನಸಂಚಾರ ಕಡಿಮೆ ಇರುವುದರಿಂದ ನೀನು ದಿನಾ ಇದೇ ವೇಳೆಗೆ ಬಂದು ಬಿಡು. ಅಂದಾಗೆ ನನ್ನ ಮೈಮೇಲಿನ ಬಟ್ಟೆ ನೋಡು ಎಲ್ಲ ಕೊಳಕಾಗಿ ನಾರುತ್ತಿದೆ. ನಾಳೆ ಬರುವಾಗ ಒಂದು ತುಂಡು ಸಾಬೂನು, ಒಂದು ಕಾಚಾ ಮತ್ತೊಂದು ಕತ್ತಿಯನ್ನೂ ತರಲು ಮರೆಯಬೇಡ."

"ಕತ್ತಿ? ಕತ್ತಿಯಾಕೆ ನಿಮಗೆ?" ಸೆರಗಿನಿಂದ ಕಣ್ಣು ಒರೆಸುತ್ತಿದ್ದ ರತ್ನ ಕೇಳಿದಳು.




"ನಾಳೆ ನಿನಗೇ ಗೊತ್ತಾಗುತ್ತದೆ ಬಿಡು. ಹಾಂ ಅಂದಾಗೆ ಹೇಳುವುದಕ್ಕೆ ಮರೆತೆ. ಮನೆ ಊಟ, ಮೀನಿನ ಸಾರು ತಿನ್ನದೆ ನಾಲಗೆ ಮರಕಟ್ಟಿ ಹೋಗಿದೆ. ಬರುವಾಗ ಅದನ್ನೂ ತರ್ತಿ ತಾನೆ?" ಯಾರಾದರೂ ಭಕ್ತರು ಬಂದು ಬಿಟ್ಟಾರು ಎನ್ನುವ ಹೆದರಿಕೆಯಿಂದಾಗಿ ರಂಗ ಸೂಕ್ಷ್ಮವಾಗಿ ಮಡದಿಗೆ ವಿಷಯ ತಿಳಿಸಿದ. "ಯಾವ ಸಂಗ್ತಿಯನ್ನೂ ಅಮ್ಮನಿಗೆ ಈಗಲೆ ಹೇಳಬೇಡ ನನ್ನನ್ನು ಕೊಂದು ಬಿಟ್ಟಾಳು ಜೋಕೆ!" ಮತ್ತೊಮ್ಮೆ ಅವಳಿಗೆ ಎಚ್ಚರಿಕೆಯನ್ನಿತ್ತ.

"ಈ ಮಾತು ಹಾಗಿರಲಿ, ಊರವರಿಗೆ ತಿಳಿಯದಂತೆ ಗುಟ್ಟು ಮಾಡುವುದೇನು ದೊಡ್ಡ ಸಂಗತಿಯಲ್ಲ. ಆದ್ರೆ ಅತ್ತೆಯವರ ವ್ಯಥೆ ನನ್ನಿಂದ ನೋಡಲಾಗುವುದಿಲ್ಲವಲ್ಲಾ?"

"ಅಮ್ಮನ ಮನಸ್ಸು ನನಗೂ ಅರ್ಥವಾಗುತ್ತದೆ ರತ್ನ. ನಾಳೆ ಒಂದು ನೀಲಿ ಬಣ್ಣದ ಕಾಗದವನ್ನು ತಂದು ಕೊಡು. ಅದರಲ್ಲಿ ಎರಡಕ್ಷರ ಬರೆದು ನಿನ್ನ ಕೈಯಲ್ಲೇ ಕೊಡುತ್ತೇನೆ. ಪೋಸ್ಟಿಗೆ ಹಾಕಿ ಬಿಡು

ಸರಿ ತಾನೆ?"

"ಒಳ್ಳೆ ಉಪಾಯ ಹಾಗೆ ಮಾಡಿ. ಮತ್ತೆ... ಹೇಗೂ ನಾಳೆ ಪೂಜೆಗೆ ಬರ್‍ತೇನಲ್ಲಾ ಆಗ ನೀವು ಹೇಳಿದ್ದನ್ನೆಲ್ಲ ಮರೆಯದೆ ತರ್‍ತೇನೆ." ತುಂಟತನದಿಂದ ಹೇಳಿದಳು. ಬಳಿಕ ಸ್ವಲ್ಪ ಹೊತ್ತು ಆ ಸುದ್ದಿ ಈ ಸುದ್ದಿ ಮಾತನಾಡಿ ಅಲ್ಲಿಂದ ಹೊರಟಳು.

ಸೊಸೆಯ ಸಂಭ್ರಮ ಕಂಡ ಗಂಗಕ್ಕ "ಈ ಮಟಮಟ ಮಧ್ಯಾನ್ನದ ತನಕ ಅದೆಂತದ್ದೆ ನಿನ್ನ ಪೂಜೆ?"

"ಅತ್ತೇ ಇನ್ನೆರಡು ದಿನದೊಳಗೆ ನಿಮ್ಮಗನ ಪತ್ರ ಬರುತ್ತದೆಯಂತೆ ಹಾಗಂತ ಸ್ವಾಮಿ ಹೇಳಿದರು ಗೊತ್ತಾಯ್ತಾ?"

"ಸ್ಸರಿ ನೀನಂದಂತೆ ಎರಡೇ ದಿನದೊಳಗೆ ರಂಗ ಕ್ಷೇಮವಾಗಿದ್ದಾನೆ ಎನ್ನುವ ಪತ್ರ ಬಂದಲ್ಲಿ ನಾನೂ ಆ ಸನ್ಯಾಸಿ ಮಾತಿನಲ್ಲಿ ನಂಬಿಕೆ ಇಡ್ತೇನೆ. ಇಲ್ಲದೆ ಹೋದ್ರೆ..." ಅತ್ತೆಯ ಘರ್ಜನೆಗೆ ರತ್ನ ನಡುಗಿದಳು.

ಗಿರಿಜಳ ಮಗು ಹುಷಾರಾಗಿರುವುದರಿಂದ ಅವಳಿಗೆ ತಿಳಿಯದಂತೆ ಮಾರಣೆ ದಿನ ಮನೆ ಬಿಟ್ಟಳು ರತ್ನ. ತಂದಿದ್ದ ವಸ್ತಗಳನ್ನು ಒಂದೊಂದಾಗಿ ತೆಗೆದು ಗಂಡನ ಮುಂದಿರಿಸಿದಳು. ಮೊತ್ತಮೊದಲು ಅವನು ಕತ್ತಿಯನ್ನು ಕೈಗೆತ್ತಿಕೊಂಡು ದುಡ್ಡಿನ ಡಬ್ಬಿಯ ತಳಾಭಾಗದಲ್ಲಿ ತೂತು ಮಾಡಿದನು. ಆದರಿಂದ ಸಾಧ್ಯವಾದಷ್ಟೂ ನೋಟುಗಳನ್ನು ಹೊರತೆಗೆದು ಮಡದಿಯ ಕೈಯಲ್ಲಿರಿಸಿ,

"ತಗೊ ಇದೆಲ್ಲ ನನ್ನ ಇಷ್ಟು ದಿನದ ಸಂಪಾದನೆ. ಯಾರಿಗೂ ತಿಳಿಯದಂತೆ ಮನೆಯಲ್ಲಿ ಜೋಪಾನವಾಗಿ ತೆಗೆದಿರಿಸು." ರತ್ನ ಕೂಡಲೆ ಅವುಗಳನ್ನು ಮಡಚಿ ಮಡಚಿ ರವಿಕೆಯೊಳಗೆ ಬಚ್ಚಿಟ್ಟುಕೊಂಡಳು. ಅನಂತರ ಅಕ್ಕಿರೊಟ್ಟಿ ಮುರಿದು ಮೀನಿನ ಸಾರಿನಲ್ಲಿ ಅದ್ದಿ ಬಾಯಿ ಗಿರಿಸುತ್ತಿದ್ದ ಗಂಡನೊಡನೆ ಪತ್ರ ಬರೆದು ಕೊಡುವಂತೆ ಅವಸರ ಪಡಿಸಿದಳು. ಪೆನ್ಸಿಲು ಕಾಗದ ಹಿಡಿದು ರಂಗ ಬರೆಯಲು ಹೋದರೆ ಒಂದೇ ಒಂದು ಅಕ್ಷರವೂ ನೆನಪಿಗೆ ಬಾರದು. ಕೊನೆಗೆ ನಾಲ್ಕನೆ ತರಗತಿ ಓದಿದ್ದ ರತ್ನ ಎರಡಕ್ಷರ ಬರೆದು ನಾಲಗೆ ಎಂಜಲಿನಿಂದ ಕಾಗದವನ್ನು ಅಂಟಿಸಿದಳು.

ಸಂಜೆಯಾಗುತ್ತಿದ್ದಂತೆ ಸೋಂಪನ ಸವಾರಿ ಇತ್ತ ಚಿತ್ತೈಸಿತು. ಇವನು ಬಂದನೆಂದರೆ ಏನು




ಎಲ್ಲರೂ ಬೆಂಕಿ ಬಿದ್ದಿದೆ ಅಂತ ಫೂಲ್ ಮಾಡ್ತಾ ಇದ್ರೆ ನೀವು ಇಲ್ಲಿ ಬಾಂಬ್ ಇದೆ ಅಂತ ಫೂಲ್ ಮಾಡ್ತಿರಲ್ರಿ... ಹ್ಹ... ಹ್ಹ... ಹ್ಹಾ...

ಗಂಡಾಂತರ ತಂದನೋ ಎಂದು ಎದೆ ದಡದಡ ಎನ್ನುವುದು ರಂಗನಿಗೆ. ಆದರೆ ಪ್ರತಿಸಲವೂ ದೇವಿಗೆ ದೊಡ್ಡ ಮೊತ್ತದ ಕಾಣಿಕೆ ಹಾಕದ ವಿನಃ ಅವನು ಹಿಂದಿರುಗುವವನಲ್ಲ ಎನ್ನುವ ಸಮಾಧಾನವೂ ಇತ್ತು. "ಸ್ವಾಮಿೂ ಗ್ರಂಥ ವಾಚನಕ್ಕೆ ಎಲ್ಲಿ ಏರ್ಪಾಡು ಮಾಡಲಿ? ಊರವರೆಲ್ಲರೂ ಬರಬಹುದಾದ್ದರಿಂದ ಇಲ್ಲಿ ಜಾಗ ಸಾಲದೆನಿಸುತ್ತದೆಯಲ್ಲಾ ಅದಕ್ಕೆ ಮೈದಾನಿನಲ್ಲೆ ಚಪ್ಪರ ಹಾಕಿಸಿದರೆ ಹೇಗೆ? ಎಂದು ನಿಮ್ಮ ಇಭಿಪ್ರಾಯ ಕೇಳಲು ಬಂದೆ." ವೈರಾಗ್ಯದತ್ತ ವಾಲುತ್ತಿರುವ ಈ ಉಗ್ರರೂಪಿಯ ಆಸಕ್ತಿ ಕಂಡು ಅಚ್ಚರಿಯಾಯಿತು ರಂಗನಿಗೆ.

'ಮಗ ದಾರಿಗೆ ಬಂದ' ಎಂದೆನಿಸಿ ನಗುವೂ ಬಂತು.

"ಭಕ್ತನೆಂದರೆ ನೀನೇ ಸರಿಯಪ್ಪಾ. ನಿನ್ನ ಇಚ್ಛೆಗೆ ನನ್ನ ವಿರೋಧವಿಲ್ಲ. ಈ ಪುಣ್ಯ ಕಾರ್ಯವು ನಿನ್ನ ಇಷ್ಟದಂತೆ ನೆರವೇರಲಿ. ದೇವಿಯ ಅನುಗ್ರಹವೂ ನಿನಗಿರಲಿ." ಹರಸಿ ಕಳಿಸಿದನು.

ಅಂಗಳದಲ್ಲಿ ಮಡಲು ಹೆಣೆಯುತ್ತಾ ಕುಳಿತಿದ್ದ ಗಂಗಕ್ಕ ಹೆಜ್ಜೆಯ ಸಪ್ಪಳಕ್ಕೆ ತಲೆ ಎತ್ತಿದಳು. ಅಂಚೆಯ ನು ತಡಮೆ ಹತ್ತಿ ಇವಳತ್ತಬರುತ್ತಿದ್ದ. ಎಂದೂ ಯಾರಿಂದಲೂ ಅವಳಿಗೆ ಪತ್ರ ಬಂದ ನೆನಪಿಲ್ಲ. ಈಗ ತೆಗೆದುಕೊಳ್ಳುವುದೋ

ಬೇಡವೊ ಎನ್ನುವ ಅನುಮಾನದಿಂದ– "ಅಮ್ಮಾ ರತ್ನಾ... ಕಾಗ್ದ ಯಾರ್ದೂಂತ ಸ್ವಲ್ಪ ನೋಡಮ್ಮಾ" ಸೊಸೆಯನ್ನು ಕರೆದು ಹೇಳಿದಳು. ಒಳಬಾಗಿಲಲ್ಲಿ ನಿಂತು ಇವೆಲ್ಲವನ್ನೂ ಗಮನಿಸುತ್ತಿದ್ದ ರತ್ನ ಏನೂ ಗೊತ್ತಿಲ್ಲದಂತೆ ಹೊರಗೋಡಿ ಬಂದಳು. ಪತ್ರ ಒಡೆದವಳೇ "ಅತ್ತೇ... ಇದು ನಿಮ್ಮಗಂದು ಕಾಗ್ದ!"

"ಆಂ...! ಹೌದೆ? ಏನು ಬರ್ದಿದ್ದಾನೆಂದು ಓದು ಮಗಾ"

"ನಾನು ಸುಕದಲ್ಲಿ ಇದೆನೆ ಉರಿಗೆ ಬೇಗ ಬರುತ್ತೇನೆ–ಇಷ್ಟೆ ಬರ್ದಿದ್ದಾರತ್ತೆ."

ರತ್ನ ತಾನು ಬರೆದು ಅಂಚೆಗೆ ಹಾಕಿದ್ದ ಪತ್ರವನ್ನೆ ಅತ್ತೆಗೆ ಓದಿ ಹೇಳಿದಳು.

ಗಂಗಕ್ಕ ದಂಗಾಗಿ ಹೋದಳು. ನಿಜಕ್ಕೂ ಈ ಸ್ವಾಮಿ ಕಾರ್ನಿಕದವರಪ್ಪಾ. ಹೇಳಿದಂತೆ ಎರಡೇ ದಿನದಲ್ಲಿ ರಂಗನ ಪತ್ರ ಬಂತಲ್ಲಾ? ದೇವರು ದೊಡ್ಡವ. ರತ್ನಾ...ನಾಳೆ ನಾವಿಬ್ರೂ ಜತೇಲೆ ಪೂಜೆಗೆ ಹೋಗೋಣಮ್ಮ. ನನಗೂ ಸ್ವಾಮಿಯನ್ನು ನೋಡಬೇಕೆನಿಸುತ್ತದೆ. ರತ್ನಳಿಗೆ ಎದೆಗುಂಡಿಗೆ ನಿಂತಂತಾಯಿತು. ಉಪಾಯವಾಗಿ ಅವಳು–"ಅದೇಗಾಗುತ್ತದೆ? ನಾನೊಬ್ಬಳೇ ಹೋಗಿ ಪೂಜೆ ಮಾಡಬೇಕೆಂದು ಅಪ್ಪಣೆಯಾಗಿದೆಯಲ್ಲಾ ಅತ್ತೇ?"

"ಹಾಗೇನು? ಸರಿಯಮ್ಮ ನೀನು ಹೋಗಿ ಬಾ. ಅಂದಾಗೆ ರತ್ನಾ... ನೀನೂ ಅವನಿಗೊಂದು ಕಾಗ್ದ ಬರಿಯಮ್ಮಾ, ನಾನು ಹೇಳಿದೆ ಅಂತ ಹೇಳು. ಅದೇನೆಂದರೆ ಅವನು ಎರಡು ದಿನದ ಮಟ್ಟಿಗಾದರೂ ರಜೆ ಹಾಕಿ ಇಲ್ಲಿಗೆ ಬರಲಿ. ನಾವಿಬ್ರೂ ಒಟ್ಟಿಗೆ ಹೋಗಿ ಸ್ವಾಮಿಯ ದರ್ಶನ ಪಡೆದು ಬರುತ್ತೇವೆ. ಪಾಪ ರಂಗನಿಗೂ ದೊಡ್ಡವರನ್ನು ಕಾಣುವ ಯೋಗ ಸಿಗಲಿ. ನೀನು ಹಾಗೇ ಬರಿಯಮ್ಮ."

"ಆಗಲಿ ಇವತ್ತೇ ಬರಿತೇನೆ." ನಗು ತಡೆದುಕೊಳ್ಳುತ್ತ ಹೇಳಿದಳು.

ಮನೆಯಲ್ಲಿ ನಡೆದ ಮಾತನ್ನು ವರದಿ ಒಪ್ಪಿಸಿದಳು. ರತ್ನ ಗಂಡನಿಗೆ. ತಾಯಿಯ ಅಂತಃಕರಣ ಕಂಡು ನೊಂದಿತು ಅವನ ಹೃದಯ. "ಮನೆಗೊಬ್ಬ ಗಂಡು ಮಗನಾಗಿದ್ದು ನಾನೇನು ನೆರವಾದೆ ಅಮ್ಮನಿಗೆ? ಇನ್ನಾದರೂ ಸೋಮಾರಿತನಕ್ಕೆ ಅವಕಾಶ ಕೊಡದೆ ಬದುಕುವ ದಾರಿ ನೋಡಬೇಕು. ಗೂಡಂಗಡಿಯನ್ನಾದರೂ ತೆರೆದು ಅಮ್ಮನಿಗೆ ದುಡಿಮೆಯಿಂದ ವಿಶ್ರಾಂತಿ ಒದಗಿಸಬೇಕು." ತನ್ನ ಭವಿಷ್ಯದ ಬಗ್ಗೆ ಮಡದಿಯೊಂದಿಗೆ ಚರ್ಚಿಸಿದ ರಂಗ.

ಪೂಜೆಯ ನೆಪದಲ್ಲಿ ಮಂಟಪಕ್ಕೆ ಬರುತ್ತಿದ್ದ ರತ್ನ ದಿನಾ ದುಡ್ಡು ಒಯ್ದು ಪೆಟ್ಟಿಗೆಯಲ್ಲಿ ಭದ್ರವಾಗಿರಿಸ ತೊಡಗಿದಳು. ಡಬ್ಬಿ ಪೂರ್ತಿ ಖಾಲಿಯಾದಾಗ ರಂಗನಿಗೂ ನಿರಾತಂಕವಾಯಿತು. 'ಇನ್ನೂ ನಾನಿಲ್ಲಿಂದ ಪಲಾಯನದ ದಾರಿ ನೋಡದಿದ್ದಲ್ಲಿ ಸೋಂಪಾನೆದುರು ಸೋಲಬೇಕಾಗುತ್ತದೆ' ಯೋಚನೆ ಬಂದೊಡನೆ ಮಡದಿಯನ್ನು ಕರೆದು– "ನೋಡು ರತ್ನಾ ನಾಳೆ ಬೆಳಗಾತ ನನ್ನ ನಾಟಕಕ್ಕೆ ಮುಕ್ತಾಯ ಹಾಕಬೇಕೆಂದಿದ್ದೇನೆ. ನೀನು ಸುಮಾರು ಮಧ್ಯಾಹ್ನದ ಹೊತ್ತಿಗೆ ನನ್ನದೊಂದು ಜತೆ ಬಟ್ಟೆ ಮತ್ತು ದುಡ್ಡಿನೊಂದಿಗೆ ಸೋಮೆಸರ ದೇವಸ್ಥಾನದ ಬಳಿ ಬಂದು ನಿಲ್ಲು." ಅವನು ಮಾತು ಪೂರೈಸುವಷ್ಟರಲ್ಲಿ ಇತ್ತ ಕಡೆಗೆ ಬರುತ್ತಿದ್ದ ಸೋಂಪನತ್ತ ಬೆರಳು ತೋರಿಸಿದಳು ರತ್ನ. ತಕ್ಷಣ ರಂಗ ಈಗಷ್ಟೆ ಪೂಜೆ ಮುಗಿಸಿದಂತೆ ನಟಿಸಿ ಅವಳ ಕೈಗೆ ಪ್ರಸಾದ ಹಾಕುವ ನಾಟಕವಾಡಿದ. ಇದನ್ನು ಕಂಡ ಸೋಂಪ ತಾನೂ ಭಕ್ತಿಯಿಂದ ಕೈ ಮುಂದೆ ಮಾಡಿದ. ಅನಂತರ– "ಸ್ವಾಮಿ...ನಾಡದು ಸ್ವಾಮಾರ ಊರ ದೈಯ್ಯ ಜುಮಾದಿ ಸ್ಥಾನದಲ್ಲಿ ಕೋಲವಿದೆಯಲ್ಲಾ ಅದರ ಮರುದಿನವೆ ಗ್ರಂಥವಾಚನವನ್ನಿಟ್ಟು ಕೊಂಡರೆ ಹೇಗೆ? ಎಂದು ನಿಮ್ಮಲ್ಲಿ ಕೇಳಿ ನೋಡೋಣವೆನಿಸಿತು. ಅದಕ್ಕೆ..." ಎಲೆಯಡಿಕೆ ಮೆದ್ದು ಕೆಂಪಾಗಿದ್ದ ಸಾಹುಕಾರನ ನಾಲಗೆ, ಕೆನ್ನೆಗೆ ಅಂಟಿಸಿದ್ದ ವೀಳ್ಯದ ತುದಿಯನ್ನೇ ನೋಡುತ್ತಿದ್ದ ರಂಗ "ಅಷ್ಟೊಂದು ಆತುರವಿದ್ದಲ್ಲಿ ನೀನೇ ಗ್ರಂಥವಾಚನ ಪ್ರಾರಂಭಿಸಿ ಬಿಡಯ್ಯಾ ಯಾರು ಬೇಡಂತಾರೆ? ನಿಂತ ಕಾಲಲ್ಲೇ ಎಲ್ಲವೂ ಆಗಬೇಕೆಂದರೆ ನನ್ನಿಂದಾಗದು." ಇನ್ನು ನಿನ್ನ ಹಂಗ್ಯಾಕೊ? ಎನ್ನುವಂತಿತ್ತು ಅವನ ಮಾತಿನ ಅರ್ಥ. ಸೋಂಪ ಪೆಚ್ಚಾದ. ದೇವಿಗೆ ಅಡ್ಡ ಬೀಳುವುದನ್ನು ಮರೆತು ಬಂದಂತೆ ಹಿಂದಿರುಗಿದ. ಅಂಗರಕ್ಷಕರ ತಂಡ ಹಿಂದಿನಿಂದ ಹಿಂಬಾಲಿಸಿತು.

ಅಷ್ಟಿಷ್ಟು ಸೂಲಗಿತ್ತಿತನದ ಅರಿವಿದ್ದ ಗಂಗಕ್ಕ ಅಂದು ಬೆಳಗ್ಗೆಯೆ ಬಿಕ್ಕ ಮೇಸ್ತನ ಹೆಂಡತಿಯ ಹೆರಿಗೆಗೆಂದು ಹೋಗಿದ್ದಳು. ಅತ್ತೆ, ಮನೆಯಲ್ಲಿ

ಇಲ್ಲದಿರುವುದು ರತ್ನಳಿಗೆ ಅನುಕೂಲವಾಯಿತು. ಅಂಗಳದ ಹಲಸಿನ ಮರದಿಂದ ನಾಲ್ಕಾರು ಎಲೆಗಳನ್ನು ಕೊಯ್ದಳು. ಗೋರಟೆ, ದಾಸವಾಳ ಹೂಗಳೊಂದಿಗೆ ಬಾಳೆ ಹಣ್ಣು, ತೆಂಗಿನಕಾಯಿ ಹೋಳುಗಳನ್ನು ಎಲೆಗಳಿಗೆ ಹಂಚಿ ಚಿಟಿಕೆ ಅರಶಿನ, ಕುಂಕುಮವನ್ನು ಹಚ್ಚಿದಳು. ಒಂದು ಪಾಲು ಅತ್ತೆಗೆಂದು ತೆಗೆದಿರಿಸಿ ಅಕ್ಕಪಕ್ಕದ ಮನೆಗಳಿಗೆ ಹೋದಳು.

"ತಕೊಳ್ಳಿ ಪ್ರಸಾದ ಇವತ್ತಿಗೆ ನನ್ನ ಪೂಜೆ ಮುಗಿಯಿತು"

"ಹೌದೆ ಯಾವಾಗ ಬರ್ತಾನಂತೆ ರಂಗಣ್ಣ?" ಗಿರಿಜ ಹೇಳಿದಳು.

"ನಾಡದು ಸಂಕ್ರಾಂದಿಯ ಒಳಗೆ ಬರ್ತಾರಂತ ಸ್ವಾಮಿ ಹೇಳಿದರು."

"ಅಂದರೆ...ಇಗಾದಿಗೆ ರಂಗಣ್ಣ ಇಲ್ಲಿದ್ದಾನನ್ನು. ಆಗಬಹುದಪ್ಪಾ ಈ ಸ್ವಾಮಿಯ ಕಾರ್ನಿಕ!" ಬೆರಗಿನಿಂದ ಹೇಳಿದ ಗೆಳತಿಯ ಮಾತಿಗೆ ಮುಗುಳು ನಕ್ಕಳು ರತ್ನ.

ಅಂದು ನಸುಕಿನಲ್ಲೆ ಎದ್ದ ರಂಗ ಬಯಲ ಕಡೆಗೆ ಹೊರಟ. ಜತೆಯಲ್ಲಿ ದುಡ್ಡು ತೆಗೆದ ಖಾಲಿ ಡಬ್ಬೆಯನ್ನು ಒಯ್ದು ಅಲ್ಲಿ ಬಿಸಾಡಿ ಬಂದ. ಬೆಣಚುಕಲ್ಲಿನ ಮೇಲಿದ್ದ ಹೂಗಳನ್ನು ಚಲ್ಲಾಪಿಲ್ಲಿ ಮಾಡಿ ಕಲ್ಲನ್ನು ದೂರಕ್ಕೆ ಎಸೆದು ಬಿಟ್ಟನು. ಬಳಿಕ ಮಂಟಪದ ಮೆಟ್ಟಲ ಮೇಲೆ ಗಲ್ಲಕ್ಕೆ ಕೈ ಊರಿ ಸುಮ್ಮನೆ ಕುಳಿತುಕೊಂಡ. ಎಂದಿನಂತೆ ಆ ದಾರಿಯಾಗಿ ಹೋಗುತ್ತಿದ್ದವರೆಲ್ಲ ಸ್ವಾಮಿಗೆ ಕೈ ಮುಗಿದರು. ಆದರೆ ಅವನಿಂದ ಪ್ರತಿಕ್ರಿಯೆ ಬಾರದಿದ್ದಾಗ ಅವರೆಲ್ಲರಿಗೆ ಬಹಳ ಕೆಡುಕೆನಿಸಿತು. ಈ ಸುದ್ದಿ ಕ್ಷಣದಲ್ಲಿ ಊರಿಗೆಲ್ಲ ಹರಡಿತು. "ಯಾಕೆ? ಏನಾಯಿತು?" ಎಂದು ಕೇಳುತ್ತ ಒಬ್ಬೊಬ್ಬರಾಗಿ ಮಂಟಪದತ್ತ ನಡೆದರು. ಸಾಹುಕಾರ ಸೋಂಪನೂ ಧಾವಿಸಿ ಬಂದನು. ಯಾರನ್ನೂ ಕಣ್ಣೆತ್ತಿ ನೋಡದ ಸನ್ಯಾಸಿಯ ಮುಖ ಕೋಪದಿಂದ ಕುದಿಯುತ್ತಿತ್ತು.

"ಸ್ವಾಮಿ... ನಿಮ್ಮ ಈ ತರದ ಮೌನಕ್ಕೆ ಕಾರಣವೇನೆಂದು ಕೇಳಬಹುದೆ ನಾನು? ಯಾರು ನಿಮಗೆ ಏನು ಅಪಚಾರ ಮಾಡಿದರೆಂದು ಸೂಚಿಸಿದ್ದಲ್ಲಿ..." ತ್ಯಾಂಪಣ್ಣ ಹೇಳಿದ "ಹೂಂ, ಅಪಚಾರವಂತೆ ಅಪಚಾರ! ಎಲ್ಲಿ ನಿರ್ಮಲ ಹೃದಯಗಳಿಲ್ಲವೊ ಅಲ್ಲಿ ನನ್ನಂತವರಿಗೆ ಕವಡೆಯಷ್ಟು ಬೆಲೆಯೂ ಇರಲಾರದೆಂದು ನನಗೊತ್ತು. ಆದ್ದರಿಂದ ಇನ್ನು ಮುಂದಕ್ಕೆ ನಾನಿಲ್ಲಿರುವುದು ಕ್ಷೇಮವಲ್ಲ. ಇಂದು ಇಲ್ಲಿದ್ದರೆ ನಾಳೆ ಇನ್ನೊಂದು ಊರಿನ ದಾರಿ ನಮಗಿದ್ದೇ ಇದೆ." ಮಾತನಾಡುತ್ತಾ ಕುಳಿತಲ್ಲಿಂದ ಮೇಲೆದ್ದ ರಂಗ. "ಸ್ವಾಮಿ ನಿಮ್ಮಂತ ಮಹಾನುಭಾವರನ್ನು ನಮ್ಮೆಲ್ಲರ ಕಲ್ಯಾಣಕ್ಕಾಗಿಯೇ ದೇವರು ಕಳಿಸಿರುವಾಗ ನೀವು ನೊಂದುಕೊಂಡು ಹೊರಟರೆ ಅದು ಊರಿಗೆ ಕೇಡಲ್ಲವೆ ಸ್ವಾಮಿ?" ನೆರೆದಿದ್ದವರೆಲ್ಲ ಒಟ್ಟಾಗಿ ದೈನ್ಯದಿಂದ ಕೇಳಿಕೊಂಡರು.

"ಹಾಗಾದರೆ ನನ್ನ ಪ್ರಶ್ನೆಗೆ ಉತ್ತರ ಕೊಡಿ ನೋಡೋಣ? ಇದುವರೆಗೆ ಭಕ್ತಿಭಾವದಿಂದ ನಾನು ಉಪಾಸನೆಗೈಯುತ್ತಿದ್ದ ದೇವಿಯ ವಿಗ್ರಹವೆಲ್ಲಿದೆ ಹೇಳಿ? ಭಕ್ತರಿಂದ ಸಂಗ್ರಹವಾಗಿದ್ದ ಕಾಣಿಕೆಯನ್ನು ದೇವಿಯ ಮಂದಿರಕ್ಕಾಗಿ ಉಪಯೋಗಿಸಬೇಕೆಂದಿದ್ದೆನಲ್ಲಾ ಎಲ್ಲಿ ಹೋಯಿತು ಆ ಹಣದ ಡಬ್ಬೆ ಹೇಳಬಲ್ಲಿರಾ? ಯಾಕೆ ಸುಮ್ಮನಿದ್ದೀರಿ ನೀವೆಲ್ಲ? ಮಾತನಾಡಲು ಬಾಯಿಲ್ಲವೆ? ಛಿ ಛಿ, ನಿಮ್ಮೂರಲ್ಲಿ ನನಗೆ ದೊರೆತ ಗೌರವವೆಂದರೆ ಇದೇ ಅಲ್ಲವೇನು?"

"ಆದರೆ ಏನೇ ಆಗಲಿ ಸ್ವಾಮಿ ನೀವು ಮಾತ್ರ ಊರುಬಿಟ್ಟು ಹೋಗಬೇಡಿ ದಮ್ಮಯ್ಯ. ಕದ್ದು ಹೋಗಿರುವುದನ್ನೆಲ್ಲ ನಾವು ವಂತಿಗೆ ಹಾಕಿ ಕೊಡುತ್ತೇವೆ ಸ್ವಾಮಿ. ಮತ್ತೆ ಕಳ್ಳ ಯಾರೆಂದು ರುಜುವಾತಾದಲ್ಲಿ ನಾವೇ ಅವನಿಗೆ ತಕ್ಕ ಶಾಸ್ತಿ ಮಾಡುತ್ತೇವೆ."

"ಇದು ಯಾರ ಕೆಲಸವೆಂದು ನನಗೊತ್ತು. ಅವನು ಇಲ್ಲೇ ಇದೇ ಗುಂಪಿನಲ್ಲಿ ಇರುವುದೂ ಗೊತ್ತು. ಹಾಗೆಂದು ನಾನವನನ್ನು ಬೆರಳೆತ್ತಿ ತೋರಿಸಲಾರೆ."

ಇಡೀ ಸಭೆಯೊಮ್ಮೆ ಸ್ತಬ್ದವಾಯಿತು. ಪ್ರತಿಯೊಬ್ಬರೂ ಒಬ್ಬರನ್ನೊಬ್ಬರು ಸಂಶಯದ ದೃಷ್ಟಿಯಿಂದ ನೋಡತೊಡಗಿದರು. ನಡುನಡುವೆ ಗುಸುಗುಸು ಮಾತೂ ಪ್ರಾರಂಭವಾಯಿತು.

"ಹಾಂ, ಒಂದು ಸಮಾಧಾನದ ವಿಷಯವೇನೆಂದರೆ ನೀವೆಲ್ಲರೂ ಇಲ್ಲಿ ಬಂದು ನೆರೆದಿರುವುದು. ನಾಳೆ ಮತ್ತೆ ಯಾರೂ ಈ ಬಡಪಾಯಿಯ ಮೇಲೆ ಸಂಶಯ ಪಡಬಾರದಷ್ಟೆ? ಇತರ ಕಪಟ ಸನ್ಯಾಸಿಗಳಂತೆ ಇವನೂ ಹಣದ ಗಂಟಿನೊಂದಿಗೆ ಓಡಿಹೋದ ಎನ್ನುವ ಅಪವಾದವೂ

ನನಗೆ ಬೇಡ. ಆದ್ದರಿಂದ ಊರವರೆಲ್ಲರ ಸಮಕ್ಷಮದಲ್ಲಿ ನನ್ನ ಪರೀಕ್ಷೆಯಾಗಲಿ. ಎಲ್ಲರೂ ಪ್ರತ್ಯಕ್ಷವಾಗಿ ನೋಡಿರಿ" ಎಂದವನೆ ತನ್ನ ಮೈಮೇಲಿನ ಬಟ್ಟೆಯನ್ನೆಲ್ಲಾ ಜಾಡಿಸಿ ಎಲ್ಲೂ ತಾನು ದುಡ್ಡು ಬಚ್ಚಿಟ್ಟುಕೊಂಡಿಲ್ಲ ಎಂದು ತೋರಿಸುವ ನಾಟಕವಾಡಿದ.

ಸನ್ಯಾಸಿ ಊರುಬಿಟ್ಟು ಹೊರಡಲಿದ್ದ ಸಂಗತಿ ಗಂಗಕ್ಕನ ಕಿವಿಗೂ ಬಿತ್ತು. ಕರೆಯುತ್ತಿದ್ದ ಹಾಲಿನ ತಂಬಿಗೆಯನ್ನು ಹಟ್ಟಿಯಲ್ಲೆ ಬಿಟ್ಟು ಮೇಲೆದ್ದಳು. ದುಡುದುಡು ಹೆಜ್ಜೆ ಹಾಕಿ ಬರುತ್ತಿದ್ದ ತಾಯಿಯನ್ನು ನೋಡಿದ ರಂಗ ಬೆವತು ಹೋದ. ತಕ್ಷಣ ಇತ್ತ ತಿರುಗಿ.

"ಇದೋ ನಾನು ಹೊರಟೆ. ಯಾರೊಬ್ಬರೂ ನನ್ನ ಬೆನ್ನತ್ತಿ ಬರುವ ಆವಶ್ಯಕತೆ ಇಲ್ಲ" ಇಷ್ಟು ಹೇಳಿ ಸರಸರ ಮೆಟ್ಟಲಿಳಿದು ಹೊರಟೇ ಹೋದನು. ಅದುವರೆಗೆ ಶಾಕ್ ಹೊಡೆದಂತೆ ಮೌನವಾಗಿ ನಿಂತಿದ್ದ ಸಾವ್ಕಾರ್ ಸೋಂಪ ಎಚ್ಚೆತ್ತ. ರಂಗ ನನ್ನು ಹಿಂಬಾಲಿಸಿ ಬರುತ್ತಾ.

"ಸ್ವಾಮಿ ಗ್ರಂಥವಾಚನ ಕಾರ್ಯವನ್ನಾದರೂ ಮುಗಿಸಿ ಹೋಗಬಾರದೆ ಸ್ವಾಮಿ" ಎಂದು ಗೋಗರೆದುಕೊಂಡ. ಅವನಿಗೆ ಉತ್ತರ ಕೊಡುವ ಗೋಜಿಗೆ ಹೋಗದ ರಂಗ, ನಿನ್ನ ಗ್ರಂಥಗಳನ್ನು ಕುತ್ತಿಗೆಗೆ ಕಟ್ಟಿಕೊಂಡು ಕೆರೆ ಗಾದರೂ ಹಾರು ಇಲ್ಲ ಬಾವಿಗಾದರೂ ಬೀಳು ನನಗೇನಂತೆ? ಮನದಲ್ಲೆ ಹೇಳುತ್ತ ಮುಂದಡಿ ಯಿಟ್ಟ. ಗಂಗಕ್ಕ ಎದೆಎದೆ ಬಡಕೊಂಡಳು. ಅಯ್ಯೋ ದೇವ್ರೆ ಒಂದು ದಿನವಾದ್ರೂ ಈ ಪುಣ್ಯಾತ್ಮರನ್ನು ಕಣ್ಣಾರೆ ಕಾಣುವ ಭಾಗ್ಯ ನನ ಗೊದಗಲಿಲ್ಲವಲ್ಲಾ? ಎಂದು ಪಶ್ಚಾತ್ತಾಪ ಪಟ್ಟಳು. ಶಿವಣ್ಣನನ್ನು ನೋಡುತ್ತಾ– "ಈ ಸ್ವಾಮಿಯನ್ನು ಇಲ್ಲಿಂದೊಮ್ಮೆ ಓಡಿಸಿಬಿಡ ಬೇಕೆಂದು ಅದೆಷ್ಟು ತಿಂಗಳಿಂದ ಹೊಂಚು ಹಾಕುತ್ತಿದೆಯೊ? ಈಗ ಸಮಾಧಾನವಾಯ್ತೆ? ಹಗಲು ರಾತ್ರಿ ಜಿಗಾರಿ ಆಡಲು ಜಾಗ ಖಾಲಿ ಯಾಯಿತೆಂದು? ಅವನು ಅಪರಾಧಿಯಂತೆ ತಲೆ ತಗ್ಗಿಸಿದ.

ಮನೆಕೆಲಸವನ್ನೆಲ್ಲ ಮುಗಿಸಿದ ರತ್ನ ಸೋಮೇಶ್ವರಕ್ಕೆ ಹೊರಡುವ ತಯಾರಿ ನಡೆಸಿ ದಳು.

"ಅತ್ತೆ, ನಾನೊಂದು ಗಳ್ಗೆ ಬೆದ್ರಕ್ಕೆ ಹೋಗಿ



ನೀವು ಬರೆದ 'ನೆನಪಿನಂಗಳದಿಂದ' ಬರಹ ಓದಿದ ಮೇಲೆ ನೀವು ನನಗೆ ಕೊಡಲಿಕ್ಕಿರೊ 100 ರೂಪಾಯಿ ನೆನಪಾಯ್ತು ನೋಡಿ...

ಬೇಗ ಬಂದು ಬಿಡ್ತೇನತ್ತೆ."

"ಏನೆ, ಮದ್ರಂಗಿ ಮದಿಮಲೆ ತಿಂಗಳಿಗೆ ಇಪ್ಪತ್ತೈದು ಸರ್ತಿ ತಾಯಿಮನೆಗೆ ಹೋಗ್ತಿದ್ದೀ ಯಲ್ಲಾ. ಅಲ್ಲೇನು ಗಂಟಿಟ್ಟಿದ್ದೀಯೆ ನೀನು? ಇಲ್ಲಿ ನಾನೂ ಒಬ್ಳೊಂಟಿಗಳೆಂದು ನಿನಗೊತ್ತಿಲ್ಲ ವೇನೆ?"

"ಹಾಗಲ್ಲತ್ತೆ. ನಂನ್ತಂಗಿ ಗುಲಾಬಿಗೆ ಬಂದಿದ್ದ ನೆಂಟಸ್ತಿಕೆ ವಿಷಯ ಏನಾಯ್ತೂಂತ ಗೊತ್ತಿಲ್ಲ ವಲ್ಲಾ ಅದಕ್ಕೆ ಕೇಳಿ ಬರೋಣ ಎಂದು ಹೊರಟೆ..."

"ಅಯ್ಯೋ ನನ್ನ ಕರ್ಮವೆ. ಈ ದಿನದ ಚಾಕ್ರಿ ಒಂದಿಲ್ಲದಿರುತ್ತಿದ್ದರೆ ನಾನೂ ನಿಂಜೊತೆ ಎರಡು ದಿನ ಉಳಿದು ಬರ್‍ತಿದ್ದೆನಲ್ಲಾ? ಆಯ್ತು ಹೋಗು. ಹೊತ್ತು ಕಂತುವುದರೊಳಗೆ ಬೇಗ ಬಂದು ಬಿಡು" ಸೊಸೆ ಹೇಳಿದ್ದು ನಿಜವೆಂದು ನಂಬಿದಳು ಗಂಗಕ್ಕ.

ಬಸ್ಸಿನಲ್ಲಿ ಬಂದಿಳಿದ ರತ್ನ ದೇವಸ್ಥಾನಕ್ಕೆ ಹೋಗುವ ದಾರಿ ಹಿಡಿದಳು. ಸೋಮನಾಥೇಶ್ವರ ನಿಗೆ ಪ್ರದಕ್ಷಿಣೆ ಬಂದು ಅರ್ಚಕರಿಂದ ತೀರ್ಥ ಸ್ವೀಕರಿಸಿದಳು. ಆಗಲೇ ಮಂಗಳಾರತಿ ಮುಗಿ ದುದರಿಂದ ಭಕ್ತರ ಸಂಖ್ಯೆಯೂ ಕಡಿಮೆಯಿತ್ತು. ನಿಧಾನವಾಗಿ ಹೆಜ್ಜೆ ಹಾಕುತ್ತಾ ಹಿಂಬದಿಯ ದ್ವಾರದಿಂದಾಗಿ ಕೆರೆಯ ಸಮೀಪಕ್ಕೆ ಬಂದಳು. ಅಲ್ಲಿ ಎಂದಿನಂತೆ ಕಲ್ಲುಬಂಡೆ ಕಡಿಯುವವ

ರಾಗಲಿ. ಲಾರಿಗಳಲ್ಲಿ ಮರಳು ಸಾಗಿಸುವವ
ರಾಗಲಿ ಇಲ್ಲದಿದ್ದುದು ಅವಳಿಗೆ ಹಿತವೆನಿಸಿತು.
ಪತಿಯ ನಿರೀಕ್ಷೆಯಲ್ಲಿದ್ದ ರತ್ನ ಮರಳ ರಾಶಿಯಲ್ಲಿ
ಕುಳಿತು ಮಾರ್ಗದತ್ತ ದೃಷ್ಟಿ ಹರಿಸಿದಳು. ಬಿಸಿಲು
ನೆತ್ತಿ ಸುಡುವಷ್ಟರಲ್ಲಿ ಜಟಾಧಾರಿಯ ಆಗಮನ
ವಾಯಿತು.

ಗಂಡ ತನ್ನ ಸಮೀಪಕ್ಕೆ ಬರುತ್ತಿದ್ದಂತೆ ಬಟ್ಟೆ
ಯಿಂದ ಚೀಲವನ್ನು ಅಲ್ಲೇ ಬಿಟ್ಟು ಎದ್ದು ನಿಂತಳು
ರತ್ನ. ಇದನ್ನು ಗಮನಿಸಿದ ರಂಗ, 'ಇನ್ನು ನೀನು
ಮನೆಗೆ ಹೋಗು' ಎನ್ನುವಂತೆ ಸನ್ನೆ ಮಾಡಿದನು.
ಮರುಮಾತಿಲ್ಲದೆ ಹೆಂಡತಿ ಹೊರಟು ಹೋದಾಗ
ಸುತ್ತಲೂ ಒಮ್ಮೆ ಕಣ್ಣಾಡಿಸಿದವನು. ಬೀಸುವ
ಗಾಳಿಗೆ ಸುಂಯ್‌ಗುಟ್ಟುತ್ತಿರುವ ತೆಂಗಿನ ಮರ
ಗಳ ಸದ್ದು, ಭೋರ್ಗರೆಯುತ್ತಿದ್ದ ಅಲೆಗಳ
ಅಬ್ಬರ ಬಿಟ್ಟರೆ ಈ ಪರಿಸರ ನಿಶ್ಶಬ್ದವಾಗಿತ್ತು.
ಚೀಲ ಎತ್ತಿಕೊಂಡವನೆ ಸಮುದ್ರ ತೀರದ ಬಂಡೆಯ
ಮರೆಗೆ ಹೋದನು ರಂಗ. ಅಲ್ಲಿ ಜಟೆ ಧಾಡಿ
ಹಾಗೂ ಕಾವಿ ಬಟ್ಟೆಯನ್ನೆಲ್ಲಾ ಕಳಚಿ 'ಥೂ
ಶನಿ ಹೋದಂತಾಯ್ತು' ಎಂದು ಹೇಳುತ್ತಾ ಕಡ
ಲಿನ ಮಡಿಲಿಗೆಸೆದನು. ಬೇರೆ ಉಡುಪು ಧರಿಸಿ
ದುಡ್ಡನ್ನು ಜೇಬಿಗೆ ಸೇರಿಸಿದನು. ಬಳಿಕ ಕ್ಷೌರಿಕನ
ಅಂಗಡಿ ಹುಡುಕುತ್ತಾ ಪೇಟೆ ಬೀದಿಗೆ ಬಂದನು
ರಂಗ. ಪೊದೆಯಂತಿದ್ದ ತಲೆಕೂದಲು, ಗಡ್ಡ
ಮೀಸೆ ಬೋಳಿಸದೆ ಮನಸ್ಸಿಗೆ ಕಿರಿಕಿರಿ ಎನಿಸಿತ್ತು.
ಕ್ಷೌರ ಮುಗಿದೊಡನೆ ಹಂಪನಕಟ್ಟೆಗೆ ಹೋಗುವ
ಬಸ್ ಹಿಡಿದು ನೆಮ್ಮದಿಯ ಉಸಿರ್ಗರೆದನು.

ಗಂಗಕ್ಕನ ಹೇಟೆಯೊಂದು ಕಾಳುಗಳನ್ನು
ಹೆಕ್ಕುತ್ತಾ ಮರಿಗಳೊಂದಿಗೆ ಅಡ್ಡಾಡುತ್ತಿತ್ತು.
ಅಂಗಳದ ಪೂರ್ತಿ ಓಡಾಡುತ್ತಿದ್ದ ಅವುಗಳು
ಗಿಡುಗನ ಬಾಯಿಗೆ ಬೀಳದಂತೆ ಕಾಯುತ್ತಾ
ಕುಳಿತಿದ್ದಳು ರತ್ನ. ಅವಳ ಕಂಗಳು ಕೋಳಿಮರಿ
ಗಳ ಮೇಲಿದ್ದರೂ ಗಮನವೆಲ್ಲ ಪತಿ ಬರಲಿದ್ದ
ದಾರಿ ಕಡೆಗಿತ್ತು. ಹಿತ್ತಲಿನ ಮೋಟು ಗೋಡೆಗೆ
ಬೆರಣಿ ತಟ್ಟುತ್ತಿದ್ದ ಗಂಗಕ್ಕ ಬೂಟುಗಾಲಿನ
ಸದ್ದಿಗೆ ಬೆಚ್ಚಿ ಇತ್ತ ತಿರುಗಿದಳು. ಕಡಕ್ ಇಸ್ತ್ರಿ
ಹಾಕಿದ್ದ ಪ್ಯಾಂಟ್ ಷರ್ಟ್ ಧರಿಸಿ ಕಣ್ಣಿಗೆ ಕಪ್ಪು
ಕನ್ನಡಕವನ್ನಿಟ್ಟು ಕೈಯಲ್ಲಿ ಸೂಟ್‌ಕೇಸ್ ಹಿಡಿದು
ನಿಂತಿರುವವನನ್ನು ನೋಡಿ ಅಚ್ಚರಿಯಾಯಿತು
ಗಂಗಕ್ಕನಿಗೆ. ಸೊಂಟಕ್ಕೆ ಸಿಕ್ಕಿಸಿದ್ದ ಲಂಗದ
ಅಂಚನ್ನು ಕೆಳಗೆ ಬಿಡುತ್ತಾ,




"ಯಾರಪ್ಪಾ ನೀನು? ಯಾರ ಮನೆಗೆ ಹೋಗ
ಬೇಕಿತ್ತು?" ತಾಯಿಗೆ ತನ್ನ ಪರಿಚಯವಾಗ
ದಿದ್ದಾಗ ರಂಗ ನಗುತ್ತ ಕಣ್ಣಿನಿಂದ ಕನ್ನಡಕ
ತೆಗೆದ. "ನಾನಮ್ಮ ನಿನ್ನ ರಂಗಣ್ಣ. ಇನ್ನೂ ಯಾಕೆ
ಹಾಗೆ ನೋಡುತ್ತಿರುವಿ? ನನ್ನ ಗುರ್ತ ಸಿಕ್ಕಲಿಲ್ಲವಾ
ನಿನಗೆ? ಇದೊಳ್ಳೆ ಗಮ್ಮತ್ತಾಯ್ತಲ್ಲಾ ನಿಂದು?
ನಾನು ಯಾವ ಉಡುಪು ತೊಟ್ಟರೂ ನಿನಗೆ
ಗುರ್ತವೇ ಸಿಕ್ಕುವುದಿಲ್ಲವಲ್ಲಾ?" ಗಂಗಕ್ಕ ಬೆಕ್ಕಸ
ಬೆರಗಾದಳು. ತನ್ನ ಕಣ್ಣನ್ನು ಅವಳು ನಂಬ
ದಾದಳು. ಈ ಚೋದ್ಯವನ್ನು ನೋಡಿ ಸದ್ದಿಲ್ಲದೆ
ನಗುತ್ತಿದ್ದ ಪತ್ನಿಯನ್ನು ದಿಟ್ಟಿಸಿದ ರಂಗ.

"ಏನೆ ನಿನಗಾದರೂ ನಾನು ಯಾರೆಂದು
ಗೊತ್ತಾಯ್ತಾ ಇಲ್ಲವಾ? ಅಂದು ಹಾಲಿನ ವೇಷ
ಹಾಕಿದಾಗಲೂ ನೀವಿಬ್ರು ಹೀಗೇ ಮಾಡಿದ್ದೀರಿ.
ಆಮೇಲೆ..."

"ಆಮೇಲೆ...?" ಬೇಕೆಂದೇ ಕೇಳಿದಳು ರತ್ನ.

"ಆಮೇಲೇನು? ಇವತ್ತೂ ನೋಡು ಹೇಗಾಡ್ತಿ
ದ್ದಾಳೆ ಅಮ್ಮ?" ಎಂದು ಅವಳಿಗೆ ಕಣ್ಣು
ಹೊಡೆದ.

"ಹೌದೂ... ಎಷ್ಟಂದರೂ ನೀವು ನಾಟಕದವ
ರಲ್ಲವೆ? ಯಾವ ವೇಷದಲ್ಲಿದ್ದರೂ ಯಾರೂ
ನಿಮ್ಮನ್ನು ಗುರ್ತ ಹಿಡಿಯುವಂತಿಲ್ಲವಲ್ಲ?"

ಒಳ್ಳೆ ಸಿನಿಮಾ ನಟನಂತೆ ತೋರುತ್ತಿದ್ದ ಪತಿಯನ್ನು ಕಣ್ಣಗಲಿಸಿ ನೋಡುತ್ತಾ ಹೇಳಿದಳು. "ಅಯ್ಯೋ ನನ್ನ ಕಂದಾ, ಹೇಗಿದ್ದೀಯಪ್ಪಾ ನೀನು? ಯಾಕಿಷ್ಟು ಬಚ್ಚಿ ಹೋಗಿದ್ದಿ ಮಗಾ, ಕೆಲಸ ಕೆಲಸ ಅಂತ ಹೇಳಿ ಊಟ ಗೀಟ ಸರಿಯಾಗಿ ಮಾಡಲಿಲ್ಲವೇನಪ್ಪಾ?" ಹಡೆದಾಕೆಯ ನಿಷ್ಕಳಂಕ ನುಡಿ ಕೇಳಿ ಮಗನ ಹೃದಯ ಹಿಂಡಿದಂತಾಯಿತು. ಅವನು ಸೂಟ್‌ಕೇಸನ್ನು ತಾಯಿಯ ಕೈಯ್ಯಲ್ಲಿರಿಸಿ ತೆಂಗಿನ ಮರದ ಕಟ್ಟೆಯತ್ತ ನಡೆದನು. ಕಟ್ಟದಲ್ಲಿ 'ಮಣ್ಣಿನ ಗಡಿಗೆ'ತುಂಬಿಸಿಟ್ಟಿದ್ದ ನೀರಿನಲ್ಲಿ ಕೈಕಾಲು ಮುಖ ತೊಳೆದು ರುಮಾಲಿನಲ್ಲಿ ಒರಸಿಕೊಂಡನು.

ಇದೆಲ್ಲವನ್ನು ತನ್ನ ಮನೆ ಕಿಟಿಕಿಯಲ್ಲಿ ನೋಡುತ್ತಿದ್ದ ಆನಂದನಿಗೆ ಆತುರ ತಡೆಯದಾಯಿತು. ಮೈಕೈ ತುಂಬಿಕೊಂಡು ಪೈಲ್ವಾನನಂತಿದ್ದ ರಂಗನನ್ನು ಕಂಡು ಹೊಟ್ಟೆಯಲ್ಲಿ ಸಂಕಟವಾಯಿತು. ನೇರ ಹೋಗಿ ವಿಚಾರಿಸೋಣವೆಂದರೆ ಗಂಗಕ್ಕನ ಭಯವೂ ಅವನಿಗಿತ್ತು. ಅತ್ತ ನೀಡಿದ ಸೂಟ್‌ಕೇಸ್ ತೆರೆದು ನೋಡುವುದರಲ್ಲಿದ್ದ ರತ್ನ ಮರಿಗಳ ವಿಚಾರವನ್ನೆ ಮರೆತಳು. ಕಾಯುತ್ತಿದ್ದ ಆನಂದನಿಗೆ ಈಗ ತಾನಾಗಿ ಸಂದರ್ಭ ಕೂಡಿ ಬಂತು. ಕುಹಕ ನಗುನಗುತ್ತಾ ರಂಗನ ಮನೆಯೊಳಗೆ ಬಂದಾಗ ರತ್ನಾಳ ಕೈಯ್ಯಲ್ಲಿದ್ದ ವಾಚು, ಹೊಸ ಸೀರೆ ಅವನ ಕಣ್ಣು ಕುಕ್ಕಿದವು.

"ಹಾಂ, ಏನಂತೆ? ಪೆಡಿಕೆ ತುಂಬಾ ಸಾಮಾನು ಬಂದಿದೆಯಲ್ಲಾ ಏನು ಸಮಾಚಾರ? ಸುದ್ದಿಲ್ಲದೆ ದುಬಾಯಿ ಗಿಬಾಯಿಗೇನಾದರೂ ಹೋಗಿ ದೋಚಿಕೊಂಡು ಬಂದಿದ್ದೀಯೋ ಹೇಗೆ? ನಿನ್ನ ಜಲ್ಸ್ ನೋಡಿದರೆ ಹಾಗೇ ಕಾಣುತ್ತದೆ ನನಗೆ." ಮತ್ಸರದಿಂದ ಕುದಿಯುತ್ತಾ ಕೇಳಿದನು. ಇಂತಹ ಘೂರ್ಖನೂ ಅಂದು ತನ್ನ ಸನ್ಯಾಸಿ ವೇಷಕ್ಕೆ ಕೈ ಮುಗಿದುದನ್ನು ನೆನೆದ ರಂಗ ತುಸು ಜೋರಾಗಿಯೇ ನಕ್ಕ.

"ನಾನು ದುಬಾಯಿಗೂ ಹೋಗಲಿಲ್ಲ, ಬೊಂಬಾಯಿಗೂ ಹೋಗಲಿಲ್ಲ ಮಾರಾಯ. ನಿನ್ನಂತ ಅರೆಪಚ್ಚೆಯವರೆದುರಿಗೆ ನಾಟಕವಾಡಿಕೊಂಡಿದ್ದು, ಸಂಪಾದಿಸಿದ್ದರಲ್ಲೇ ಇದನ್ನೆಲ್ಲ ತಂದದ್ದು ಗೊತ್ತಾಯ್ತಾ?"

"ಹೌದ ರಂಗಾ... ದೊಡ್ಡ ಸೈಂದವನಂತೆ ಕಾಣುತ್ತಿದ್ದೀಯಲ್ಲಾ. ಬಹುಶಃ ಆ ಊರಲ್ಲಿ ಸಮಾ ಹಂದಿ ಮಾಂಸ ತಿನ್ನುತ್ತಿದ್ದಿ ಎಂದು ಕಾಣುತ್ತದೆ ಅಲ್ಲವೇನೊ?" ರಂಗ ಉತ್ತರಿಸುವಷ್ಟರಲ್ಲಿ ದೇವರ ಕೋಣೆಯಿಂದ ಹೊರ ಬಂದ ಗಂಗಕ್ಕ, "ಯಾರದು ಆನಂದನಾ? ನೀನ್ಯಾಕೆ ಬಂದೆ ಇಲ್ಲಿಗೆ?" ಸಿಟ್ಟಿನಿಂದ ಅವಳ ಮುಖ ಕೆಂಪಾಗಿತ್ತು.

"ನಾನ್ಯಾಕೆ ಬಂದೆ ಎಂದು ನನ್ನನ್ನೇ ಕೇಳುತ್ತಿದ್ದೀಯಲ್ಲಾ?" ಹೊಸ ಹೊಸ ಸೀರೆ ರವಕೆ ಕಂಡೊಡನೆ ನಿನ್ನ ಮುದಿ ಕಣ್ಣೂ ನೆತ್ತಿ ಮೇಲೆ ಹೋಯ್ತಾ? ಅಲ್ಲಾ... ಒಂದಲ್ಲ ಮೂರು ಮರಿಗಳನ್ನು ಕಾಗೆ ಎತ್ತಿಕೊಂಡು ಹೋಗುತ್ತಿದ್ದರೂ ನಿಮಗೆಲ್ಲ ಬೋದವೇ ಇಲ್ಲವಲ್ಲಾ? ಅದನ್ನೇ ಹೇಳೋಣಾಂತ ನಾನು ಬಂದದ್ದು ಗೊತ್ತಾಯ್ತಾ?" ಆನಂದ ಇಷ್ಟಗಲ ಬಾಯಿ ತೆರೆದು ನಕ್ಕ.

"ನಾರಾಯಣ ದ್ಯಾವರ್ರಾ ನಿನ್ನ ಮನಸ್ಸಾ ಆನಂದ ಒಳಗೆ ಬರುವಾಗ ಅಲ್ಲಿದ್ದ ಕುತ್ತರಿಯನ್ನಾದರೂ ಮರಿಗಳಿಗೆ ಮುಚ್ಚಿಟ್ಟು ಬರಬಾರದಿತ್ತೆ?"

"ಅಂ....! ಅಲ್ಲವೆ ಮತ್ತೆ? ನಾನೇನು ನಿಮ್ಮನೆ ಕೆಲಸದವನೆಂದುಕೊಂಡೆಯಾ?" ಎಂದವನೇ ಅಲ್ಲಿ ನಿಲ್ಲಲಾರದೆ ಕಾಲ್ತೆಗೆದ. ಕೋಳಿಯ ನೆನಪಾದಾಗ ರತ್ನ ಹೊರಗೋಡಿದಳು.

ರಂಗ ಊರಿಗೆ ಬಂದ ಸುದ್ದಿ ತಿಳಿದೊಡನೆ ಶಿವಣ್ಣ ಪ್ರತ್ಯಕ್ಷನಾದ.

"ಏನು ಮಾರಾಯ ಹೇಗೂ ಬರುವವ ಬಂದಿ. ಎರಡು ದಿನದ ಮೊದಲೇ ಬರಬಾರದಿತ್ತೆ ನಿನಗೆ?"

"ಅಂದಾಗೆ ನಾನು ಬಂದ ಸಂಗತಿ ನಿನಗೆ ಗೊತ್ತಾದ್ದಾದ್ರೂ ಹೇಗೊ?"

"ನನಗೆ ಮಾತ್ರ ಏನು? ಇಡೀ ಊರಿಗೆ ಗೊತ್ತಿತ್ತು ನೀನಿವತ್ತು ಬಂದೇ ಬರುವಿ ಎಂದು."

"ಅರೆ! ಇದು ವಿಚಿತ್ರವಾಯಿತಲ್ಲಾ?"

"ವಿಚಿತ್ರ ಯಂತದು? ನಮ್ಮೂರಿಗೊಬ್ರು ಸನ್ಯಾಸಿ ಬಂದ ವಿಷಯ..."

"ಅಂ... ಅವನೊಬ್ಬ ನಂಜೆಲ. ಆನಂದ ಬಂದು ನಂಜಿ ಕಾರಿ ಹೋದ. ಇನ್ನು ನೀನು ಬಂದಿಯಾ? ಸರಿಯಾಯ್ತು ಈಗಿನಿಂದಲೇ ಸುರು ಮಾಡು ಇಸ್‌ಪಿಟ್ ಆಡಲಿಕ್ಕೆ. ಈಗಷ್ಟೆ ಪರಊರಿನಿಂದ ಬಂದಿದ್ದಾನೆ. ಒಂದು ಚೂರು

ಹೆಂಡತಿಯ ಮುಖ ನೋಡಲಿಕ್ಕಾದರೂ ಬಿಡಬಾರದೆ?" ಮಾತಿನ ನಡುವೆ ಗಂಗಕ್ಕ ಸಿಡುಕಿದಳು. ಗೆಳೆಯನನ್ನು ನೋಡುವ ಆತುರದಲ್ಲಿದ್ದ ಶಿವಣ್ಣ, ಗಂಗಕ್ಕ ಅಲ್ಲಿರುವುದನ್ನು ಮರೆತು ಬಂದಿದ್ದ. ಇಲ್ಲಿ ಇನ್ನು ನಿಂತಲ್ಲಿ ಇವಳ ಬಾಯಿಂದ ಉಳಿಗಾಲವಿಲ್ಲಪ್ಪ ನನಗೆ ಎಂದೆನಿಸಿತು ಅವನಿಗೆ.

"ಬರ್ತೇನೆ ಮಾರಾಯ ಪುರ್ಸೊತ್ತಾದಾಗ ಮಾತನಾಡುವ" ಶಿವಣ್ಣ ಅಲ್ಲಿಂದ ಹಿಂತಿರುಗಿದ.

ರತ್ನ ಚಹ ಮಾಡಿ ಗ್ಲಾಸಿನ ತುಂಬಾ ಹಾಕಿ ತಂದಿತ್ತಳು. ಗಂಗಕ್ಕ ಬಿಸಿ ಗ್ಲಾಸನ್ನು ಸೆರಗಿನಲ್ಲಿ ಹಿಡಿದು ಅಂಗ್ಯೆ ಮೇಲಿರಿಸಿಕೊಂಡಳು. ಮಗನೊಂದಿಗೆ ಸುಖ–ದುಃಖ ಮಾತನಾಡುತ್ತಾ ಚಹ ಗುಟುಕರಿಸುತ್ತಿದ್ದಾಗ ಯಾರೋ ಅವಳ ಹೆಸರೆತ್ತಿ ಕರೆಯುವುದು ಕೇಳಿಸಿತು. ಹೊರಗೆ ಬಂದು ನೋಡಿದರೆ ಅಬ್ಬುಬ್ಯಾರಿಯ ಸೊಸೆ ಅಲ್ಲಿ ನಿಂತಿದ್ದಳು.

"ಗಂಗಕ್ಕಾ, ನನ್ನತ್ತೆಗೆ ದಿನ ತುಂಬಿ ಹೆರಿಗೆ ನೋವಿನಿಂದ ನರಳುತ್ತಿದ್ದಾರೆ" ಫಾತುಮ್ಮ ಹೇಳಿದಳು.

"ಅದ್ಕೆ ನಾನೇನು ಮಾಡ್ಬೇಕು? ಮಿಡ್‌ಬಾಯಿ ನೇತ್ರಮ್ಮನನ್ನು ಕರ್ಕೊಂಡು ಹೋಗುವುದು ಬಿಟ್ಟು ಇಲ್ಲಿ ಬಂದಿದ್ದೀಯಲ್ಲಾ?"

"ನೇತ್ರಮ್ಮ ಮನೇಲಿಲ್ಲ. ಅದ್ಕೇ ಮಾವ ಹೇಳಿದ್ರು ನಿಮ್ಮನ್ನು ಕರ್ಕೊಂಡು ಬರ್ಲಿಕ್ಕೆ."

"ನಿನ್ನ ಮಾವನಿಗೆ ಬೇರೆ ಕೆಲಸ ಯಂತದುಂಟು? ಆಯಿಸ್ಸ (ಆಯುಷ್ಯ) ಪೂರಾ ಹೆಂಡತಿಯ ಬಾಣಂತನದ ಲೆಕ್ಕ ಇಡುವುದರಲ್ಲೇ ಇದ್ದಾನೆ. ಆಯ್ತು ಬಂದೆ ನಿಲ್ಲು ಒಂದು ಮಿನಿಟು. ನಿಮಗೆಲ್ಲ ನಾನೊಬ್ಬಳಿದ್ದೇನೆ 'ದೇಯಿ ಬೈದಿದಿ' ಬಸಿರು ಬಾಣಂತನ ಎಂದು ಊರವರ ಮಕ್ಕಳ ಚಾಕ್ರಿ ಮಾಡಿದ್ದೇ ಬಂತು. ಇನ್ನು ನನ್ನ ಸೊಸೆದ್ದು ಯಾವಾಗ ಮಾಡ್ತೇನೋ ದೇವರಿಗೇ ಗೊತ್ತು." ಗೊಣಗುತ್ತ ಕೈಯಲ್ಲಿದ್ದ ಗ್ಲಾಸನ್ನು ಒಳಗಿಟ್ಟು ಮಗ ಸೊಸೆಗೆ ಹೇಳಿ ಬಂದಳು.

ತಾಯಿ ಅತ್ತ ಹೋಗುತ್ತಿದ್ದಂತೆ ರಂಗ ಮುಂಬಾಗಿಲು ಭದ್ರಪಡಿಸಿ ಒಳಗೆ ಬಂದ. ರತ್ನ ಕೈಗೆ ಗಡಿಯಾರ ಕಟ್ಟಿ ಹೊಸ್ರ ಸೀರೆಯುಟ್ಟು ಕನ್ನಡಿ ಎದುರು ನಿಂತಿದ್ದಳು.

"ಅಂದಾಗೆ ನೀವು ಮನೆಗೆ ಬಂದ ಬಳಿಕ ಅದೇನೋ ವಿಷಯ ಹೇಳುತ್ತೇನೆ ಅಂತ ಹೇಳಿದ್ದೀರಲ್ಲಾ ಈಗ ಹೇಳಿ ನೋಡೋಣ" ರತ್ನ ವೈಯ್ಯಾರದಿಂದ ಗಂಡನತ್ತ ಕುಡಿ ನೋಟ ಬೀರಿ ಕೇಳಿದಳು.

"ಹೇಳ್ತೇನೆ ತಡಿಯೇ ಈಗಲೇ ಏನವಸರ?" ಎಂದ ರಂಗ ಅವಳ ಸೊಂಟ ಬಳಸಿ ಒಳಕೋಣೆಗೆ ಕರೆದೊಯ್ದ. ●

ನಮ್ಮೂರು ನಮ್ಮ ಜನ

## ತುಷಾರ ಓದುಗರಿಗೆ ಆಹ್ವಾನ

ನಿಮ್ಮೂರಿನ ಬಗ್ಗೆ, ನಿಮ್ಮೂರಿನಲ್ಲಿರುವ ನದಿ, ಬೆಟ್ಟ, ಸಮುದ್ರ, ಊಟ ತಿಂಡಿ, ದೇವಾಲಯ, ಪಳೆಯುಳಿಕೆ, ಜನ, ನಡವಳಿಕೆ, ಜನಪ್ರಿಯ ವಿವರಗಳು– ಹೀಗೆ ಚಿಕ್ಕ ಚಿಕ್ಕ 'ಐಟಂ'ಗಳನ್ನು ಕಳುಹಿಸಿಕೊಡಿ. ಆ ಸ್ಥಳದ ಒಂದು ಕಪ್ಪು ಬಿಳುಪು ಫೋಟೋ ಇರಲಿ.

ಹದಿನೈದು–ಇಪ್ಪತ್ತು ಸಾಲುಗಳು ಬರೆದರೆ ಸಾಕು. ಕೆಲವರು ಪುಟಗಟ್ಟಲೆ ಬರೆದು ಕಳುಹಿಸಿದ್ದಾರೆ. ಇಂಥವನ್ನು ಪ್ರಕಟಿಸಲು ಸಾಧ್ಯವಾಗುವುದಿಲ್ಲ. ಯಾವುದನ್ನೂ ಹಿಂದಿರುಗಿಸಲಾಗುವುದಿಲ್ಲ.

'ನಮ್ಮೂರಿನ ಬಗ್ಗೆ ಇದನ್ನು ಕಾಣಿಸಿಲ್ಲ. ಅದನ್ನು ಬಿಟ್ಟಿದೀರಿ'–ಎಂದು ಮುಖ್ಯ ಲೇಖನ ಓದಿ ಅನಂತರ ನೀವು ಬರೆಯುವುದರ ಬದಲು ಮೊದಲೇ ನಿಮ್ಮೂರಿನ ವಿಶೇಷಗಳ ಬಗ್ಗೆ ತಿಳಿಸಬಾರದೇಕೆ?

ಈ ವಿಳಾಸಕ್ಕೆ ಈ ಕಿರು ಐಟಂಗಳನ್ನು ಕಳುಹಿಸಿಕೊಡಿ–

**ತುಷಾರ (ನಮ್ಮೂರು–ನಮ್ಮ ಜನ)**
**ಎನ್ 201, ನಾರ್ಥ್ ಬ್ಲಾಕ್,**
**ಫ್ರಂಟ್‌ವಿಂಗ್,**
**ಮಣಿಪಾಲ ಸೆಂಟರ್,**
**47, ಡಿಕನ್‌ಸನ್ ರೋಡ್,**
**ಬೆಂಗಳೂರು–560 042.**

# ಮನ-ಮುದ್ರೆ

• ಚಿರಂಜೀವಿ

ಮಿಡಲ್ ಸ್ಕೂಲ್‌ನಲ್ಲಿ ಇದ್ದಾಗ ನನಗೆ 'ಮಂಗಳೂರು' ಕಡೆಯವರು ಎನಿಸಿಕೊಂಡ ಇಬ್ಬರು ಸಹವಿದ್ಯಾರ್ಥಿಗಳು ಪರಿಚಯವಾಗಿದ್ದರು. ಒಬ್ಬ ಗುರುದತ್, ಮತ್ತೊಬ್ಬ ಶೆಣೈ. ಅವರ ಮನೆಗೆಲ್ಲ ಹೋಗಿ ಆಟವಾಡುತ್ತಿದ್ದೆ. ಅವರ ಮನೆ ಮಾತು ಕೊಂಕಣಿ ಎಂದು ತಿಳಿಯಿತು. ಮರಾಠಿಯ ಪರಿಚಯವಿದ್ದ ನನಗೆ ಅವರ ಭಾಷೆ ಅಪರಿಚಿತವೆನಿಸಲಿಲ್ಲ. ಈ ಇಬ್ಬರು ಗೆಳೆಯರೂ ಮಾತಿನಲ್ಲಿ, ನಡವಳಿಕೆಯಲ್ಲಿ, ಉಡುಪುಗಳಲ್ಲಿ ನಮ್ಮೆಲ್ಲರಿಗಿಂತಲೂ ಭಿನ್ನರಾಗಿದ್ದರು. ಯಾವಾಗಲೂ ನಗುನಗುತ್ತ ಶಾಂತರಾಗಿರುತ್ತಿದ್ದರೇನೊ ಎಂಬ ನೆನಪು. ಮಂಗಳೂರಿನವರೆಲ್ಲ ಹೀಗೆ ಇವರಂತೆ ಸುಂದರವಾಗಿ-ಬೆಳ್ಳಗಿರುತ್ತಾರೆ, ಇದೇ ಭಾಷೆ ಮಾತನಾಡುತ್ತಾರೆ ಎಂದೇ ನನಗನ್ನಿಸಿತ್ತು. ತುಳು ಎಂಬುದೊಂದು ಭಾಷೆ ಇದೆ ಎನ್ನುವುದೂ ಆಗ ತಿಳಿದಿರಲಿಲ್ಲ.

ಉಡುಪಿ ಬಗ್ಗೆ ಶಾಲಾ ಪುಸ್ತಕಗಳಲ್ಲಿ, ಕಥೆ ಪುಸ್ತಕಗಳಲ್ಲಿ ಓದಿದ್ದೆ. ಶ್ರೀಕೃಷ್ಣ ದೇವಾಲಯ ಇದೆ, ಮಧ್ವಾಚಾರ್ಯರು ಸ್ಥಾಪಿಸಿ-ಪೂಜಿಸಿದ ದೇವರು ಎಂದೆಲ್ಲ ಓದಿದ್ದೆ, ಹಿರಿಯರಿಂದ ಕೇಳಿದ್ದೆ. ಸಮುದ್ರವನ್ನಂತೂ ಕಂಡಿರಲಿಲ್ಲ. (ಅಷ್ಟೇ ಅಲ್ಲ, ಬೆಂಗಳೂರಿನವನಾಗಿ ಒಂದು ನದಿಯನ್ನೂ ಕಂಡಿರಲಿಲ್ಲ). ಆದರೆ, ಒಂದು ವಿಷಯ ಮಾತ್ರ ತುಂಬಾ ಕಿವಿಗೆ ಬೀಳುತ್ತಿತ್ತು; ಉಡುಪಿ ಅಡುಗೆಯವರ ವಿಷಯ. ಬಹುಶಃ ನಮ್ಮ ಮನೆಯ ವಿಶೇಷ ಸಂದರ್ಭಗಳ ಅಡುಗೆಗೆ ಉಡುಪಿಯವರೇ ಬರುತ್ತಿದ್ದರೇನೊ? ಇಷ್ಟು ಬಿಟ್ಟರೆ, ಉಡುಪಿಯವರು, ಮಂಗಳೂರಿನವರು ಎಂದೆಲ್ಲ ಆಗ ಕಾಣಿಸುತ್ತಿದ್ದದ್ದೆ ಅಪರೂಪ. ಎಲ್ಲೊ ನಾಲ್ಕೈದು ಬೀದಿಗೊಬ್ಬರೊ ಇಪ್ಪತ್ತು-ಮೂವತ್ತು ಮನೆಗಳಿಗೆ ಒಬ್ಬರೊ ಇರುತ್ತಿದ್ದರು.

ಅಡುಗೆಯವರನ್ನು ಬಿಟ್ಟರೆ, ಬೆಳ್ಳಿ- ಬಂಗಾರದ ಒಡವೆಗಳ ಅಂಗಡಿಗಳ ಜನ ಮಂಗಳೂರಿನವರು ಎಂದು ತಿಳಿದು



ಬಂದಿತ್ತು. ಅವರು ರಾಗವಾಗಿ ಎಳೆದು ಪುಸ್ತಕದ ಭಾಷೆ ಮಾತನಾಡುವಾಗ ಆಶ್ಚರ್ಯ ವಾಗುತ್ತಿತ್ತು.

ನಾನು ಹುಟ್ಟಿ-ಬೆಳೆದ ಬೆಂಗಳೂರು ಕಂಟೋನ್ಮೆಂಟ್ ಪ್ರದೇಶದಲ್ಲಿ ನನ್ನ ಅಜ್ಜಿ ಮನೆಯ ಹತ್ತಿರ– 'ಪೈ ಮನೆಯವರು, ಪಾಯಿ ಮನೆ ಯವರು', ಎಂದು ಎಲ್ಲರೂ ಕರೆಯುತ್ತಿದ್ದ ಒಂದು ಕುಟುಂಬ. ಅಜ್ಜಿಯವರ ಮೂಲಕ ಅವರ ಪರಿಚಯ ಆಗಿ, ಚಿಕ್ಕ ಹುಡುಗನಾಗಿ ಅವರ ಮನೆ ಯೆಲ್ಲ ಓಡಾಡುವಂತಾ ದಾಗ ನನಗೆ ಸಿಕ್ಕ ಪುಸ್ತಕ: 'ನೀತಿ ಚಿಂತಾಮಣಿ', ಅವರ ಮನೆಗೆ ಹೋಗುವುದು, 'ನೀತಿ ಚಿಂತಾಮಣಿ' ತರುವುದು, ಓದುವುದು, ವಾಪಸ್ಸು ಕೊಡುವುದು, ಮತ್ತೆ ತರು ವುದು, ಹೀಗೆ ಅದೆಷ್ಟು ಸಲ ಮಾಡಿಬಿಟ್ಟದ್ದೆನೊ? ಮಾಧ್ಯಮಿಕ ಶಾಲೆ ಹಂತದ ಆಗ ಓದಿದ 'ನೀತಿ ಚಿಂತಾ ಮಣಿ'ಯ ಕಥೆಗಳು ನನಗೆ ಇಂದಿಗೂ ನೆನಪಿನಲ್ಲಿವೆ.

ನನ್ನ ಕಿರಿಯ ವಯಸ್ಸಿನ ಮಂಗಳೂರು, ಮಂಗಳೂರಿನ ವರ ಪರಿಚಯ ಹೀಗಾಯಿತು. ಅನಂತರ, ಮಾಧ್ಯಮಿಕ-ಹೈಸ್ಕೂಲ್ ಹಂತದಲ್ಲೆ ಕೈ ಬರೆಹದ ಪತ್ರಿಕೆ ಪ್ರಾರಂಭಿಸಿ ದಾಗ ಮಂಗಳೂರಿನ ಹಿರಿಯ ಲೇಖಕ ಟಿ. ಚಂದ್ರರಾಜ ಶೆಟ್ಟಿ (ಸಿದ್ದಕಟ್ಟೆ) ನನ್ನ ಪತ್ರಮಿತ್ರ ರಾದರು. ನನ್ನ ಮತ್ತು ನನ್ನ ಸ್ನೇಹಿತರನೇಕರ ಕೈಬರೆಹ ಪತ್ರಿಕೆಗಳಿಗೆ ಅವರು ವರ್ಣ ಮುಖಚಿತ್ರ ಬರೆದು ಕೊಡುತ್ತಿದ್ದರು, ಒಳಚಿತ್ರ ಗಳು, ಲೇಖನಗಳು–ಕಥೆ ಗಳನ್ನು ನನ್ನ ಪತ್ರಿಕೆಗಾಗಿ ಬರೆದು ಕಳುಹಿಸುತ್ತಿದ್ದರು, ಒಂದಾಣೆ ಮಾಲೆಯ ಪುಸ್ತಕ ಗಳನ್ನು ಪತ್ರಿಕೆಗಾಗಿ ಬರೆದು ಕಳುಹಿಸುತ್ತಿದ್ದರು. ಮಂಗಳೂರಿ ನಲ್ಲೆ ಇದ್ದ ಪಿ. ಶ್ರೀಧರರಾವ್, ರಾ. ಮೋ. ವಿಶ್ವಾಮಿತ್ರ, ಪ. ಸೀತಾರಾಮ ಭಟ್ಟ ಮೊದಲಾದವರು ನನಗೆ ಪರಿಚಿತರಾದರು, ಈವರೆಗೂ ನಾನು ಇವರ್‍ಯಾರನ್ನೂ ಎದುರಿಗೆ ಕಂಡಿಲ್ಲ.

ಕಾದಂಬರಿಗಳ ಮೂಲಕ ಮಂಗಳೂರು ಪ್ರದೇಶದ ಪರಿಚಯವಾಯಿತು. ಡಾ। ಶಿವರಾಮ ಕಾರಂತ ಅವರ ಕಾದಂಬರಿಗಳು ಕರಾವಳಿ ಬದುಕನ್ನು ಕಾಣಿಸಿದವು.

ಉದ್ಯೋಗಕ್ಕೆ ಸೇರಿದ ಮೇಲೆ, ದಕ್ಷಿಣ ಕನ್ನಡ ಜಿಲ್ಲೆ ಎಂಬುದೊಂದಿದೆ, ಇದರಲ್ಲಿ ಮಂಗಳೂರಲ್ಲದೆ ಬೇರೆ ಬೇರೆ ಪ್ರದೇಶಗಳಿವೆ ಎನ್ನುವುದು ತಿಳಿಯಿತು. ಅಲ್ಲಿನ ಸ್ನೇಹಿತ ರಿಂದ ಕೊಂಕಣಿಯ ಜೊತೆಗೆ ತುಳುವಿನ ಸರಿಚಯವೂ ಆಯಿತು. ಈ ಜನರ ವಿಭಿನ್ನ ಗುಣಗಳ, ನಡವಳಿಕೆಯ, ಭವಿಷ್ಯದತ್ತ ಯಾವಾಗಲೂ ಒಂದು ದೃಷ್ಟಿ ಇಟ್ಟಿರುವಂತೆ ಕಾಣಿಸುತ್ತಿದ್ದ ವ್ಯಕ್ತಿತ್ವ ಅರಿ ವಾಯಿತು.

1963ರಲ್ಲೊ 64ರಲ್ಲೊ ಇರಬೇಕು–ನನ್ನ ತಂದೆ-ತಾಯಿ ಅವರೊಂದಿಗೆ ಧರ್ಮಸ್ಥಳ, ಉಡುಪಿ, ಮಂಗಳೂರು, ಸುಬ್ರಹ್ಮಣ್ಯ ಎನ್ನುವ ಆರೇಳು ದಿವಸಗಳ ಒಂದು ಪ್ರವಾಸದ 'ಛಾನ್ಸ್' ದೊರೆತಾಗ ನಾನು ಮಂಗಳೂರನ್ನು ನೋಡಿದ್ದು. ಗೋಪುರಗಳ ದೇವಾಲಯ ಗಳನ್ನು, ಇಲ್ಲಿನ ಒಂದು ರೀತಿಯ ಅರ್ಚಕರನ್ನು, ಪೂಜಾ ವಿಧಾನಗಳನ್ನು ನೋಡಿದ್ದ ನನಗೆ ಧರ್ಮಸ್ಥಳ, ಉಡುಪಿ ದೇವಾಲಯಗಳು ಏನೊ ಒಂದು ರೀತಿ ಕಂಡವು.

ಏರಿಳಿಯುವ ತಿರುವು ಹಾದಿಯ ಘಟ್ಟಗಳಲ್ಲಿ, ಹೆದರಿಸುವಂಥ ಬಸ್ ಪ್ರಯಾಣ, ವಿಶೇಷ ವಿನ್ಯಾಸದ ಹೆಂಚಿನ ಮನೆಗಳು, ಎತ್ತ ರೇತ್ತರ ಮರಗಳು ನೆನಪಿನಲ್ಲಿ ಉಳಿಯುವಂತೆ ಮಾಡಿದವು.

ಮಂಗಳೂರಿನಲ್ಲಿ ಕದ್ರಿ ದೇವಾಲಯ ನೋಡಿದೆವು. ದಾರಿಯಲ್ಲೆಲ್ಲೊ 'ಕುಟುರ್, ಕುಟುರ್' ಸದ್ದಿನ ಮೋಟರ್ ಬೋಟ್‌ನಲ್ಲಿ ಕುಳಿತು ಒಂದು ದಡದಿಂದ ಇನ್ನೊಂದು ದಡಕ್ಕೆ ಹೋದೆವು. ಈ ಜಾಗ ಯಾವುದಿದ್ದಿರಬಹುದು ಎಂದು ಈಗಲೂ ಯೋಚಿಸುತ್ತಿರು ತ್ತೇನೆ. ಎಲ್ಲೊ ಒಂದು ದೊಡ್ಡ ಹಡಗದಲ್ಲಿ (ಅಥವಾ ದೋಣಿಯೋ?) ಸೂರ್ಯಾಸ್ತ ನೋಡಿದೆವು. ನನ್ನ ಕೈಲಿದ್ದ ಬಾಕ್ಸ್ ಕ್ಯಾಮೆರಾದಿಂದ ಅದನ್ನು ಥಟ್ಟನೆ ಕ್ಲಿಕ್ಕಿಸಿದೆ (ಆ ಫೋಟೋ ಅದ್ಭುತವಾಗಿ ಮೂಡಿದ್ದೊಂದು ಆಶ್ಚರ್ಯ).

ಧರ್ಮಸ್ಥಳ ನೋಡಿದೆವು. ದೇವಾಲಯದಿಂದ ಸ್ವಲ್ಪ ದೂರದಲ್ಲೆ ಇದ್ದ ಹೊಸ ಛತ್ರವೊಂದರಲ್ಲಿ ರಾತ್ರಿ ಕಳೆದೆವು. ಆಗ ಹಿರಿಯ ಹೆಗ್ಗಡೆಯವರು ಇದ್ದಿರ ಬೇಕು.

ಧರ್ಮಸ್ಥಳದಿಂದ ಉಡುಪಿಗೆ ಬರುವಾಗ ಸುಮಾರು ಸಂಜೆಯಾಗುತ್ತ ಕತ್ತಲಾವರಿಸಿಕೊಳ್ಳುತ್ತಿತ್ತು. ಆಗ ದಾರಿಯಲ್ಲಿ ಹಿರಿಯರ್‍ಯಾರೊ ಇದ್ದಕ್ಕಿದ್ದ ಹಾಗೇ ಕೂಗಿದರು; 'ಆಗೋ, ನೋಡಿ, ಅಲ್ಲಿ ಎತ್ತೆತ್ತರದ ಕಟ್ಟಡಗಳು ಕಾಣುತ್ತಿವೆಯಲ್ಲ ಅದೇ ಮಣಿಪಾಲ – ಇಂಜಿನಿಯರಿಂಗ್, ಮೆಡಿಕಲ್ ಕಾಲೇಜುಗಳೆಲ್ಲ ಇವೆ'.

ದಟ್ಟವಾದ ಮರಗಿಡಗಳ ನಡುವೆ ದೂರದಲ್ಲೆಲ್ಲೊ ಕಟ್ಟಡಗಳ ಸಾಲು ಕಂಡವು. ಮಣಿಪಾಲ, ಸಿಂಡಿಕೇಟ್ ಬ್ಯಾಂಕ್ 'ಹೆಡ್ ಆಫೀಸ್' ಸ್ಥಳ ಎಂದು ಗೊತ್ತಿತ್ತು– ನನ್ನ ಮೊದಲ ಬ್ಯಾಂಕ್ ಅಕೌಂಟ್ ತೆರೆದದ್ದೂ ಸಿಂಡಿಕೇಟ್ ಬ್ಯಾಂಕಿನಲ್ಲಿಯೇ; ಬೆಂಗಳೂರು ಶೇಷಾದ್ರಿಪುರದಲ್ಲಿ ಅದಾಗಲೇ ಪ್ರಾರಂಭಿಸಿದ್ದ ಮಹಿಳೆಯರೇ ನೋಡಿಕೊಳ್ಳುತ್ತಿದ್ದ 'ಬ್ರಾಂಚ್' (ಶ್ರೀಮತಿ ಪಡಿಯಾರ್ ಆಗ ಮ್ಯಾನೇಜರ್ ಆಗಿದ್ದಿರಬೇಕು). 'ಕಸ್ತೂರಿ' ಕನ್ನಡ ಡೈಜೆಸ್ಟ್ ಪುಸ್ತಕ ವಿಭಾಗದಲ್ಲಿ ಪ್ರಕಟವಾದ ನಂದೊಂದು ಅನುವಾದಿತ ಕಿರುಕಾದಂಬರಿಗೆ ಗೌರವಧನವಾಗಿ ಮೂವತ್ತು ರೂಪಾಯಿಗಳ ಒಂದು ಕ್ರಾಸ್ಡ್ ಚೆಕ್ ಬಂದಿತ್ತು. ಅದನ್ನು 'ಕ್ಯಾಷ್' ಮಾಡಿಸಲು ಬ್ಯಾಂಕ್ ಒಂದರಲ್ಲಿ ಅಕೌಂಟ್ ಬೇಕಾಗಿತ್ತು. ನೋಡಲು ಚೆನ್ನಾಗಿದ್ದ, ಉತ್ಸಾಹೀ ಹುಡುಗಿಯರಿದ್ದ 'ಸಿಂಡಿಕೇಟ್ ಬ್ಯಾಂಕ್'ನಲ್ಲಿ ಧೈರ್ಯವಾಗಿ ಕಾಲಿಟ್ಟು ಅಕೌಂಟ್ ತೆಗೆದು ಚೆಕ್ ಕಟ್ಟಿದೆ. ಆ ಸಿಂಡಿಕೇಟ್ ಬ್ಯಾಂಕ್‌ನ ಪ್ರಧಾನ ಕಚೇರಿಯ ಮಣಿಪಾಲ ಇದು ಎನ್ನುವುದರಿಂದ ಕುತೂಹಲದಿಂದ ನೋಡಿದ್ದೆ. (ಇದಾದ ಸುಮಾರು ಇಪ್ಪತ್ತು ವರ್ಷಗಳ ಅನಂತರ ಇದೇ ಮಣಿಪಾಲ ನನ್ನದೂ ಆಗುತ್ತದೆ ಎಂದು ನಾನು ಕನಸು-ಮನಸುಗಳಲ್ಲೂ ಯೋಚಿಸಿರಲಿಲ್ಲ).

ಉಡುಪಿ ತಲುಪಿದಾಗ ಕತ್ತಲಾಗಿತ್ತು. ದೇವಾಲಯಕ್ಕೆ ಹೋಗಿ, ಮಧ್ವ ಸರೋವರದಲ್ಲಿ ಕೈಕಾಲು ತೊಳೆದು, ಶ್ರೀಕೃಷ್ಣನ ದರ್ಶನ ಮಾಡಿ ಪಕ್ಕದಲ್ಲೆ ಇದ್ದ ಛತ್ರದ ಕೊಠಡಿಗೆ ವಾಪಸ್ಸಾದಾಗ ನನಗೆ ಇಲ್ಲಿನ ಹೊಟೇಲೊಂದರಲ್ಲಿ ಮಸಾಲೆದೋಸೆ ತಿನ್ನಬೇಕೆಂಬ ಒಂದೇ ಆತುರ. ಬೆಂಗಳೂರಿನಲ್ಲೆಲ್ಲ ಉಡುಪಿ ಹೊಟೇಲ್‌ಗಳು ತಿಂಡಿಗೆ ಪ್ರಸಿದ್ಧಿ, ಉಡುಪಿಯಲ್ಲೆ ತಿಂಡಿಗಳು ಇನ್ನೂ ಭರ್ಜರಿಯಾಗಿ ಇರಬೇಕು ಎಂದು ನನ್ನ ಅನಿಸಿಕೆ. ಒಬ್ಬನೇ ನಡೆದು ಬಂದು, ಶ್ರೀಕೃಷ್ಣ ಮಠದ ಹತ್ತಿರದಲ್ಲೆ ಇದ್ದ ಒಂದು ಪುಟ್ಟ ಹೊಟೇಲ್‌ಗೆ ನುಗ್ಗಿ ಮಸಾಲೆದೋಸೆಗೆ ಆರ್ಡರ್ ಮಾಡಿದೆ. ಕೆಲವೇ ನಿಮಿಷಗಳಲ್ಲಿ ನನ್ನ ಬದುಕಿನ ಅತ್ಯಂತ ನಿರಾಶಾದಾಯಕ ಸಂದರ್ಭ ಎಂಬಂತೆ, ಮಸಾಲೆದೋಸೆ ಬಂದಿತು. ಅದನ್ನು ನೋಡಿದಾಗಲೇ ಭ್ರಮ ನಿರಸನವಾಯಿತು, ಸರಿಯಾಗಿ ತಿನ್ನಲಿಕ್ಕಂತೂ ಆಗಲೇ ಇಲ್ಲ. ಉಡುಪಿಯಲ್ಲಿ ನುರಿತ ಅಡಿಗೆಯವರ ಹೆಡ್‌ಕ್ವಾರ್ಟರ್ಸ್‌ನಲ್ಲಿ ಹೀಗೇಕೆ ಎಂದು ನನಗೆ ಅರ್ಥವಾಗಲೇ ಇಲ್ಲ.

ಮುಂದೆ ತುಷಾರ, ಉದಯವಾಣಿ ಪತ್ರಿಕೆಗಳಲ್ಲಿ ನನ್ನ ಕಥೆಗಳು ಪ್ರಕಟವಾದವು. ನಾನು ಮತ್ತೆ, ಉಡುಪಿಗೆ



ಬಂದದ್ದು ಇಪ್ಪತ್ತು ವರ್ಷಗಳ ಅನಂತರ–1983ರಲ್ಲಿ, ಹೊಸ ವಾರಪತ್ರಿಕೆ 'ತರಂಗ'ದ ನಂಟಿನಿಂದ. ಬಹುಬೇಗ ಮಣಿಪಾಲ ನನ್ನ ಬದುಕಿನ 'ಹೆಡ್‌ಕ್ವಾರ್ಟರ್ಸ್' ಆದದ್ದು ಒಂದು ರೀತಿಯ 'ಮಿರಕಲ್'.

ಅಂದಿನಿಂದ ಇಂದಿನವರೆಗೆ ಬೆಂಗಳೂರು – ಉಡುಪಿ – ಮಣಿಪಾಲ ಓಡಾಡುತ್ತ ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳಗಳನ್ನೂ ಜನಗಳನ್ನೂ, ಬದುಕನ್ನೂ – ನಡವಳಿಕೆಯನ್ನೂ ಗಮನಿಸುತ್ತಿದ್ದೇನೆ. ಬೆಂಗಳೂರಿಗೂ, ಮೈಸೂರಿಗೂ ಬಂದು ನೆಲೆಸುವ ದಕ್ಷಿಣ ಕನ್ನಡಿಗರು ಹಳೆ ಮೈಸೂರಿನ ಕೆಲವು ವ್ಯಕ್ತಿತ್ವಗಳನ್ನು ಮೈಗೂಡಿಸಿಕೊಂಡುಬಿಡುತ್ತಾರೆ. 'ಒರಿಜಿನಲ್' ದಕ್ಷಿಣ ಕನ್ನಡಿಗರನ್ನು ನೋಡಬೇಕಾದರೆ ಈ ತುಳುನಾಡಿನಲ್ಲಿ ಓಡಾಡಬೇಕು. ಕನ್ನಡಿಗರೇ, ಕರ್ನಾಟಕದವರೇ ಇವರೂ, ಆದರೂ ನಡೆ-ನುಡಿ-ಆಚಾರ-ವ್ಯವಹಾರಗಳಲ್ಲಿ ಎಷ್ಟೊಂದು ಭಿನ್ನವಾಗಿದ್ದಾರೆ ಅನಿಸುತ್ತದೆ.

ಮಂಗಳೂರು ಬೆಳೆಯುತ್ತಿರುವ ನಗರವೊಂದರ ನೋಟವನ್ನು ವರ್ಷದಿಂದ ವರ್ಷಕ್ಕೆ ಕಾಣಿಸುತ್ತಿರುವುದು ಕಂಡರೆ, ಉಡುಪಿ ನೆಗೆತ ಆಶ್ಚರ್ಯವನ್ನು ಉಂಟುಮಾಡುವಂತಾಗುತ್ತದೆ. ಇನ್ನೂ ಮೊನ್ನೆಮೊನ್ನೆ ಉಡುಪಿ ಬರೀ ಒಂದು ಯಾತ್ರಾ ಸ್ಥಳದಂತೆ ಕಂಡುಬಂದದ್ದು, ಈಗ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಲು ಪ್ರಾರಂಭಿಸಿದೆ ಅನ್ನಿಸುತ್ತದೆ. ಹೋಟಲ್ ಉದ್ಯಮಕ್ಕೆ ಗೌರವ ತಂದ ಉಡುಪಿ ಇದೀಗ ದೊಡ್ಡ ಹೋಟಲ್‌ಗಳನ್ನು ಕಾಣಿಸತೊಡಗಿದೆ. ಈ ಎರಡುಮೂರು ವರ್ಷಗಳಲ್ಲಿ ಅನೇಕ ಬೃಹತ್ ಕಟ್ಟಡ ಹೋಟಲ್‌ಗಳು ಉಡುಪಿಯಲ್ಲಿ ತಲೆಯೆತ್ತಿವೆ.

ಶ್ರೀಕೃಷ್ಣ ಮಠದ ಸುತ್ತಮುತ್ತಲು, ರಥಬೀದಿ, ಅಷ್ಟಮಠಗಳು, ಕಿರಿದಾದ ಏರಿಳಿತದ ಬೀದಿಗಳು, ತಿರುವುಗಳು, ರಸ್ತೆಗೆ ಅಂಟಿಕೊಂಡಂತೆ ಕಾಣುವ ವಾಸದ ಮನೆಗಳು, ಇಲ್ಲಿಯ ಜನರ ಉಡುಪಿತನದ ವ್ಯಕ್ತಿತ್ವ, ಇವೆಲ್ಲ ಇನ್ನೂ ನನ್ನಲ್ಲಿ ಕುತೂಹಲಗಳನ್ನು ಮೂಡಿಸುತ್ತಿವೆ. ಉಡುಪಿಯ ಕಿರಿದಾದ ರಾಜರಸ್ತೆಗಳಲ್ಲಿ 'ಭರ್' ಎಂದು ಖಾಸಗಿ ಬಸ್‌ಗಳು ರಭಸದಿಂದ ಚಲಿಸುವಾಗ, ಎರಡು ಬಸ್‌ಗಳು ಒಂದನ್ನೊಂದು ಹಾಯ್ದುಹೋಗುವಾಗ, ಎಲ್ಲಿ ಅಕ್ಕಪಕ್ಕದ ಮನೆಗಳ ಮುಂದಿನ ಒಪ್ಪಾರಗಳಿಗೆ ಈ ಬಸ್‌ಗಳು ತಗುಲಿಬಿಡುತ್ತವೆಯೊ ಅನ್ನಿಸುತ್ತದೆ. ಕೈ-ಮುಖಗಳನ್ನು ಕಿಟಕಿಯತ್ತ ಹೊರಗಿಡಲು ಭಯವಾಗುತ್ತದೆ. ಈ ಊರುಗಳಲ್ಲಿ ಎಲ್ಲಿಯೂ ನನಗೆ ಬಸ್ ಕಾಯುವ ಸಂದರ್ಭ ಬಂದಿಲ್ಲ. ಮುಂದಿನ ಬಸ್‌ನಲ್ಲಿ ಸೀಟಿಲ್ಲದಿದ್ದರೆ ಹಿಂದಿನ ಬಸ್‌ಗೆ ಹತ್ತುವುದು, ಅದೇನಾದರೂ ನಿಧಾನವಾದರೆ ಹಿಂದೆ ಇನ್ನೂ ಎರಡು ಬಸ್‌ಗಳು ನಿಂತಿವೆ. ಬೆಂಗಳೂರಿಗ ಇಂಥ ಕಾಯುವ ಬಸ್‌ಗಳ ಕನಸನ್ನು ಕಾಣುವುದು ಸಾಧ್ಯವಿಲ್ಲ. ಗಂಟೆಗಟ್ಟಲೆ ಕಾಯುವುದು ಅಭ್ಯಾಸ ಆಗಿಹೋಗಿದೆ. ನಾನು ಇಲ್ಲಿನ ಬಸ್‌ಗಳಲ್ಲಿ ಕಂಡ ಇನ್ನೊಂದು ಅತಿಶಯ: ಬೆಂಗಳೂರಿನಲ್ಲಿ 'ರೈಟ್' ಹೇಳಲು 'ಪೀಪೀ' ಎಂದು ಕಂಡಕ್ಟರ್ ಊದಿದರೆ ಇಲ್ಲಿ ಬಸ್ 'ಹೋಲ್ಡಾನ್' ಮಾಡಲು ಎರಡು ಸಲ ಕಂಡಕ್ಟರ್‌ಗಳು 'ವಿಷಲ್' ಊದುತ್ತಾರೆ. 'ರೈಟ್' ಎಂದು ರಾಗವಾಗಿ ಕೂಗಿ ದೀರ್ಘವಾದೊಂದು ಶಿಳ್ಳೆ ಹಾಕಿದಾಗ ಬಸ್ ಕಿರಿದಾರಿಗಳ ಅಕ್ಕಪಕ್ಕದ ಹೆಂಚುಗಳ ನಡುವೆ ಗಾಳಿಯಲ್ಲಿ ತೇಲಾಡಿಕೊಂಡು ಹೊರಟುಬಿಟ್ಟಿರುತ್ತದೆ.

ಸಾಂಸ್ಕೃತಿಕವಾಗಿ ಉಡುಪಿ ಬೆಳೆದಿರುವುದು, ಬೆಳೆಯುತ್ತಿರುವುದು, ಮಣಿಪಾಲದ ವಿವಿಧ ಕ್ಷೇತ್ರಗಳ ಸಾಧನೆ ನನ್ನಲ್ಲಿ ಯಾವಾಗಲೂ ಸಂತೋಷ ಮೂಡಿಸುವ ಅಂಶಗಳು. ಉಡುಪಿಯ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ರಾಜ್ಯದ, ರಾಷ್ಟ್ರೀಯ ಮಟ್ಟದ ಎಂಥ ದೊಡ್ಡ ಹೆಸರನ್ನಾದರೂ ಕರೆಸಿಬಿಡುವ ಛಾತಿ, ಮೂರುನಾಲ್ಕು ದಿನಗಳು ಅನೇಕ ಹಿರಿಯ ಸಾಹಿತಿಗಳ ಸಮ್ಮಿಲನ–ಚರ್ಚೆ, ನಾಟಕೋತ್ಸವಗಳು–ಕೆಲವೊಮ್ಮೆ ಬೆಂಗಳೂರು, ಮೈಸೂರುಗಳಲ್ಲೂ ನಡೆಯುವುದು ಅಪರೂಪ. ಉಡುಪಿಯ ಡಾ। ಗೋವಿಂದ ಪೈ ಸಂಶೋಧನಾ ಕೇಂದ್ರವಂತೂ ಕರ್ನಾಟಕಕ್ಕೆ ಹೆಮ್ಮೆ ತರಬಹುದಾದ ಸಾಧನೆ, ಭಾರತ



ದಲ್ಲಿ ಇರುವ ಇಂಥ ಕೆಲವೇ ಸಂಸ್ಥೆಗಳಲ್ಲಿ ಒಂದಾಗಿರ ಬಹುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕನ್ನಡ ಸಂಘಗಳು ತಾಲೂಕು ಮಟ್ಟದಲ್ಲೂ ಅದ್ಭುತವಾಗಿ ಕೆಲಸಮಾಡುತ್ತಿರುವುದು ಕನ್ನಡಿ ಗರೆಲ್ಲರೂ ಮೆಚ್ಚಿಕೊಳ್ಳ ಬೇಕಾದ ಅಂಶ. ಬಹುಶಃ ಇಲ್ಲಿರುವಷ್ಟು ಸಾಹಿತ್ಯ ಪ್ರತಿಷ್ಠಾನಗಳು, ಸಾಹಿತ್ಯಿಕ ಪ್ರಶಸ್ತಿಗಳು ಬೇರೊಂದು ಜಿಲ್ಲೆಯಲ್ಲಿ ಇರಲಾರದೇನೊ? (ಪ್ರಾಯಶಃ ಇಲ್ಲಿ ಕೊಡುಗೈ ದಾನಿಗಳು ತುಂಬಾ ಇರ ಬಹುದು, ಉತ್ಸಾಹೀ ಕಾರ್ಯ ಕರ್ತರ ದುಡಿಮೆಯೂ ಇರ ಬಹುದು). ವ್ಯವಹಾರದಲ್ಲಿ ಬೆಳೆಯುವ ಪ್ರಯತ್ನದಲ್ಲೆ ಕಾಣುವ ಜಿಲ್ಲೆ ಸಾಂಸ್ಕೃತಿಕ ವಾಗಿಯೂ ಹಿಂದುಳಿಯ ಬಯಸುವುದಿಲ್ಲ ಎಂದು ನಿರ್ಧರಿಸಿರುವಂತೆ ಇಲ್ಲಿ ಸಾಹಿತ್ಯಿಕ ಕಾರ್ಯಕ್ರಮಗಳು ನಡೆಯುತ್ತವೆ. (ಯಾವುದಾ ದರೂ ಹೆಸರು ಬಿಟ್ಟುಹೋಗ ಬಹುದು ಎನ್ನುವ ಭಯ ದಿಂದ ಇಲ್ಲಿ ನನಗೆ ತಿಳಿದಿರುವ ಕನ್ನಡ ಸಂಘಗಳ—ಪ್ರತಿಷ್ಠಾನ ಗಳ ಹೆಸರುಗಳನ್ನು ಕಾಣಿಸು ತ್ತಿಲ್ಲ.)

ದಕ್ಷಿಣ ಕನ್ನಡ ಜಿಲ್ಲೆಯ ದಟ್ಟ ಹಸಿರು, ಏರಿಳಿತದ ತಿರುವು ರಸ್ತೆಗಳು, ಇಲ್ಲಿನ ವಿಶಿಷ್ಟ – ಸಾಂಪ್ರದಾಯಿಕ ವಾಸದ ಮನೆಗಳು—ಸಾರ್ವ ಜನಿಕ ಕಟ್ಟಡಗಳು, ಎಲ್ಲೆಂದ ರಲ್ಲಿ ಭೋರ್ಗರೆಯುವ ಸಮುದ್ರ, ದೈವಗಳು—ಭೂತ ಗಳು, ಆಚರಣೆಗಳು—ನನ್ನಲ್ಲಿ ಹೊಸ ಹೊಸ ಭಾವನೆಗಳನ್ನು ಮೂಡಿಸುತ್ತಿರುತ್ತವೆ. ದಕ್ಷಿಣ ಕನ್ನಡ ಜಿಲ್ಲೆಯ ಒಂದೊಂದು ಪ್ರದೇಶದಲ್ಲೂ ಓಡಾಡಬೇಕು, ಎಲ್ಲವನ್ನೂ ನೋಡಬೇಕು, ಎಲ್ಲವನ್ನೂ ತಿಳಿದುಕೊಳ್ಳ ಬೇಕು ಎನ್ನುವ ಆಕಾಂಕ್ಷೆ ಹೆಚ್ಚಾಗುತ್ತಿದೆ.

ನಾನೀಗ ಭಾಗಶಃ, ದಕ್ಷಿಣ ಕನ್ನಡಿಗನೇ ಆಗಿಹೋಗಿ ದ್ದೇನೆ. ಪ್ರತಿ ತಿಂಗಳೂ ಕೆಲದಿನ ಇಲ್ಲಿಯ ವಾತಾವರಣ ದಲ್ಲಿ, ದಕ್ಷಿಣ ಕನ್ನಡಿಗ ಗೆಳೆಯರೊಂದಿಗೆ ದುಡಿತ, ಕೊಂಕಣಿ – ತುಳು ಭಾಷೆಗಳ ಪರಿಸರದಲ್ಲಿ, ಇಲ್ಲಿನ ಬಿಸಿಲು—ಬೆವರು, ಥಟ್ಟನೆ ಬರುವ ಮಳೆ, ಶ್ರೀಕೃಷ್ಣ ದರ್ಶನ, ಹೊಂದಿಕೊಳ್ಳುವ ಊಟ—ತಿಂಡಿ ಗಳಿಗಾಗಿ ಪ್ರಯತ್ನ, ಅಪರೂಪವಾಗೊಂದು ಯಕ್ಷ ಗಾನ ಪ್ರಸಂಗದ ನೋಟ—ಇವೆಲ್ಲ ನನ್ನ ಬದುಕಿನ ಅವಿಭಾಜ್ಯ ಅಂಗಗಳಾಗು ತ್ತಿವೆ. ಸಂತಸದ ಕ್ಷಣ ಗಳಾಗುತ್ತಿವೆ. ●

Edited, Printed and Published by T. Satish U. Pai, at Udayavani Press, for the Proprie
The Manipal Printers and Publishers Ltd., Manipal-576 119

